# ತುಮಕೂರು ಜಿಲ್ಲೆಯ ತಳಸಮುದಾಯಗಳು

## ಚಾರಿತ್ರಿಕ ಮತ್ತು ಸಮಾಜೋ-ಆರ್ಥಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)

ಸಂಶೋಧನಾ ವಿದ್ಯಾರ್ಥಿನಿ
ವೀಣಾಕುಮಾರಿ ಡಿ.ಎಂ.



ಮಾರ್ಗದರ್ಶಕರು
ಡಾ. ಎನ್.ಚಿನ್ನಸ್ವಾಮಿ ಸೋಸಲೆ
ಪ್ರಾಧ್ಯಾಪಕರು



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೮

# ತುಮಕೂರು ಜಿಲ್ಲೆಯ ತಳಸಮುದಾಯಗಳು

## ಚಾರಿತ್ರಿಕ ಮತ್ತು ಸಮಾಜೋ-ಆರ್ಥಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸಿದ ಮಹಾಪ್ರಬಂಧ)



ಸಂಶೋಧನಾ ವಿದ್ಯಾರ್ಥಿನಿ

**ವೀಣಾಕುಮಾರಿ ಡಿ.ಎಂ.**

ಮಾರ್ಗದರ್ಶಕರು

**ಡಾ. ಎನ್.ಚಿನ್ನಸ್ವಾಮಿ ಸೋಸಲೆ**

ಪ್ರಾಧ್ಯಾಪಕರು



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩೨೭೬

೨೦೧೮

## ಮಾರ್ಗದರ್ಶಕರ ದೃಢೀಕರಣ ಪತ್ರ

ವೀಣಾಕುಮಾರಿ ಡಿ.ಎಂ. ಇವರು ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ತುಮಕೂರು ಜಿಲ್ಲೆಯ ತಳಸಮುದಾಯಗಳು: ಚಾರಿತ್ರಿಕ ಮತ್ತು ಸಮಾಜೋ–ಆರ್ಥಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಚರಿತ್ರೆ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

13.03.18

**ಡಾ. ಎನ್.ಚಿನ್ನಸ್ವಾಮಿ ಸೋಸಲೆ**
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

ಸ್ಥಳ: ವಿದ್ಯಾರಣ್ಯ
ದಿನಾಂಕ: 13.03.18

# ಸಂಶೋಧಕರ ಘೋಷಣಾ ಪತ್ರ

**ತುಮಕೂರು ಜಿಲ್ಲೆಯ ತಳಸಮುದಾಯಗಳು: ಚಾರಿತ್ರಿಕ ಮತ್ತು ಸಮಾಜೋ-ಆರ್ಥಿಕ ಅಧ್ಯಯನ** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಚರಿತ್ರೆ ವಿಭಾಗದ, ಪ್ರಾಧ್ಯಾಪಕರಾದ **ಡಾ. ಎನ್.ಚಿನ್ನಸ್ವಾಮಿ ಸೋಸಲೆ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

Veena

**ವೀಣಾಕುಮಾರಿ ಡಿ.ಎಂ.**
ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿನಿ
**ಚರಿತ್ರೆ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**

**ಸ್ಥಳ :** ವಿದ್ಯಾರಣ್ಯ
**ದಿನಾಂಕ :** 13/03/2018

# ಪರಿವಿಡಿ

# ಅಧ್ಯಾಯ ಒಂದು

## ಪ್ರಸ್ತಾವನೆ

೧.೧. ಅಧ್ಯಯನದ ಉದ್ದೇಶ
೧.೨. ಅಧ್ಯಯನದ ವ್ಯಾಪ್ತಿ
೧.೩ ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ
೧.೪ ಅಧ್ಯಯನದ ವಿಧಾನ
೧.೫ ಅಧ್ಯಯನದ ಸ್ವರೂಪ

## ಅಧ್ಯಾಯ ಒಂದು

# ಪ್ರಸ್ತಾವನೆ

ಪ್ರಸ್ತುತ ಅಧ್ಯಯನ ತುಮಕೂರು ಜಿಲ್ಲೆಯ ತಳಸಮುದಾಯಗಳ ಚಾರಿತ್ರಿಕ, ಸಾಮಾಜಿಕ ಮತ್ತು ಆರ್ಥಿಕ ಅಧ್ಯಯನಗಳನ್ನು ಒಳಗೊಂಡ ಬಹುಮುಖಿ ಅಧ್ಯಯನ. ವಸಾಹತು ಕಾಲಘಟ್ಟದ ವರೆಗಿನ ಚರಿತ್ರೆಯು ರಾಜಪ್ರಭುತ್ವ ಹಾಗೂ ಧಾರ್ಮಿಕ ಪ್ರಭುತ್ವ ಕೇಂದ್ರಿತ ಚರಿತ್ರೆ ರಚನೆಯೇ ಆಗಿತ್ತು. "ಚರಿತ್ರೆಯುದ್ದಕ್ಕೂ ತಮ್ಮದೇ ಆದ ಅಜೆಂಡಾಗಳನ್ನು ಹೊಂದಲು ಸಾಧ್ಯವಾಗದೆ ತಳಸಮುದಾಯಗಳಿಗೆ ಪ್ರಜಾಪ್ರಭುತ್ವ ಸಹಜವಾಗಿಯೇ ಆಶಾದಾಯಕವಾಗಿ ಕಂಡುಬಂದಿದೆ."[೧] ರಾಜಪ್ರಭುತ್ವ ಹಾಗೂ ಧಾರ್ಮಿಕ ಪ್ರಭುತ್ವದ ಉಸಿರುಗಟ್ಟುವ ವಾತಾವರಣದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಹೋರಾಡಿದ ತಳಸಮುದಾಯಗಳಿಗೆ ಸ್ವಂತ ಅಜೆಂಡಾಗಳನ್ನು ಹೊಂದುವುದು ಸಾಧ್ಯವಾಗಿಲ್ಲ.

"ಪ್ರಭುತ್ವ, ಚರಿತ್ರೆಯನ್ನು ತನಗೆ ಬೇಕಾದ ರೀತಿಯಲ್ಲಿ ನಿರ್ಮಿಸುವ, ತನಗೆ ಬೇಡವಾದ ವಿಚಾರಗಳನ್ನು ತೆಗೆದುಹಾಕುವ ಹಾಗೂ ತಿದ್ದುವ ಕೆಲಸವನ್ನು ನಿರಂತರವಾಗಿ ಮಾಡುತ್ತಲೇ ಬಂದಿದೆ. ಇದು ಚರಿತ್ರೆಯ ವ್ಯಾಪ್ತಿಯನ್ನು ಕುಗ್ಗಿಸಿದ್ದೇ ಅಲ್ಲದೆ, ಚರಿತ್ರೆಯೆಂದರೆ ಅದು ಪ್ರಭುತ್ವದ್ದು ಅಥವಾ ಅಧಿಕಾರ, ಸವಲತ್ತು ಹಾಗೂ ಬರವಣಿಗೆ ಅಥವಾ ಲಿಖಿತ ಪರಂಪರೆಯನ್ನು ಹೊಂದಿದ ಸಮದಾಯಗಳದ್ದು ಎನ್ನುವ ಸೀಮಿತ ನೆಲೆಯ ಅರ್ಥವನ್ನು ನೀಡಿತು."[೨] ಚರಿತ್ರೆಯಲ್ಲಿ ಇದುವರೆಗೆ ದಾಖಲಾಗಿರುವ ವಿಚಾರಗಳಲ್ಲದೆ, ದಾಖಲಾಗದೇ ಇರುವ ವಿಚಾರಗಳು ಚರಿತ್ರೆಯ ವ್ಯಾಪ್ತಿಯೊಳಗೆ ಬರುವಂಥದ್ದೇ ಆಗಿವೆ. ಸಮಾಜ ಸಮುದಾಯ, ಸರ್ಕಾರ ಇವೆಲ್ಲಾ ಒಂದಲ್ಲ ಒಂದು ರೀತಿಯಲ್ಲಿ ಚರಿತ್ರೆಯ ಮೂಲಕವೇ ಜೀವಿಸುತ್ತಿರುತ್ತವೆ ಎಂಬುದು ವಾಸ್ತವ. ಇವುಗಳನ್ನು ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಚರಿತ್ರೆಯ ವಿಶಾಲವಾದ ವ್ಯಾಪ್ತಿ ಚರಿತ್ರೆ ಅಧ್ಯಯನದಿಂದ ದೂರವೇ ಉಳಿಯಬೇಕಾಯಿತು ಎನ್ನುವುದು ಒಂದು ವಿಚಾರವಾದರೆ, ಚರಿತ್ರೆಕಾರ ತಾನು

ಆಯ್ಕೆ ಮಾಡಿಕೊಂಡ ಸೀಮಿತ ವಿಷಯಗಳನ್ನು ಸ್ವತಂತ್ರವಾಗಿ, ನಿರ್ಭಯವಾಗಿ ಹಾಗೂ ಸಮರ್ಥವಾಗಿ ಮಂಡಿಸುವಲ್ಲೂ ಕಷ್ಟಪಡಬೇಕಾಗುತ್ತದೆ. ಪ್ರಭುತ್ವದ ಮೂಲಕ ಚರಿತ್ರೆಯನ್ನು ನೋಡುವುದಕ್ಕೂ ಹಾಗೂ ಪ್ರಭುತ್ವಕ್ಕಾಗಿ ದುಡಿದ ತಳ ಸಮುದಾಯಗಳ ಮೂಲಕ ಚರಿತ್ರೆಯನ್ನು ನೋಡುವುದಕ್ಕೂ ಸಾಕಷ್ಟು ವ್ಯತ್ಯಾಸಗಳಿವೆ.

"ಶ್ರೇಣೀಕೃತ ಸಾಮಾಜಿಕ ರಚನೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ತಳಸಮುದಾಯಗಳು ಯಾವ ರೀತಿ ನಿರ್ಲಕ್ಷ್ಯಕ್ಕೆ ಒಳಗಾದವೋ ಅದೇ ರೀತಿ ಪ್ರಭುತ್ವ ಕೇಂದ್ರಿತ ಚರಿತ್ರೆ ಬರವಣಿಗೆಗಳಲ್ಲೂ ನಿರ್ಲಕ್ಷ್ಯಕ್ಕೆ ಒಳಗಾದವು. ಲಿಖಿತ ಕಾವ್ಯಗಳು, ಶಾಸನಗಳು, ನಾಣ್ಯಗಳು, ಸ್ಮಾರಕಗಳು ಮುಂತಾದವು ಪ್ರಭುತ್ವದ ವೈಭವೀಕರಣಕ್ಕೆ ಬಳಕೆಯಾದವು."[೩] ಈ ಹೇಳಿಕೆ ಚರಿತ್ರೆ ರಚನೆಯನ್ನು ಸೂಚಿಸುತ್ತದೆ. ಆದರೆ ಇದೇ ಆಕರಗಳಿಂದ ರಾಜಪ್ರಭುತ್ವ ಹಾಗೂ ಧಾರ್ಮಿಕ ಪ್ರಭುತ್ವಗಳು ಜನರನ್ನು ಯಾವ ರೀತಿಯಲ್ಲಿ ನಿಯಂತ್ರಣದಲ್ಲಿ ಇಟ್ಟುಕೊಂಡಿದ್ದವು ಎನ್ನುವ ಜನರ ಇತಿಹಾಸಕ್ಕೆ ಬೇಕಾದ ಪ್ರಮುಖ ಅಂಶಗಳನ್ನು ತಿಳಿಯಬಹುದಾಗಿದೆ. ಆದ್ದರಿಂದಾಗಿ ಶಾಸನಗಳು, ಲಿಖಿತ ಕಾವ್ಯಗಳು ಹಾಗೂ ಸ್ಮಾರಕಗಳು ಪ್ರಭುತ್ವ ಕೇಂದ್ರಿತ ವಿವರಗಳನ್ನಷ್ಟೇ ಹೊಂದಿರುತ್ತವೆ ಎನ್ನುವುದು ತಪ್ಪು ಅಭಿಪ್ರಾಯವಾಗಿದೆ. ಎಲ್ಲಿಯೂ ಸಹ ತಳಸಮುದಾಯಗಳ ಪ್ರತಿಕ್ರಿಯೆ, ಪ್ರತಿರೋಧಗಳು, ಸಂವೇದನೆಗಳು, ಉಲ್ಲೇಖಗಳು, ಅಭಿವ್ಯಕ್ತಗೊಂಡ ವ್ಯಾಖ್ಯಾನ ವಿಶ್ಲೇಷಣೆಗಳು ದೊರೆಯುವುದೇ ಇಲ್ಲ. ಈಗಾಗಲೇ ಒಪ್ಪಿತವಾದ ಚರಿತ್ರೆ ಬರವಣಿಗೆ ಪುನರ್ ವ್ಯಾಖ್ಯಾನಗೊಳ್ಳಲು ಮೌಖಿಕ ರಚನೆಗಳ ಸಂಗ್ರಹ ಹಾಗೂ ವಿಶ್ಲೇಷಣೆ ಅತ್ಯಂತ ಅನಿವಾರ್ಯವಾಗಿದೆ. ಇಂತಹ ಕೊರತೆಗಳನ್ನು ಈ ಹೊತ್ತಿನ ಸಬಾಲ್ಟರ್ನ್ ಅಧ್ಯಯನಕಾರರು, ಚಿಂತಕರು ತುಂಬಿಕೊಡಲು ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಇತ್ತೀಚೆಗೆ ಚರಿತ್ರೆಯ ಶಿಸ್ತಿನವರಲ್ಲೂ ತಳಸಮುದಾಯಗಳ ಪರವಾದ ದೃಷ್ಟಿಕೋನದ ಅಧ್ಯಯನಗಳು ನಡೆಯುತ್ತಿವೆ.

ಚಿನ್ನಸ್ವಾಮಿ ಸೋಸಲೆ ಅವರು **ಡಾ.ಬಿ.ಆರ್.ಅಂಬೇಡ್ಕರ್** ಅವರನ್ನು **"ಸಬಾಲ್ಟರ್ನ್ ಚರಿತ್ರೆಕಾರ"**[೪] ಎಂದು ಕರೆದಿದ್ದಾರೆ. ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಇದುವರೆಗೆ ಚರಿತ್ರೆಯಲ್ಲಿ ದಾಖಲಾಗದೆ ಇದ್ದಂತಹ, ಅಧಿಕಾರ ಮತ್ತು ಸವಲತ್ತುಗಳಿಂದ ವಂಚಿತರಾಗಿದ್ದಂತಹ ತಳಸಮುದಾಯಗಳ ಬದುಕನ್ನು ಕುರಿತು ತಮ್ಮ ಬರಹಗಳು ಮತ್ತು ಭಾಷಣಗಳು ಸಂಪುಟಗಳಲ್ಲಿ ವಿಶ್ಲೇಷಣೆ ಮಾಡಿದ್ದಾರೆ. ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ತಳಸಮುದಾಯಗಳ ಅಧಿಕಾರ, ಅಂತಸ್ತು, ಸವಲತ್ತು, ವೃತ್ತಿ ಹಾಗೂ ಯೋಗ್ಯತೆ ಯಾವ ರೀತಿ ಮೊದಲೇ ತೀರ್ಮಾನವಾಗಿರುತ್ತದೆ ಎಂಬುದನ್ನು ಚರ್ಚಿಸಿದ್ದಾರೆ. ಚರಿತ್ರೆ ಸಮಾಜವನ್ನು ಪ್ರತಿನಿಧಿಸುತ್ತಿರುತ್ತದೆ ಎನ್ನುವುದಕ್ಕಿಂತ ಸಮಾಜದಲ್ಲಿನ ಶ್ರೇಣೀಕೃತ ವ್ಯವಸ್ಥೆಯನ್ನು ಪ್ರತಿನಿಧಿಸುತ್ತದೆ ಎನ್ನುವುದು ಸೂಕ್ತವಾಗಿದೆ.

ಚರಿತ್ರೆ ರಚನೆಯಲ್ಲಿ ಅಂತಿಮವಾದದ್ದು ಯಾವುದು ಇಲ್ಲ. ಅದು ಪುನಾರಚನೆಗೊಳ್ಳುತ್ತಾ ಹೋದಂತೆ ಇನ್ನಷ್ಟು ವಿಸ್ತಾರಗೊಳ್ಳುತ್ತಾ ಹಾಗೂ ತಲಸ್ಪರ್ಶಿಯಾಗುತ್ತಾ ಹೋಗುವುದನ್ನು ಗಮನಿಸಬಹುದು. ಆದ್ದರಿಂದಾಗಿ ಚರಿತ್ರೆ ಎನ್ನುವಂಥದ್ದು ನಿಂತ ನೀರಲ್ಲ. ಅದು ಬದಲಾವಣೆಗೆ ಒಳಪಡುತ್ತಿರುತ್ತದೆ ಅಥವಾ ಪುನರ್‌ರಚನೆಗೊಳ್ಳುತ್ತಿರುತ್ತದೆ. "ಹೈಡನ್ ವೈಟ್, ಡೆರಿಡಾ, ಘುಕೊ, ಸ್ಟಿಪನ್ ಗ್ರೀನ್‌ಬ್ಲಾಟ್ ಮುಂತಾದ ಬರಹಗಾರರು ಚರಿತ್ರೆಯನ್ನು ನಿರಂತರ ರಚನೆಗೆ ಒಳಗಾಗುತ್ತಿರುವ ಶಿಸ್ತು ಎಂಬುದಾಗಿ ವ್ಯಾಖ್ಯಾನಿಸಿದ್ದಾರೆ. ಇವರೆಲ್ಲರೂ ಚರಿತ್ರೆಯನ್ನು ಗತದ ಚೌಕಟ್ಟಿನಿಂದ ಹೊರಗೆಳೆಯುವ ಹಾಗೂ ಚರಿತ್ರೆಗೆ ಮತ್ತು ಚರಿತ್ರೆಕಾರರಿಗೆ ಸ್ವಾತಂತ್ರ್ಯ ತುಂಬುವ ಪ್ರಯತ್ನವನ್ನು ಮಾಡಿದ್ದಾರೆ."[೫] ಒಂದು ವಿಷಯವನ್ನು ಬಹುಮುಖಿ ನೆಲೆಯಲ್ಲಿ ನೋಡುವ ಹಾಗೂ ವಿಷಯದೊಳಗಡೆಗೇ ಇರುವ ಆದರೆ ವಿಷಯವನ್ನು ಮೀರುವ ಅಥವಾ ವಿರೋಧಿಸುವ ಅಂಶಗಳನ್ನು ಪತ್ತೆಹಚ್ಚುವ ಪ್ರಯತ್ನವನ್ನು ಆಧುನಿಕೋತ್ತರವಾದ ಮಾಡಿದೆ. ಆಧುನಿಕೋತ್ತರವಾದಿಗಳ ಪ್ರಕಾರ ಚರಿತ್ರೆ ಎನ್ನುವುದು ಒಂದು ಖಚಿತವಾದ ಆಕೃತಿ ಅಲ್ಲ, ಹಾಗಾಗಿ ಅವರು ಚರಿತ್ರೆಯ ಸಿದ್ಧ ಮಾದರಿಗಳನ್ನು ಪ್ರಶ್ನಿಸಿದ್ದಾರೆ.

ಸಬಾಲ್ಟರ್ನ್ ಅಧ್ಯಯನ ಚರಿತ್ರೆ ಬರವಣಿಗೆಯಲ್ಲಿ ಪ್ರಧಾನ ಪಾತ್ರವಹಿಸುತ್ತಿದೆ. ಸಾಮ್ರಾಜ್ಯವಾದಿ, ರಾಷ್ಟ್ರೀಯವಾದಿ, ಮಾರ್ಕ್ಸಿಸ್ಟ್, ಕೇಂಬ್ರಿಡ್ಜ್ ವಿದ್ವಾಂಸರ ಸೈದ್ಧಾಂತಿಕತೆಯನ್ನು ಪ್ರಶ್ನಿಸುವ ಕೆಲಸವನ್ನು ಸಬಾಲ್ಟರ್ನ್ ಅಧ್ಯಯನ ಮಾಡುತ್ತಿದೆ. ತಳಸಮುದಾಯಗಳ ಧ್ವನಿಗಳು ಸಬಾಲ್ಟರ್ನ್ ಅಧ್ಯಯನದಲ್ಲಿ ಪ್ರತಿಧ್ವನಿಗಳಾಗುತ್ತಿವೆ. "ಇಟಲಿಯಲ್ಲಿ ಆ್ಯಂಟೋನಿಯೊ ಗ್ರಾಂಸಿಯು ವ್ಯಕ್ತಪಡಿಸಿದ ಸೈದ್ಧಾಂತಿಕತೆಗೆ ದಕ್ಷಿಣ ಏಷಿಯಾದ ಸಂದರ್ಭದಲ್ಲಿ ಆ ಸೈದ್ಧಾಂತಿಕತೆಗೆ ಪ್ರಖರತೆಯನ್ನು ಕೊಟ್ಟವರು ರಣಜಿತ್ ಗುಹಾ, ಫಾರ್ಥ ಚಟರ್ಜಿ, ಸುಮಿತ್ ಸರ್ಕಾರ್, ದೀಪೇಶ್ ಚಕ್ರವರ್ತಿ, ಡೇವಿಡ್ ಹಾರ್ಡಿಯನ್, ಡೇವಿಡ್ ಆರ್ನಲ್ಡ್ ಮೊದಲಾದವರು."[೬] ಅವರಲ್ಲಿ ಹೆಚ್ಚಿನವರು ಇತಿಹಾಸಜ್ಞರು. "ಒಪ್ಪಿತವಾದ ಚರಿತ್ರೆಯಲ್ಲಿ' ದಾಖಲಾಗದೆ ಉಳಿದ ಕೆಳಜಾತಿ/ವರ್ಗ/ಸಮುದಾಯಗಳ ಚರಿತ್ರೆಯನ್ನು, ಈ ಗುಂಪುಗಳು ವಸಾಹತುಶಾಹಿಗೆ ಮತ್ತು ಸ್ಥಳೀಯ ಬಲಾಢ್ಯ ವರ್ಗಗಳಿಗೆ ಒಡ್ಡಿದ ಪ್ರತಿಭಟನೆ/ಪ್ರತಿರೋಧಗಳನ್ನು ಆಧರಿಸಿ ಮೂಲೆಗೊತ್ತಲ್ಪಟ್ಟ ವ್ಯಕ್ತಿಗಳ/ಸಮುದಾಯಗಳ ಧ್ವನಿಗಳನ್ನು ಸಬಾಲ್ಟರ್ನ್ ಅಧ್ಯಯನ ಸಂಪುಟಗಳಲ್ಲಿ ಗುಹಾ ಮತ್ತು ಅವರ ಸಂಗಡಿಗರು ಅಸಾಂಪ್ರದಾಯಿಕ ರೀತಿಯಲ್ಲಿ ದಾಖಲು ಮಾಡಿದ್ದಾರೆ."[೭] ಸಬಾಲ್ಟರ್ನ್ ಅಧ್ಯಯನ ಇಂದು ಸಮಾಜ ವಿಜ್ಞಾನಗಳಲ್ಲಿ ಮಾತ್ರವಲ್ಲದೆ ಸಾಹಿತ್ಯ ವಲಯಗಳಲ್ಲಿ ಕೂಡ ತನ್ನ ವ್ಯಾಪ್ತಿಯನ್ನು ವಿಸ್ತರಿಸಿದೆ.

ಈ ಹಿನ್ನೆಲೆಯ ಚರಿತ್ರೆ ರಚನೆಯಲ್ಲಿ ತಳಸಮುದಾಯದ ವಿಷಯ ಕುರಿತು ವಸ್ತುನಿಷ್ಠವಾದ ಅಧ್ಯಯನವನ್ನು ಇಲ್ಲಿ ಕೈಗೊಳ್ಳಲಾಗಿದೆ. ರಾಜ್ಯದ ಇನ್ನಿತರ ಜಿಲ್ಲೆಗಳಂತೆ ತುಮಕೂರು ಜಿಲ್ಲೆಯು ಇರದೆ, ಭೌಗೋಳಿಕ ಹಾಗೂ ಸಾಂಸ್ಕೃತಿಕವಾಗಿ ವಿಶಿಷ್ಟ ಸ್ಥಾನ ಪಡೆದಿದೆ. ರಾಜ್ಯದ

ರಾಜಧಾನಿ ಬೆಂಗಳೂರಿಗೆ ಸುಮಾರು ೭೦ ಕಿ.ಮೀ.ಗಳ ಅಂತರದಲ್ಲಿದ್ದು, ಒಂದು ರೀತಿಯಲ್ಲಿ ಬೆಂಗಳೂರಿಗೆ ಹೆಬ್ಬಾಗಿಲಿನಂತಿದ್ದರೂ ಸಹ ಇನ್ನೂ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಗಳ ಸಾಲಿನಲ್ಲಿ ಪೈಪೋಟಿ ನಡೆಸುತ್ತಿದೆ.

ತಳಸಮುದಾಯಗಳು ಚರಿತ್ರೆಯ ಯಾವುದೋ ಒಂದು ಕಾಲಘಟ್ಟದಲ್ಲಿ ರೂಪುಗೊಂಡಿಲ್ಲ. ಅವು ಚರಿತ್ರೆಯುದ್ದಕ್ಕೂ ಜೀವಂತಿಕೆಯಿಂದ ಹಾಗೂ ಅತ್ಯಂತ ಕ್ರಿಯಾಶೀಲವಾಗಿ ಇದ್ದಂಥವು ಗಳಾಗಿವೆ. ಅವು ಸಮಾಜದಿಂದ ಅಂಚಿಗೆ ತಳ್ಳಲ್ಪಟ್ಟವು. ತಳಸಮುದಾಯಗಳು ತಮಗೆ ತಾವೇ ಅಲಕ್ಷಿತ ಅಥವಾ ತಳಸಮುದಾಯಗಳಲ್ಲ. "ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳು ಪ್ರಭುತ್ವಕ್ಕೆ ಅತ್ಯಂತ ಅನಿವಾರ್ಯವಾಗಿದ್ದವು. ಈ ಸಮುದಾಯಗಳ ನೆರವಿಲ್ಲದೆ ಯಾವ ರಾಜ್ಯವು ಅಸ್ತಿತ್ವಕ್ಕೆ ಬರಲು ಸಾಧ್ಯವೇ ಇರಲಿಲ್ಲ. ಯಾವ ರಾಜನೂ ಚಕ್ರವರ್ತಿಯಾಗಿ ಮೆರೆಯಲು ಸಾಧ್ಯವಿರಲಿಲ್ಲ. ತಳಸಮುದಾಯಗಳು ಶೋಷಣೆ, ದೌರ್ಜನ್ಯ, ಬಡತನ ಮೊದಲಾದವುಗಳಿಂದ ನೊಂದಿದ್ದರೂ ಆತ್ಮವಿಶ್ವಾಸವನ್ನು ಕಳೆದುಕೊಳ್ಳಲಿಲ್ಲ. ತಮ್ಮದೇ ಆದ ಮನರಂಜನೆ, ಕ್ರೀಡೆ, ಸಂಪ್ರದಾಯ, ಆಚರಣೆ ಹಾಗೂ ಹಾಡುಗಳ ಮೂಲಕ ಬದುಕನ್ನು ಜೀವಂತವಾಗಿರಿಸಿ ಕೊಂಡಿವೆ."[೮] ಶತಮಾನಗಳಿಂದ ಅವು ಶೋಷಣೆಯ ನಡುವೆಯೇ ತಮ್ಮ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿವೆ ಎನ್ನುವುದು ಆ ಸಮುದಾಯಗಳ ಸಾಮರ್ಥ್ಯವನ್ನು ತೋರಿಸುತ್ತದೆ. ಅಂಚಿಗೆ ತಳ್ಳಲ್ಪಟ್ಟ ಸಮುದಾಯಗಳು ಆಯಾ ಸಂದರ್ಭದ ರಾಜಪ್ರಭುತ್ವ ಹಾಗೂ ಧಾರ್ಮಿಕ ಪ್ರಭುತ್ವಗಳ ಸಿದ್ಧಾಂತಕ್ಕೆ ಒಳಗಾಗಿರುತ್ತವೆ. ಅವು ತಾವಾಗಿಯೇ ಸ್ವೀಕರಿಸದಿದ್ದರೂ, ಸ್ವೀಕರಿಸುವ ಒತ್ತಡಕ್ಕೆ ಒಳಗಾಗಿರುತ್ತವೆ. ಪ್ರಭುತ್ವ ಎನ್ನುವುದು ತಳಸಮುದಾಯಗಳನ್ನು ಒಪ್ಪಿಸುವುದರ ಮೂಲಕ ನಿರ್ಮಾಣಗೊಂಡಿರುತ್ತದೆ. ಹೀಗಿರುವಾಗ ಈ ಸಮುದಾಯಗಳ ಚೌಕಟ್ಟಿನೊಳಗೆ ಹಾಗೂ ಹೊರಗೆ ಹುಡುಕುವ ಪ್ರಯತ್ನ ಅನಿವಾರ್ಯವಾಗುತ್ತದೆ. ತುಮಕೂರು ಜಿಲ್ಲೆಯ ಚರಿತ್ರೆಯಲ್ಲಿ ತಳಸಮುದಾಯಗಳ ಅಧ್ಯಯನದ ಸಾಧ್ಯತೆಗಳನ್ನು ಗುರುತಿಸುವ ಪ್ರಯತ್ನಗಳು ನಡೆದಿರುವುದು ವಿರಳ. ಇಂಥ ಕೊರತೆಯನ್ನು ನೀಗಿಸುವ ಪ್ರಯತ್ನವೇ ಪ್ರಸ್ತುತ ಅಧ್ಯಯನದ ಆಶಯ.

### ೧.೧. ಅಧ್ಯಯನದ ಉದ್ದೇಶ

ಚರಿತ್ರೆ ಅಧ್ಯಯನವು ಇಂದು ವೈಚಾರಿಕ ಮತ್ತು ವೈಜ್ಞಾನಿಕ ದೃಷ್ಟಿಕೋನದತ್ತ ಸಾಗಿದೆ. ವಸಾಹತು ಕಾಲಘಟ್ಟವು ಒಂದು ಸಂಕ್ರಮಣ ಕಾಲಘಟ್ಟವಾಗಿತ್ತು. ಇಂತಹ ಕಾಲಘಟ್ಟದ ವಿವಿಧ ಮಗ್ಗಲುಗಳಾದ ಸಾಮಾಜಿಕತೆ, ಬ್ರಿಟೀಷ್ ನೀತಿಗಳು, ಆರ್ಥಿಕತೆ, ರಾಜಕೀಯ ಸಂಘರ್ಷಗಳ

ಬಗೆಗೆ ಅಧ್ಯಯನಗಳು ಇಂದು ಹೆಚ್ಚು ಹೆಚ್ಚು ನಡೆದಿವೆ ಹಾಗೂ ನಡೆಯುತ್ತಲಿವೆ. ಅದೇ ಸಂದರ್ಭದಲ್ಲಿ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ, ಧಾರ್ಮಿಕ, ರಾಜಕೀಯ ಕ್ಷೇತ್ರಗಳಲ್ಲಿ ಬದಲಾವಣೆಗಳು ಕಾಣಿಸಿಕೊಂಡವು. ಇವೆಲ್ಲವೂ ತಳಸಮುದಾಯಗಳ ಮೇಲೆ ಬೀರಿದ ಪ್ರಭಾವ ಅಪಾರವಾದುದು. ಪ್ರಸ್ತುತ ಅಧ್ಯಯನವು ಹಲವಾರು ಉದ್ದೇಶಗಳನ್ನು ಹೊಂದಿದೆ.

* ಚರಿತ್ರೆಯುದ್ದಕ್ಕೂ ಜೀವಂತಿಕೆಯಿಂದ ಹಾಗೂ ಅತ್ಯಂತ ಕ್ರಿಯಾಶೀಲವಾಗಿ ಇದ್ದಂತಹ ತಳಸಮುದಾಯಗಳು ಸಮಾಜದ ಅಂಚಿಗೆ ಹೇಗೆ ತಳ್ಳಲ್ಪಟ್ಟವು? ಅಸ್ಪೃಶ್ಯತೆಯ ಮೂಲ ಯಾವುದು? ಅದರ ಹಿಂದಿರುವ ಕಾರಣಗಳೇನು? ಎಂಬ ಪ್ರಶ್ನೆಗಳಿಗೆ ಉತ್ತರ ಹುಡುಕುವ ಉದ್ದೇಶವನ್ನು ಹೊಂದಿದೆ.
* ತಳಸಮುದಾಯಗಳು ಶೋಷಣೆ, ದೌರ್ಜನ್ಯ, ಬಡತನ ಮುಂತಾದವುಗಳಿಂದ ನೊಂದಿದ್ದರೂ ಕೂಡ, ತಮ್ಮದೇ ಆದ ಮನರಂಜನೆ, ಕ್ರೀಡೆ, ಸಂಪ್ರದಾಯ, ಆಚರಣೆ ಹಾಗೂ ಹಾಡುಗಳ ಮೂಲಕ ಬದುಕನ್ನು ಯಾವ ರೀತಿಯಾಗಿ ಜೀವಂತವಾಗಿರಿಸಿಕೊಂಡಿವೆ? ಎಂಬುದನ್ನು ತಿಳಿಯುವ ಉದ್ದೇಶವನ್ನು ಹೊಂದಿದೆ.
* ಶ್ರೇಣೀಕೃತ ಸಾಮಾಜಿಕ ರಚನೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುವ ತಳಸಮುದಾಯಗಳು ಯಾವ ರೀತಿಯಾಗಿ ನಿರ್ಲಕ್ಷ್ಯಕ್ಕೆ ಒಳಗಾದವು? ಎಂಬ ಉದ್ದೇಶವನ್ನು ಹೊಂದಿದೆ.
* ತಳಸಮುದಾಯಗಳು ಪ್ರಭುತ್ವಕ್ಕೆ ಮುಖಾಮುಖಿಯಾದ ರೀತಿ ಹಾಗೂ ತಮ್ಮ ಐಡೆಂಟಿಟಿಗಾಗಿ ನಡೆಸಿದ ಹೋರಾಟಗಳನ್ನು ಕುರಿತು ಅಧ್ಯಯನ ಮಾಡುವ ಉದ್ದೇಶ ಹೊಂದಿದೆ.
* ತುಮಕೂರು ಜಿಲ್ಲೆಯಲ್ಲಿನ ತಳಸಮುದಾಯಗಳ ಸ್ಥಿತಿ-ಗತಿಯನ್ನು ಬಿಡಿ ಬಿಡಿಯಾಗಿ ಅಧ್ಯಯನ ಮಾಡಲಾಗಿದೆ. ತಳಸಮುದಾಯಗಳ ಸಮಸ್ಯೆಗಳನ್ನು ಅಧ್ಯಯನ ಮಾಡುವುದರೊಂದಿಗೆ ಅವರು ಎದುರಿಸಬೇಕಾದ ಸವಾಲುಗಳನ್ನು ಅಭ್ಯಸಿಸುವ ಹಾಗೂ ವಿಶ್ಲೇಷಿಸುವ ಉದ್ದೇಶ ಈ ಅಧ್ಯಯನಕ್ಕಿದೆ.
* ತುಮಕೂರು ಜಿಲ್ಲೆಯ ಪ್ರದೇಶದಲ್ಲಿ ಪ್ರಭುತ್ವ ಮತ್ತು ತಳಸಮುದಾಯಗಳ ನಡುವಿನ ಸಂಬಂಧವನ್ನು ಅಧ್ಯಯನ ಮಾಡುತ್ತ ಸಾಮಾಜಿಕ ಸಮಾನತೆಗಾಗಿ, ಆರ್ಥಿಕ ಪ್ರಬಲತೆಗಾಗಿ, ಸಮಾನ ಸ್ಥಾನಮಾನಗಳಿಗಾಗಿ ಆರಂಭವಾದ ಹೋರಾಟದ ಯಶಸ್ಸು ಮತ್ತು ವಿಫಲತೆಯ ಅಂಶಗಳು ಯಾವುವು ಸಫಲತೆ ಮತ್ತು ವಿಫಲತೆಗೆ ಕಾರಣ ಏನು ಎನ್ನುವುದನ್ನು ತಿಳಿಯುವ ಉದ್ದೇಶ ಹೊಂದಿದೆ.

* ದಲಿತ ಚಳವಳಿ ಹುಟ್ಟಲು ಕಾರಣವೇನು? ಯಾವ ಸಂದರ್ಭದಲ್ಲಿ ಇವು ಕ್ರಿಯಾಶೀಲ ವಾಗಿದ್ದವು? ಯಾವ ದಿಕ್ಕಿನಲ್ಲಿ ಈ ಹೋರಾಟ ಸಾಗಿತು ಎನ್ನುವ ವಿಶ್ಲೇಷಣಾತ್ಮಕ ಅಧ್ಯಯನ ಕೈಗೊಳ್ಳುವ ಉದ್ದೇಶ ಹೊಂದಿದೆ. ಭೂಮಾಲೀಕರು ಮತ್ತು ತಳಸಮುದಾಯಗಳು, ತಳಸಮುದಾಯಗಳ ಮತಾಂತರ ಪ್ರಕ್ರಿಯೆ, ತಳಸಮುದಾಯಗಳ ಸ್ಥಿತಿಗತಿಗಳನ್ನು ಕುರಿತು ತೌಲನಿಕವಾಗಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಿದೆ.

## ೧.೨. ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಮಹಾಪ್ರಬಂಧವು ಕಾಲದ ಮತ್ತು ಪ್ರದೇಶದ ಚೌಕಟ್ಟಿಗೆ ಒಳಪಟ್ಟಿದೆ. ಪ್ರಸ್ತುತ ಅಧ್ಯಯನವನ್ನು ವಸಾಹತುಶಾಹಿ, ಸಾಮ್ರಾಜ್ಯಶಾಹಿ ಮತ್ತು ಪ್ರಜಾಪ್ರಭುತ್ವದ ಕಾಲವೆಂದು ಪರಿಗಣಿಸಲ್ಪಡುವ ಕ್ರಿ.ಶ. ೧೮೩೦ರಿಂದ ಸಮಕಾಲೀನ ಸಂದರ್ಭದವರೆಗೆ ಸೀಮಿತಗೊಳಿಸಲಾಗಿದೆ. ದಕ್ಷಿಣ ಭಾರತದ ಬಹುಭಾಗವು ಟಿಪ್ಪುವಿನ ಮರಣದ ನಂತರ ನೇರವಾಗಿ ವಸಾಹತುಶಾಹಿ ಯೊಂದಿಗೆ ಮುಖಾಮುಖಿಯಾಯಿತು. "ಲಾರ್ಡ್ ವಿಲಿಯಂ ಬೆಂಟಿಕನು ೧೮೩೧ರಲ್ಲಿ ಮೈಸೂರು ರಾಜನ ಆಡಳಿತ ಅಸಮರ್ಪಕವಾಗಿದೆ ಎಂಬ ಕಾರಣದಿಂದ ತಾನೇ ಆಡಳಿತವನ್ನು ವಹಿಸಿಕೊಂಡು ರಾಜರನ್ನು ನಿವೃತ್ತಿಗೊಳಿಸಿದನು."[೯] ಆದ್ದರಿಂದಾಗಿ ಮೈಸೂರು ಸಂಸ್ಥಾನ ನೇರವಾಗಿ ಅಥವಾ ಪರೋಕ್ಷವಾಗಿ ಬ್ರಿಟಿಷ್ ಈಸ್ಟ್ ಇಂಡಿಯ ಕಂಪನಿಯ ಆಡಳಿತಕ್ಕೆ ಒಳಪಟ್ಟಿತು. ಆದ್ದರಿಂದಾಗಿ ಅಧ್ಯಯನದ ವ್ಯಾಪ್ತಿಯನ್ನು ೧೮೩೦ರಿಂದ ಸಮಕಾಲೀನ ಸಂದರ್ಭದವರೆಗೆ ತೆಗೆದುಕೊಳ್ಳಲಾಗಿದೆ.

**ತುಮಕೂರು ಜಿಲ್ಲೆಯ ತಳಸಮುದಾಯಗಳು: ಚಾರಿತ್ರಿಕ ಮತ್ತು ಸಮಾಜೋ-ಆರ್ಥಿಕ ಅಧ್ಯಯನ** ಎಂಬ ವಿಷಯ ಕುರಿತ ಬಹುದೊಡ್ಡ ವಿಸ್ತೀರ್ಣ ಕ್ಷೇತ್ರಕ್ಕೆ ಸಮಗ್ರ ಅಧ್ಯಯನ ಮತ್ತು ಕ್ಷೇತ್ರಕಾರ್ಯದ ದೃಷ್ಟಿಯಿಂದ ಮಾಹಿತಿ ಸಂಗ್ರಹಿಸಿ ಅಧ್ಯಯನ ಪೂರ್ಣಗೊಳಿಸಲು ತುಮಕೂರು ಜಿಲ್ಲೆಯ ತುಮಕೂರು, ಗುಬ್ಬಿ ಕುಣಿಗಲ್, ತಿಪಟೂರು ಚಿಕ್ಕನಾಯಕನಹಳ್ಳಿ, ತುರುವೇಕೆರೆ, ಪಾವಗಡ, ಶಿರಾ, ಮಧುಗಿರಿ ಹಾಗೂ ಕೊರಟಗೆರೆ ಒಟ್ಟು ಹತ್ತು ತಾಲ್ಲೂಕುಗಳನ್ನು ಒಳಗೊಂಡಿದೆ. ಅಲ್ಲದೆ ಅಧ್ಯಯನಕ್ಕೆ ಪೂರಕವಾಗಿ ಸಿಗುವ ಜಿಲ್ಲೆಯ ನೆರೆಯ ಪ್ರದೇಶಗಳಿಂದಲೂ ಮಾಹಿತಿಯನ್ನು ಪಡೆದು ಅಧ್ಯಯನ ಪೂರ್ಣಗೊಳಿಸಿರುವುದು ಅದರ ವ್ಯಾಪ್ತಿಗಳಲ್ಲೊಂದಾಗಿರುತ್ತದೆ.

ಈ ಭಾಗದ ತಳಸಮುದಾಯಗಳು, ಜಮೀನ್ದಾರಿ ವರ್ಗ, ಬಂಡವಾಳಶಾಹಿ ವರ್ಗದವರನ್ನು ಕುರಿತು ಈಗಾಗಲೇ ಆಗಿರುವ ಅಧ್ಯಯನಗಳನ್ನು ಒಳಗೊಂಡಂತೆ ಅಲ್ಲಿ ದಾಖಲಾಗಿರುವ ವಿಷಯಗಳನ್ನು ವಸ್ತುನಿಷ್ಠವಾಗಿ ಅಧ್ಯಯನಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ತುಮಕೂರು ಜಿಲ್ಲೆಯ ತಳಸಮುದಾಯಗಳಲ್ಲಿ ಇದುವರೆಗೆ ದಾಖಲಾಗದೇ ಇರುವ ಈ ಭಾಗದ ವಿಷಯಗಳನ್ನು

ಕುರಿತು ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಿ, ಅಧ್ಯಯನಕ್ಕೆ ಒಳಪಡಿಸಿರುವುದು ಸಹ ಅಧ್ಯಯನದ ಬಹುಮುಖ್ಯ ಭಾಗವನ್ನಾಗಿಸಿದೆ.

೧೯೬೧ರ ಪ್ರಕಾರ ತುಮಕೂರು ಜಿಲ್ಲೆಯ ಪರಿಶಿಷ್ಟಜಾತಿ ಜನರ ಸಂಖ್ಯೆ ೨,೩೨,೬೮೪ ಹಾಗೂ ಪರಿಶಿಷ್ಟ ಪಂಗಡದ ಜನರ ಸಂಖ್ಯೆ ೪೦೨ ಆಗಿದೆ. ಪ್ರಸ್ತುತ ಅಧ್ಯಯನವು ಸಾಮಾಜಿಕವಾಗಿ ತಳಸ್ತರದಲ್ಲಿರುವ ಅಸ್ಪೃಶ್ಯರನ್ನು ಒಳಗೊಂಡಿದ್ದು, ಆ ಸಮುದಾಯಗಳ ಜೊತೆಗೆ ನಾಯಕ, ಕಾಡುಗೊಲ್ಲ ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

### ೧.೩. ಇದುವರೆಗೆ ನಡೆದ ಅಧ್ಯಯನಗಳ ಸಮೀಕ್ಷೆ

ವಸಾಹತುಕಾಲದ ತುಮಕೂರು ಜಿಲ್ಲೆಯ ಪ್ರದೇಶದ ಬಗೆಗೆ ಸಾಕಷ್ಟು ಅಧ್ಯಯನಗಳು ನಡೆದಿವೆ. ಈ ಅಧ್ಯಯನಗಳೇ ವಿವಿಧ ಬಗೆಯ ಆಕರಗಳು ಸಹ ಆಗಿವೆ ಎಂಬುದು ಮಹತ್ವಪೂರ್ಣವಾದುದು. ಈ ಆಕರಗಳಲ್ಲಿ ಸರ್ಕಾರದ ದಾಖಲೆಗಳು ಮತ್ತು ವಿವಿಧ ಬಗೆಯ ಅಧ್ಯಯನಗಳನ್ನು ಕಾಣಬಹುದು. ಪ್ರಸ್ತುತ ಅಧ್ಯಯನಕ್ಕೆ ಅಂದಿನ ಜನಗಣತಿಯ ವರದಿಗಳು, ಮೈಸೂರು ರಾಜ್ಯದ ಆಡಳಿತ ವರದಿಗಳು ಮತ್ತು ದಾಖಲೆಗಳು ಪ್ರಮುಖವಾದ ಪ್ರಾಥಮಿಕ ಆಕರಗಳಾಗಿವೆ. ಇದರೊಂದಿಗೆ ತುಮಕೂರು ಪ್ರದೇಶದ ಕುರಿತ ವಿವಿಧ ಬಗೆಯ ಅಧ್ಯಯನಗಳಲ್ಲಿ ಪಿಎಚ್.ಡಿ ಮಹಾಪ್ರಬಂಧಗಳು, ಕೃತಿಗಳು, ಸ್ಮರಣ ಸಂಚಿಕೆಗಳು, ಪತ್ರಿಕಾ ವರದಿಗಳು, ಲೇಖನಗಳು ಮತ್ತು ಅಂತರ್ಜಾಲಗಳಲ್ಲಿರುವ ದಾಖಲೆಗಳು ಮುಖ್ಯವಾದ ಆಕರಗಳೇ ಆಗಿವೆ. ಇವುಗಳನ್ನು ಪ್ರಸ್ತುತ ಸಂಶೋಧನೆಗೆ ಬಳಸಿಕೊಳ್ಳಲಾಗಿದೆ. ಅಂತೆಯೇ ಕ್ಷೇತ್ರಕಾರ್ಯವನ್ನು ಪ್ರಶ್ನಾವಳಿ ಮತ್ತು ಸಂದರ್ಶನದ ಮುಖಾಂತರ ಮಾಡಲಾಗಿದೆ. ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾದ ಮಾಹಿತಿಯನ್ನು ಈ ಮಹಾಪ್ರಬಂಧದ ರಚನೆಯಲ್ಲಿ ಬಳಸಲಾಗಿದೆ. ಹೀಗೆ ಲಭ್ಯವಿರುವ ಎಲ್ಲ ಬಗೆಯ ದಾಖಲೆಗಳ ಬಳಕೆ ಮಾಡಲಾಗಿದ್ದು, ಮಹಾಪ್ರಬಂಧವನ್ನು ವಸ್ತುನಿಷ್ಠವಾಗಿ ರೂಪಿಸಲಾಗಿದೆ.

**ಡಾ.ಬಿ.ಆರ್.ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ಸಂಪುಟಗಳು ದಲಿತರ ಚಾರಿತ್ರಿಕ, ಸಾಮಾಜಿಕ ಹಿನ್ನೆಲೆಗಳನ್ನು ಕುರಿತು ಬಹಳ ವಿಸ್ತೃತವಾಗಿ ಚರ್ಚಿಸುತ್ತದೆ. ಅಸ್ಪೃಶ್ಯತೆ, ಅದರ ಮೂಲ, ಅಸ್ಪೃಶ್ಯರಿಗಿರುವ ಕರಾರುಗಳು ಅಥವಾ ನಿರ್ಬಂಧಗಳು, ಮತಾಂತರ ಪ್ರಕ್ರಿಯೆ ಮೊದಲಾದವುಗಳನ್ನು ಕುರಿತು ವಸ್ತುನಿಷ್ಠವಾಗಿ ವಿಶ್ಲೇಷಣೆ ಮಾಡುತ್ತದೆ.

"ನಾಥಮ್ ಹತ್ತಿರದ ಪಾರ್ಲಿ ಎಂಬಲ್ಲಿ ಹರಿಜನ ಯುವಕನೊಬ್ಬ ತೆಂಗಿನ ಚಿಪ್ಪಿನಲ್ಲಿ ಟೀ ತೆಗೆದುಕೊಳ್ಳಲು ನಿರಾಕರಿಸಿ ಗಾಜಿನ ಲೋಟದಲ್ಲೇ ಕೊಡಿ ಎಂದು ಕೇಳಿದಾಗ ಒಬ್ಬ ಸವರ್ಣ

ಹಿಂದೂ ಆತನನ್ನು ಹೊಡೆದು ಅವನ ತಲೆಯ ಮೇಲೆ ಬೂಟು ಹೇರಿದ."[೧೦] ಈ ಘಟನೆಯನ್ನು ಅಂಬೇಡ್ಕರ್ ಅವರು 'ಅಂಗಿ ತೊಟ್ಟಿಕೊಳ್ಳುವುದೂ ಇಲ್ಲಿ ಅಪರಾಧ' ಎಂಬ ಲೇಖನದಲ್ಲಿ ಚರ್ಚಿಸಿದ್ದಾರೆ. ಅಂಬೇಡ್ಕರ್ ಅವರು ಭಾರತೀಯ ಸಾಮಾಜಿಕ ವ್ಯವಸ್ಥೆಯನ್ನು ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ, ತಳಸಮುದಾಯಗಳ ಮೇಲಾಗುತ್ತಿರುವ ದೌರ್ಜನ್ಯಗಳನ್ನು ಬಿಡಿ ಬಿಡಿಯಾಗಿ ಅಧ್ಯಯನ ಮಾಡಿದ್ದಾರೆ.

ಚಿದಾನಂದಮೂರ್ತಿ ಎಂ. ಅವರ **ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ ಕೃತಿಯು** ಶಾಸನಗಳಲ್ಲಿ ಹೊಲೆಯರು, ಸಂಬಳಿಗೋಲು, ಹೊಲೆಯರ ನೀರು, ಬ್ರಾಹ್ಮಣರು ಮತ್ತು ಮಾಂಸ ಭಕ್ಷಣೆ, ಹೊಲೆಯರ, ಬ್ರಾಹ್ಮಣರ ಕೆಲವು ಸಂಬಂಧಗಳು, ವೃತ್ತಿಗಳು, ತೊತ್ತುಗಳು, ಮತಾಂತರ, ಅಂತರ್ಜಾತೀಯ ವಿವಾಹ, ಅಸ್ಪೃಶ್ಯ ವಚನಕಾರರನ್ನು ಕುರಿತು ಚರ್ಚಿಸುತ್ತದೆ.

ಶರ್ಮ ಆರ್.ಎಸ್. ಅವರ **ಪ್ರಾಚೀನ ಭಾರತದಲ್ಲಿ ಶೂದ್ರರು** ಕೃತಿಯು ಇತಿಹಾಸದ ರಚನಾ ಕ್ರಮ ಮತ್ತು ವಿಶ್ಲೇಷಣಾ ವಿಧಾನ, ಉಗಮ, ಬುಡಕಟ್ಟು ಮತ್ತು ವರ್ಣ, ದಾಸ್ಯ ಮತ್ತು ದೌರ್ಬಲ್ಯ, ರಾಜ್ಯಾಧಿಕಾರ ಮತ್ತು ದಾಸ್ಯವ್ಯವಸ್ಥೆ ಮೊದಲಾದವುಗಳನ್ನು ಕುರಿತು ವಿಶ್ಲೇಷಣೆ ಮಾಡುತ್ತದೆ. ದೇವರಾಜ ಓ. ಅವರ **ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು** ಕೃತಿಯು ದಲಿತರು ಮತ್ತು ಸಮಾಜ, ವಾಸಸ್ಥಾನ, ಸಂಬಳಿಗೋಲು, ದೇವಾಲಯ ಸಂಸ್ಕೃತಿ, ದೇವದಾಸಿ ಪದ್ಧತಿ, ಮತಾಂತರ ಪ್ರಕ್ರಿಯೆ, ಗ್ರಾಮದೇವತೆಗಳನ್ನು ಕುರಿತು ಮಾಹಿತಿ ನೀಡುತ್ತದೆ.

ನಂದೀಶ್ವರ ಎನ್. ಅವರ **ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು** ಕೃತಿಯು ಸಿರಾ ತಾಲ್ಲೂಕಿನ ಸ್ಮಾರಕಗಳಲ್ಲಿ ದೇವಸ್ಥಾನಗಳು, ಮಸೀದಿ ಮತ್ತು ದರ್ಗಾಗಳು, ಚರ್ಚ್‌ಗಳು, ಸಿರಾ ಕೋಟೆ ಹಾಗೂ ಶಾಸನಗಳಿಗೆ ಸಂಬಂಧಿಸಿದಂತೆ ಸಮಗ್ರ ಮಾಹಿತಿ ನೀಡುತ್ತದೆ. ಮರಿಯಪ್ಪ ಕೆ. ಅವರು ಸಂಪಾದಕರಾಗಿರುವ **ತುಮಕೂರು ಜಿಲ್ಲೆಯ ಸಾಧಕರು** ಕೃತಿಯು ತುಮಕೂರು ಜಿಲ್ಲೆಯ ಅಂಕಿ–ಅಂಶಗಳು, ಜಿಲ್ಲಾಧಿಕಾರಿಗಳು, ದೇವಾಲಯಗಳು, ಮಠಮಾನ್ಯಗಳು, ಸಮಾಜಸೇವಕರು ತುಮಕೂರು ಜಿಲ್ಲೆಯ ಹೋರಾಟಗಾರರನ್ನು ಕುರಿತು ಸಮಗ್ರ ಮಾಹಿತಿ ನೀಡುತ್ತದೆ.

ಬರಗೂರು ರಾಮಚಂದ್ರಪ್ಪ, ಚೇಳೂರು ವೆಂಕಟೇಶ್, ಕೆ.ದೊರೈರಾಜು, ಸಮಾಜಸೇವಕ ನರಸೀಯಪ್ಪ, ಕೆ.ಬಿ.ಸಿದ್ದಯ್ಯ, ಪಾವಗಡ ಶ್ರೀರಾಮ್ ಮೊದಲಾದ ತಳಸಮುದಾಯದ ಸಾಧಕರ ಬಗ್ಗೆ ಪರಿಚಯ ಮಾಡಿಕೊಡುತ್ತದೆ.

ಯೋಗೀಶ್ವರಪ್ಪ ಡಿ.ಎನ್. ಅವರ **ಕಲ್ಪಶೋಧ** ಕೃತಿಯು ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಸಂಶೋಧನಾ ಲೇಖನಗಳನ್ನು ಒಳಗೊಂಡಿದೆ. ಕೃತಿಯು ಹೊಯ್ಸಳರ ಪ್ರತಿನಿಧಿಗಳು, ಚರಿತ್ರೆ ಕಟ್ಟಿದ ಚಿಕ್ಕ ಅರಸರು, ಧರ್ಮ ಜಾಗೃತಿ, ತುಮಕೂರು ತಾಲ್ಲೂಕಿನ ಶಾಸನೋಕ್ತ ಸ್ಥಳನಾಮಗಳು, ಕೆರೆಗಳು, ತುಮಕೂರು ಶೈಕ್ಷಣಿಕ ಪ್ರಗತಿ, ಕ್ವಿಟ್ ಇಂಡಿಯಾ ಚಳವಳಿಯಲ್ಲಿ ವಿದ್ಯಾರ್ಥಿಗಳಿಗೆ ಸಂಬಂಧಿಸಿದಂತೆ ಸಂಶೋಧನಾ ಲೇಖನಗಳನ್ನು ಒಳಗೊಂಡಿದೆ.

ಚಿನ್ನಸ್ವಾಮಿ ಸೋಸಲೆ ಅವರ **ದಲಿತರ ಬದುಕು ಮೆಲುಕು, ಭಾರತೀಯ ಸಮಾಜ ಮತ್ತು ದಲಿತರು, ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು,** ಮೊದಲಾದ ಕೃತಿಗಳು ಭಾರತೀಯ ಸಮಾಜದಲ್ಲಿರುವಂತಹ ಅಸ್ಪೃಶ್ಯತೆ, ದಲಿತರ ಮೇಲಾಗುತ್ತಿರುವಂತಹ ದೌರ್ಜನ್ಯಗಳ ಬಗ್ಗೆ ವಿಸ್ತೃತವಾಗಿ ಚರ್ಚಿಸುತ್ತವೆ. **ಒನಕೆ ಓಬವ್ವೆ ದಲಿತ ಸಂವೇದನೆಯೊಂದಿಗೆ ಮುಖಾಮುಖಿ** ಕೃತಿಯಲ್ಲಿ ಚಿನ್ನಸ್ವಾಮಿ ಸೋಸಲೆ ಅವರು ಚಿತ್ರದುರ್ಗದ ಚರಿತ್ರೆಯಲ್ಲಿ ಚಲವಾದಿ ಜನಾಂಗದ ವೀರ ಮಹಿಳೆ ಎನಿಸಿಕೊಂಡ ಒನಕೆ ಓಬವ್ವಳ ರಾಷ್ಟ್ರೀಯ ದೃಷ್ಟಿಕೋನ ವರ್ಣನಾತ್ಮಕ ಚರಿತ್ರೆಯನ್ನು, ವರ್ತಮಾನ ಮತ್ತು ಪ್ರಸ್ತುತ ಸಬಲ್ಟರ್ನ್ ಚರಿತ್ರೆ ರಚನೆಯ ದೃಷ್ಟಿಕೋನದಲ್ಲಿ ಗ್ರಹಿಸುವ ಪ್ರಯತ್ನ ಮಾಡಿದ್ದಾರೆ. ಅಲ್ಲದೆ ದಲಿತ ಸಂವೇದನೆಯೊಂದಿಗೆ ಮುಖಾಮುಖಿ ಮಾಡಿದ್ದಾರೆ. "ವೀರಾವೇಶದಿಂದ ಯುದ್ಧದಲ್ಲಿ ಹೋರಾಡಿದ ದಲಿತ ಸಮುದಾಯದ ಓಬವ್ವೆಯನ್ನು ಚರಿತ್ರೆಯ ಪುಟಗಳಲ್ಲಿ ದಾಖಲಿಸದೆ ನಿರ್ಲಕ್ಷಿಸಿದ್ದಾರೆ"[೧೧] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ದಲಿತ ಮಹಿಳೆ ಒನಕೆ ಓಬವ್ವೆಯೂ ದಲಿತ ಸಂವೇದನೆಯೊಂದಿಗೆ ಈ ಕೃತಿಯಲ್ಲಿ ಮುಖಾಮುಖಿಯಾಗಿದ್ದಾಳೆ. ಇದೇ ರೀತಿಯಾಗಿ ತುಮಕೂರು ಜಿಲ್ಲೆಯಲ್ಲಿನ "ಮಧ್ಯಕಾಲೀನ ಇತಿಹಾಸದಲ್ಲಿ ಕುರಂಕೋಟೆಯನ್ನು ಕುರಂಗರಾಜ ಆಳ್ವಿಕೆ ಮಾಡಿದ ಹಾಗೂ ಆತ ದಲಿತ ಎಂಬುದಕ್ಕೆ ದಾಖಲೆ ಇಲ್ಲ"[೧೨] ಎನ್ನುತ್ತಾರೆ. ಆದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕುರಂಗ ರಾಜ ಕುರಂಕೋಟೆಯನ್ನು ಆಳ್ವಿಕೆ ಮಾಡಿದ ಹಾಗೂ ಆತ ದಲಿತ ಎಂಬುದಕ್ಕೆ ಮೌಖಿಕ ಆಧಾರಗಳು ದೊರೆತಿವೆ. ಆದರೂ ಕೂಡ ಕುರಂಗರಾಜನನ್ನು ಚರಿತ್ರೆಯಲ್ಲಿ ದಾಖಲಿಸದೆ ನಿರ್ಲಕ್ಷಿಸಲಾಗಿದೆ.

ಡಿ.ಡಿ.ಕೋಸಾಂಬಿ ಅವರ **ಪುರಾಣ ಮತ್ತು ವಾಸ್ತವ** ಕೃತಿಯು ವಾಸ್ತವಗಳು ಕಾಲಬದ್ಧವಾಗಿರುತ್ತವೆ. ತಮ್ಮ ಕಾಲದ ನಂತರ ತಮ್ಮ ಧ್ವನಿತಾರ್ಥಗಳನ್ನು ಕಳೆದುಕೊಳ್ಳುತ್ತವೆ. ಆದರೆ ಪುರಾಣಗಳು ನಿರಂತರವಾದ ಪರಿವರ್ತನೆಯ ಮೂಲಕ ಅಮರತ್ವವನ್ನು ಪಡೆದಿರುತ್ತವೆ ಎಂಬುದನ್ನು ಪ್ರತಿನಿಧಿಸುತ್ತದೆ. "ಗಣೇಶನು ಪಾರ್ವತಿಯ ಮಗ. ಆದರೆ ಶಿವ ಅವನ ತಂದೆಯಲ್ಲ. ಸ್ಕಂದನು ಶಿವನ ವೀರ್ಯದಿಂದ ಹುಟ್ಟಿದವನು. ಆದರೆ ಪಾರ್ವತಿಯ ಹೊಟ್ಟೆಯಲ್ಲಿ

ಹುಟ್ಟಿದವನಲ್ಲ. ಇದು ತೀರ ಸಂಕೀರ್ಣವಾದ ಪ್ರತಿಮಾಶಿಲ್ಪ. ಈ ಪೌರಾಣಿಕ ಘಟನೆಯು ಹಾಸ್ಯಾಸ್ಪದವೆನ್ನುವಷ್ಟು ಗೋಜಲುಗೋಜಲಾಗಿದೆ." ಪುರಾಣಗಳ ಮೂಲಕ ಭಾರತದ ಚರಿತ್ರೆಯ ವಾಸ್ತವಗಳನ್ನು ಅರಿಯುವ ಸಂಕೀರ್ಣವಾದ ಒಂದು ಮಾದರಿಯನ್ನು ಕೋಸಾಂಬಿ ಪ್ರಸ್ತುತ ಕೃತಿಯಲ್ಲಿ ಕೊಟ್ಟಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಗಮನಿಸಿದರೆ ಕಾಡುಗೊಲ್ಲ ಸಮುದಾಯದ ಆರಾಧ್ಯ ದೈವ ಜುಂಜಪ್ಪನ ಕಥೆಯು ಕೂಡ ಪುರಾಣದೊಂದಿಗೆ ಸುತ್ತುವರೆದಿದೆ. ತಳಸಮುದಾಯಗಳ ಅಥವಾ ಮೂಲ ನಿವಾಸಿಗಳ ಆರಾಧ್ಯ ದೈವಗಳಾದಂತಹ ಗ್ರಾಮದೇವತೆಗಳನ್ನು ವೈದಿಕೀಕರಣಗೊಳಿಸುವ ಮೂಲಕ, ಪುರಾಣಗಳನ್ನು ಹೇರಲಾಗಿದೆ. ಈ ಅಂಶಗಳನ್ನು ಪುಷ್ಟೀಕರಿಸುತ್ತಾ ಕೋಸಾಂಬಿ ಅವರು ಹೀಗೆ ಅಭಿಪ್ರಾಯಪಟ್ಟಿದ್ದಾರೆ. "ಪುರಾಣ ಕಥೆಯನ್ನು ಕೇಳುವುದಕ್ಕೆ ಪ್ರೇಕ್ಷಕರಾಗಿ ಕೆಳವರ್ಗದ ಜನ ಬೇಕಾಗಿದ್ದರು. ಪುರಾತನ ಯುದ್ಧಗಳ ವಿರೋಚಿತ ಹಾಡುಹಬ್ಬಗಳ ಪಠಣವು ಅವರಿಗೆ ಆಕರ್ಷಣೀಯವಾಗಿಯೂ ಇತ್ತು. ಹಾಗಾಗಿ ತಮಗೆ ಬೇಕೆನಿಸಿದ ಸಿದ್ಧಾಂತಗಳನ್ನು ತುರುಕುವುದಕ್ಕೆ ಈಗಾಗಲೇ ಚಲಾವಣೆಯಲ್ಲಿದ್ದ ಮಹಾಕಾವ್ಯವನ್ನು ಬಳಸಿಕೊಳ್ಳುವುದು ಬ್ರಾಹ್ಮಣರಿಗೆ ಹೆಚ್ಚು ಅನುಕೂಲಕರವಾಗಿತ್ತು."[೧೪] ಈ ರೀತಿಯಾಗಿ ತಮ್ಮ ಅನುಕೂಲಕ್ಕೆ ತಕ್ಕಂತೆ ಬ್ರಾಹ್ಮಣರು ಮಹಾಕಾವ್ಯಗಳ ಮೇಲೆ ಮತ್ತು ಗ್ರಾಮದೇವತೆಗಳ ಮೇಲೆ ಪುರಾಣಗಳನ್ನು ಹೇರಿದರು.

ಬ್ರಾಹ್ಮಣರು ಭಗವದ್ಗೀತೆಯನ್ನು ರಚಿಸಿದ್ದೇ ಮೇಲ್ವರ್ಗದವರಿಗಾಗಿ ಎಂಬುದಕ್ಕೆ ಉತ್ತಮ ಉದಾಹರಣೆಗಳನ್ನು ಈ ಕೆಳಕಂಡಂತೆ ತಿಳಿಯಬಹುದು. ಸ್ವತಃ ಕೃಷ್ಣನೇ ಗೀತೆಯಲ್ಲಿ "ಪಾಪಯೋನಿಜರಾದ ಮಹಿಳೆಯರು, ವೈಶ್ಯರು ಹಾಗೂ ಶೂದ್ರರು ಕೂಡ ನನ್ನನ್ನು ಆಶ್ರಯಿಸಿ ಮುಕ್ತಿಯನ್ನು ಪಡೆಯಬಹುದು"[೧೫] ಎನ್ನುತ್ತಾನೆ. ಅದರ ಅರ್ಥ ಮಹಿಳೆಯರು, ಶ್ರಮಿಕರು, ತಳಮುದಾಯಗಳು ಹುಟ್ಟಿನಿಂದಲೇ ಅಶುದ್ಧರು. ಅವರು ಸಾವಿನ ನಂತರ ಮುಕ್ತಿಯನ್ನು ಪಡೆಯಬೇಕಾದರೆ, ತಮ್ಮನ್ನು ಕೀಳಾಗಿ ಕಾಣುತ್ತಿದ್ದ ಆ ದೇವರನ್ನೇ ಅವರು ಭಕ್ತಿ, ಶ್ರದ್ಧೆಗಳಿಂದ ಆಶ್ರಯಿಸಬೇಕು. "ನಾಲ್ಕು ವರ್ಣಗಳು ನನ್ನಿಂತ ಸೃಷ್ಟಿಸಲ್ಪಟ್ಟಿವೆ"[೧೫] ಎಂದು ಕೃಷ್ಣನೇ ಹೇಳಿಕೊಳ್ಳುತ್ತಾನೆ. ತಮ್ಮ ಅನುಕೂಲಕ್ಕೆ ಅಗತ್ಯವಾಗಿರುವುದನ್ನು ದೇವರ ಬಾಯಿಯ ಮೂಲಕ ಹೇಳಿಸುವುದು, ಆ ಮೂಲಕ ಶ್ರಮಿಕರನ್ನು, ತಳಸಮುದಾಯಗಳನ್ನು ನಂಬಿಸುವುದು ಅವರ ಉದ್ದೇಶವಾಗಿತ್ತು. ಎಲ್ಲಾ ತಾರತಮ್ಯಗಳನ್ನು ಸೃಷ್ಟಿಸಿದವನು ಆ ಭಗವಂತನೇ ಎಂಬುದಾಗಿ ನಂಬಿಸಲಾಯಿತು. ಈ ರೀತಿಯಾಗಿ ಪುರಾಣದ ಮೂಲಕ ಭಾರತದ ಚರಿತ್ರೆಯ ವಾಸ್ತವಗಳನ್ನು ತಿಳಿಯಬಹುದಾಗಿದೆ.

ಬರ್ನಾರ್ಡ್ ಎಸ್.ಕೋಹನ್ ಅವರ **ಆನ್ ಆನ್‌ದ್ರೋಪಾತಾಜಿಸ್ಟ್ ಅಮಾಂಗ್ ದ ಹಿಸ್ಟೋರಿಯನ್ಸ್ ಅಂಡ್ ಅದರ್ ಎಸ್ಸೇಸ್** ಕೃತಿಯು ಧರ್ಮಾಧಾರಿತ ಸಮಾಜವಾದ ಉತ್ತರ ಪ್ರದೇಶದಲ್ಲಿ ಅಸ್ಪೃಶ್ಯ ಸಮುದಾಯವಾದ ಚಮ್ಮಾರರು ಹೇಗೆ ತಮ್ಮ ಸಾಮಾಜಿಕ ಸ್ಥಾನಮಾನಗಳನ್ನು ಉತ್ತಮಪಡಿಸಿಕೊಳ್ಳಲು ಪ್ರಯತ್ನಿಸಿದರು ಎಂಬ ವಿಷಯವನ್ನು ಕುರಿತು ತಿಳಿಸುತ್ತದೆ. "ಚಮ್ಮಾರ ಸಮುದಾಯ ಸಾಂಪ್ರದಾಯಿಕವಾಗಿ ಚರ್ಮದ ಉತ್ಪನ್ನಗಳನ್ನು ತಯಾರಿಸುತ್ತಿದ್ದರು. ಜೊತೆಗೆ ಕೃಷಿ ಕಾರ್ಮಿಕರಾಗಿದ್ದರು."[೧೭] ಉತ್ತರ ಪ್ರದೇಶದ ಮಾದಪುರ ಹಳ್ಳಿಯ ಚಮ್ಮಾರ ಸಮುದಾಯದಲ್ಲಿ ಹಲವಾರು ಪರಿವರ್ತನೆಗಳನ್ನು ಗುರುತಿಸಬಹುದು. ಪ್ರಮುಖವಾಗಿ ಚಮ್ಮಾರರು ಸಂಘಟಿತರಾಗುವುದರ ಮೂಲಕ ತಮ್ಮ ಸಾಮಾಜಿಕ, ರಾಜಕೀಯ ಮತ್ತು ಆರ್ಥಿಕ ಸಮಾನತೆಗಾಗಿ ಮೇಲ್ವರ್ಗಗಳೊಂದಿಗೆ ಹೋರಾಟವನ್ನು ಮಾಡಿದರು. ಅಲ್ಲದೆ ಈ ಸಮುದಾಯ ತಮ್ಮ ಮೇಲಿದ್ದ ಕೆಲವು ಹಳೆಯ ನಿರ್ಬಂಧಗಳನ್ನು ಕಳೆದುಕೊಂಡರು.

ಎಸ್.ಸಿ.ದುಬೆ ಅವರ ಇಂಡಿಯನ್ ಸೊಸೈಟಿ ಕೃತಿಯು ಭಾರತೀಯ ಸಮಾಜದ ರಚನೆ, ವರ್ಣ ಮತ್ತು ಜಾತಿ, ಕುಟುಂಬ, ನಗರ ಮತ್ತು ಗ್ರಾಮೀಣ ವ್ಯವಸ್ಥೆ, ನಗರೀಕರಣ ವ್ಯವಸ್ಥೆ, ಸಂಬಂಧಗಳನ್ನು ಕುರಿತು ಚರ್ಚಿಸುತ್ತದೆ. ಭಾರತೀಯ ಸಮಾಜವು ಹಲವು ಭಾಗಗಳು ಹಾಗೂ ಉಪ ವಿಭಾಗಗಳಾಗಿ ಹಂಚಿಕೆಯಾಗಿದೆ. "ಭಾರತೀಯ ಸಮಾಜ ನಿಂತಿರುವುದೇ ಜಾತಿಯ ಆಧಾರದಲ್ಲಿ. ಒಂದು ಜಾತಿ ಮತ್ತೊಂದು ಜಾತಿಯೊಡನೆ ವಿವಾಹವಾಗುವುದನ್ನು ನಿಷೇಧಿಸುತ್ತದೆ."[೧೮] ನಾಲ್ಕು ವರ್ಣಗಳನ್ನು ಪ್ರಮುಖವಾಗಿ ಗುರುತಿಸಬಹುದು. "ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಈ ಮೂರು ಮೇಲ್‌ಸ್ತರದಲ್ಲಿವೆ. ನಾಲ್ಕನೇ ಸ್ತರದಲ್ಲಿ ಶೂದ್ರ ಇರುತ್ತಾನೆ. ಇವರ ವೃತ್ತಿ ಮೇಲಿನ ಮೂರು ವರ್ಣಗಳ ಸೇವೆಯನ್ನು ಮಾಡುವುದು. ಆದರೆ ಇವರು ಅಸ್ಪೃಶ್ಯರಲ್ಲ. ೫ನೇ ಹಂತದಲ್ಲಿ ಅಂತ್ಯಜರು ಇರುತ್ತಾರೆ. ಆದರೆ ಇವರು ಅಸ್ಪೃಶ್ಯರು."[೧೯] ಅಸ್ಪೃಶ್ಯತೆಯನ್ನು ಹೋಗಲಾಡಿಸಬೇಕೆಂಬ ಉದ್ದೇಶದಿಂದಾಗಿ ಅಸ್ಪೃಶ್ಯತಾ ನಿವಾರಣಾ ಕಾಯಿದೆಯನ್ನು ಜಾರಿಗೆ ತಂದಿದ್ದರೂ ಕೂಡ, ಭಾರತ ದೇಶದಲ್ಲಿ ಅಸ್ಪೃಶ್ಯತೆ ಅನ್ನುವಂಥದ್ದು ಮುಕ್ತವಾಗಿ ಮತ್ತು ಅಮುಕ್ತವಾಗಿ ಅಸ್ತಿತ್ವದಲ್ಲಿದೆ.

ತಳಸಮುದಾಯಗಳಿಗೆ ಶಿಕ್ಷಣ ನೀಡುವಲ್ಲಿ ನಾಲ್ವಡಿ ಅವರ ಪಾತ್ರ ಪ್ರಮುಖವಾದದ್ದು. ೧೯೦೦ ಪಂಚಮರಿಗೆ ಶಿಕ್ಷಣ ನೀಡುವಲ್ಲಿ ಮೈಸೂರು ಸಂಸ್ಥಾನ ಬಹಳಷ್ಟು ಶ್ರಮಿಸಿತು. ಇದಕ್ಕೆ ಸಂಬಂಧಪಟ್ಟ ೧೯೦೦ರಿಂದ ೧೯೩೦ರವರೆಗಿನ ಸರ್ಕಾರದ ಪತ್ರಗಳನ್ನು ಅಧ್ಯಯನ ಮಾಡಿ, ಅಧ್ಯಯನ ವಿಷಯಕ್ಕೆ ಪೂರಕವಾಗಿ ಬಳಸಿಕೊಳ್ಳಲಾಗಿದೆ. ಪಂಚಮರಿಗೆ ಶಿಕ್ಷಣ ಕೊಡಿಸುವಲ್ಲಿ ಮಿಲ್ಲರ್ ಕಮಿಟಿಯ ಪಾತ್ರವೂ ಕೂಡ ಪ್ರಮುಖವಾದದ್ದು. ಇದು ತನ್ನ ವರದಿಯಲ್ಲಿ "ಸರ್ಕಾರ

ಹಾಗೂ ಅನುದಾನಿತ ಶಾಲೆಗಳಲ್ಲಿ ನಿಮ್ನವರ್ಗದವರಿಗೆ ಉಚಿತ ಪ್ರವೇಶವನ್ನು ನೀಡಿ ಮೌಲ್ಯಯುತವಾದ ಫಲಿತಾಂಶ ಬರಲು ಪ್ರಯತ್ನಿಸಿತು. ವಿದ್ಯಾರ್ಥಿಗಳಿಗೆ ಶಿಷ್ಯವೇತನವನ್ನು ನೀಡಬೇಕು ಎಂಬ ನಿಯಮ ಜಾರಿಯಾಯಿತು. ಮೈಸೂರಿನಲ್ಲಿ ಕೇಂದ್ರ ಪಂಚಮ ಶಾಲೆಯನ್ನು ತೆರೆಯುವುದರ ಜೊತೆಗೆ, ಸಾಮಾನ್ಯ ಹಾಗೂ ತಾಂತ್ರಿಕ ಶಿಕ್ಷಣಕ್ಕೆ ವಿಶೇಷ ಸೌಲಭ್ಯಗಳನ್ನು ಒದಗಿಸಿತು. ಉಚಿತ ವಸತಿ ನಿಲಯಗಳ ಸ್ಥಾಪನೆಗೆ ಪ್ರೋತ್ಸಾಹ ನೀಡಿತು."[೨೦] ಹೀಗೆ ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸಿತ್ತು. ಒಟ್ಟಿನಲ್ಲಿ ತಳಸಮುದಾಯಗಳ ಅಭಿವೃದ್ಧಿಯಲ್ಲಿ ಮಿಲ್ಲರ್ ಕಮಿಟಿಯ ಪಾತ್ರ ಪ್ರಮುಖವಾದದ್ದು.

ತಳಸಮುದಾಯಗಳನ್ನು ಕುರಿತು ಅಧ್ಯಯನ ಮಾಡಲು ಕೈಗೊಂಡಾಗ ಪ್ರಮುಖವಾಗಿ ದೊರೆತ ದಾಖಲೆಗಳೆಂದರೆ ಹೆಚ್.ವಿ.ನಂಜುಂಡಯ್ಯ ಅವರ ಜನಾಂಗೀಯ ಅಧ್ಯಯನಗಳು. ಇದರಲ್ಲಿ ಪ್ರಮುಖವಾಗಿ ಮೊಂಡ ಸಮುದಾಯವನ್ನು ಕುರಿತು ಅಧ್ಯಯನ ಮಾಡಿಸಿದ್ದಾರೆ. "ಮೊಂಡರು ಸಮಾಜದ ಚಿಕ್ಕ ಸಮುದಾಯ. ಬೇಡ ಸಮುದಾಯದ ಉಪಜಾತಿ ಎಂದು ಇವರು ಹೇಳುತ್ತಾರೆ. ಸಾಮಾನ್ಯವಾಗಿ ಇವರ ಭಾಷೆ ತೆಲುಗು"[೨೧] ಇಂದಿಗೂ ಇವರು ಭಿಕ್ಷುಕ ವೃತ್ತಿಯನ್ನು ಅವಲಂಬಿಸಿದ್ದಾರೆ. ಹಂದಿಜೋಗಿ ಸಮುದಾಯಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ "ಇವರ ವೃತ್ತಿ ಭಿಕ್ಷೆ ಬೇಡುವುದು. ೧೯೦೧ರ ಜನಗಣತಿ ಆಧಾರದ ಮೇಲೆ ಮೊಂಡರು, ಹೆಳವರು ಜೋಗಿ ಸಮುದಾಯದ ಅಡಿಯಲ್ಲಿ ಬರುತ್ತಾರೆ."[೨೨]

ಮೊಂಡರು, ಹಂದಿಜೋಗಿ ಸಮುದಾಯ ಮತ್ತು ಅವರ ಭಾಷೆ, ಆಚರಣೆಗಳು, ಸಾಮಾಜಿಕ ಸ್ಥಾನಮಾನಗಳನ್ನು ಕುರಿತು ಹೆಚ್.ವಿ.ನಂಜುಂಡಯ್ಯವರು ಅಧ್ಯಯನ ಮಾಡಿದ್ದಾರೆ.

ಹೆಚ್.ವಿ.ನಂಜುಂಡಯ್ಯ ಅವರು ಬೇಡರನ್ನು ಕುರಿತು ಅಧ್ಯಯನ ಮಾಡಿದ್ದಾರೆ. "ತೆಲುಗಿನಲ್ಲಿ ಇವರನ್ನು ಬೋಯಿ ಮತ್ತು ತಮಿಳಿನಲ್ಲಿ ವೇರ್ಡ ಎಂದು ಕರೆಯುತ್ತಾರೆ. ಹಿಂದಿನ ಜನಗಣತಿಯ ಪ್ರಕಾರ ಇವರ ಸಂಖ್ಯೆ ೨೪೪, ೯೬೦ ಇದರಲ್ಲಿ ೧೨೩,೩೪೫ ಗಂಡು ಮತ್ತು ೧೨೧, ೬೪೫ ಹೆಣ್ಣು ಇದ್ದಾರೆ. ಇವರನ್ನು ನಾಯಕ ಅಥವಾ ನಾಯಕ ಮಕ್ಕಳು ಎಂದು ಕರೆಯುತ್ತಾರೆ. ಇವರ ಭಾಷೆ ತೆಲುಗು. ಬಹಳ ವರ್ಷಗಳ ಹಿಂದೆ ಕನ್ನಡದ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ."[೨೩]

ನಂಜುಂಡಯ್ಯ ಅವರು ಬೇಡ ಸಮುದಾಯದಲ್ಲೇ ಹಲವಾರು ಉಪಜಾತಿಗಳನ್ನು ಗುರುತಿಸಿದ್ದಾರೆ.

"* ಊರು ಬೇಡರು: ತೆಲುಗಿನಲ್ಲಿ ಇವರನ್ನು ಚಿನ್ನ ಬೋಯಿ ಬಾಂಡ್ಲು ಎಂದು ಕರೆಯುತ್ತಾರೆ.

* ಮ್ಯಾಸ ಬೇಡರು: ಕೆಲವು ಸಂದರ್ಭದಲ್ಲಿ ಇವರನ್ನು ಪೆದ್ದ ಬೋಯಿವಾಂಡ್ಲು ಮತ್ತು ಚಂಚಲು ಎಂದು ಕರೆಯುತ್ತಾರೆ.

* ಗುಡ್ಲು ಬೇಡರು: ಇವರನ್ನು ಗುಂತಬೋೕಯಿ ವಾಂಡ್ಲು ಎಂದು ಕರೆಯುತ್ತಾರೆ. ಜೊತೆಗೆ ಅಡ್ಡ ಚೇತುಲವಾಳ್ಳು ಎಂದು ಕರೆಯುತ್ತಾರೆ.
* ಮಾರಮ್ಮನ ಬೇಡರು: ಇವರನ್ನು ಮುತ್ಯಾಲಯಮ್ಮ ಅಥವಾ ಊರುಮೆ ಬೇಡರು, ಸದರ ಬೇಡರು ಎಂದು ಕರೆಯುತ್ತಾರೆ.
* ಹಾಲು ಬೇಡರು
* ಮೊಂಡ ಬೇಡರು"

ಹೀಗೆ ಬೇಡ ಸಮುದಾಯದಲ್ಲಿ ಹಲವಾರು ಉಪಜಾತಿಗಳು ಇರುವುದನ್ನು ಗಮನಿಸಿದ್ದಾರೆ. ಹೆಚ್.ವಿ.ನಂಜುಂಡಯ್ಯ ಅವರು ಬೇಡ ಸಮುದಾಯಗಳ ಭಾಷೆ, ವಿವಾಹ, ಆಚರಣೆ, ಅವರ ಸಾಮಾಜಿಕ ಸ್ಥಾನಮಾನಗಳ ಬಗ್ಗೆ ಅಧ್ಯಯನ ಮಾಡಿದ್ದಾರೆ.

ವಿಜಯ್ ಪೂಣಚ್ಚ ತಂಬಂಡ ಅವರ ಕೆಳವರ್ಗದ ಪ್ರತಿಭಟನೆ **ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ** ಎಂಬ ಕೃತಿಯಲ್ಲಿ ಗ್ರಾಂಸಿಯ ಬದುಕು ಮತ್ತು ರಾಜಕಾರಣದ ಪರಿಚಯವನ್ನು ಮಾಡಲಾಗಿದೆ. ಕೆಳವರ್ಗಗಳ ಸಂವೇದನೆ ಮತ್ತು ಪ್ರತಿಭಟನೆಗಳಿಗೆ ಸಂಬಂಧಿಸಿ ದಂತೆ ಸಬಾಲ್ಟರ್ನ್ ಅಧ್ಯಯನದ ನೆಲೆಗಳನ್ನು ವಿಮರ್ಶಿಸಲಾಗಿದೆ.

ಫ್ರಾನ್ಸಿಸ್ ಬುಕನನ್ ಅವರು **A Journey from Madras through the contries of Mysore, Canara and Malabar** ಕೃತಿಯಲ್ಲಿ ತುಮಕೂರು ಜಿಲ್ಲೆಗೆ ಭೇಟಿ ನೀಡಿ, ಸಂಗ್ರಹಿಸಿದ ವಿವರಗಳನ್ನು ಕುರಿತು ಚರ್ಚಿಸಿದ್ದಾರೆ. ತುಮಕೂರು ಜಿಲ್ಲೆಯ "ಶಿರಾ, ಪಾವಗಡ, ನಿಡಗಲ್ಲು, ಮಧುಗಿರಿ, ಮಿಡಿಗೇಸಿ, ಬಡವನಹಳ್ಳಿ, ಚಂದ್ರಗಿರಿ, ತೋವಿನಕೆರೆ, ತುಮಕೂರು ಹಾಗೂ ತುರುವೇಕೆರೆ"[೨೫] ಸ್ಥಳಗಳಿಗೆ ಭೇಟಿ ನೀಡಿದ್ದಾರೆ. ಅಲ್ಲಿನ ಬೆಳೆಗಳ ಬಗ್ಗೆ ಹಾಗೂ ಮಣ್ಣಿನ ಬಗ್ಗೆ ಚರ್ಚಿಸಿದ್ದಾರೆ. "ಬಾವಿಗಳಲ್ಲಿನ ನೀರನ್ನು ಕಪಿಲೈ ಮೂಲಕ ತೋಟಗಳಿಗೆ ನೀರನ್ನು ಹಾಯಿಸಲಾಗುತ್ತಿತ್ತು"[೨೬] ಎಂದು ವಿವರಿಸಿದ್ದಾರೆ. ಇವರು ಕಾಡುಗೊಲ್ಲರ ಬಗ್ಗೆ ಅಧ್ಯಯನ ಮಾಡಿದ್ದಾರೆ. ಕಾಡುಗೊಲ್ಲ ಸಮುದಾಯದ ಪ್ರಮುಖ ವೃತ್ತಿ ಪಶು ಸಾಕಣೆ. ಇವರು ಹಸುಗಳನ್ನು, ಕುರಿ ಮತ್ತು ಮೇಕೆಗಳನ್ನು ಸಾಕುತ್ತಿದ್ದರು. ಇದಕ್ಕೆ ಒಂದು ಉದಾಹರಣೆಯನ್ನು ಕೂಡ ದಾಖಲಿಸಿದ್ದಾರೆ. "ಒಬ್ಬ ಶ್ರೀಮಂತ ಗೊಲ್ಲ ಸಮುದಾಯದ ವ್ಯಕ್ತಿ ೨೦೦ ಹಸುಗಳನ್ನು, ೩೦ ಎಮ್ಮೆಗಳನ್ನು, ೫೦ ಕುರಿಗಳನ್ನು ಮತ್ತು ೧೦೦ ಮೇಕೆಗಳನ್ನು ಹೊಂದಿದ್ದರು."[೨೭] ಇಂದಿಗೂ ಸಹ ಈ ಕಾಡುಗೊಲ್ಲ ಸಮುದಾಯ ಪಶು ಸಾಕಣೆಯನ್ನೇ ತಮ್ಮ ಪ್ರಮುಖ ವೃತ್ತಿಯನ್ನಾಗಿ ಮಾಡಿಕೊಂಡಿದೆ.

ಕೆ.ಆರ್.ಬಸವರಾಜು ಅವರ **ಕರ್ನಾಟಕ ಪ್ರಥಮ ದಲಿತಮಂತ್ರಿ ಆರ್. ಚನ್ನಿಗರಾಮಯ್ಯ ಜೀವನ ಮತ್ತು ಸಾಧನೆ** ಕೃತಿಯು ಚನ್ನಿಗರಾಮಯ್ಯ ಅವರ ಜೀವನ, ರಾಜಕೀಯ ಪ್ರವೇಶ ಹಾಗೂ ಸಾಧನೆಗಳ ಬಗ್ಗೆ ತಲಸ್ಪರ್ಶಿಯವಾದ ಮಾಹಿತಿಯನ್ನು ಒಳಗೊಂಡಿದೆ.

ಬಂದುಕುಂಟೆ ನಾಗರಾಜಯ್ಯ ಅವರ **ಬಿತ್ತನೆ ಬೀಜ,** ತುಂಬಾಡಿ ರಾಮಯ್ಯ ಅವರ **ಮಣೆಗಾರ,** ಶ್ರೀಪಾದ ಭಟ್ ಮತ್ತು ಹುಟ್ಟುರಾಜು ಎಲ್. ಅವರ **ತುಮಕೂರು ಜಿಲ್ಲೆಯ ಸ್ಥಳನಾಮಗಳು,** ಚಿಕ್ಕಣ್ಣ ಯಣ್ಣೆಕಟ್ಟೆ ಅವರ **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,** ನಟರಾಜ್ ಬೂದಾಳ್ ಅವರ **ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯ ತತ್ವಪದಕಾರರು,** ನಾಗರಾಜ ಓ., ಅವರ **ತುಮಕೂರು ಜಿಲ್ಲೆಯ ಗ್ರಾಮದೇವತೆಗಳು** ಮೊದಲಾದ ಕೃತಿಗಳಲ್ಲಿ ಅಧ್ಯಯನ ವಿಷಯಕ್ಕೆ ಪೂರಕವಾದ ವಿಷಯ ವಿವರಣೆಗಳಿವೆ.

ಆದರೆ ವಸಾಹತು ಮತ್ತು ವಸಾಹತೋತ್ತರ ಕಾಲಘಟ್ಟಕ್ಕೆ ಸಂಬಂಧಿಸಿದಂತೆ ತಳ ಸಮುದಾಯಗಳನ್ನು ಕುರಿತು ಅಧ್ಯಯನಗಳು ನಡೆದಿರುವುದು ವಿರಳ.

ಗಂಗಾಧರಯ್ಯ ಹೆಚ್.ಎಂ. ಅವರಿಗೆ ಸಂಬಂಧಿಸಿದಂತೆ ಕವಿತಾಕೃಷ್ಣ ಅವರ **ಸಾಧನೆಯ ಶಿಲ್ಪಿ,** ಮಾದೇವ್‌ಭರಣಿ ಅವರ **ಶಿಕ್ಷಣ ಭೀಷ್ಮ** ಎಂಬ ಕೃತಿಗಳು, ವೀಣಾಕುಮಾರಿ ಡಿ.ಎಂ. ಅವರ **ಶಿಕ್ಷಣ ತಜ್ಞ ಡಾ.ಹೆಚ್.ಎಂ.ಗಂಗಾಧರಯ್ಯ ಅವರ ಜೀವನ ಮತ್ತು ಸಾಧನೆ** ಎಂಬ ಎಂ.ಫಿಲ್ ಅಧ್ಯಯನಗಳಾಗಿವೆ. ಪ್ರಸ್ತುತ ಕೃತಿ ಹಾಗೂ ನಿಬಂಧಗಳು ಗಂಗಾಧರಯ್ಯ ಅವರ ಬಾಲ್ಯ, ವಿದ್ಯಾಭ್ಯಾಸ, ಕಲಾಶಿಕ್ಷಣ, ಸಮಾಜ ಸೇವೆ, ರಾಜಕೀಯ, ಸಿದ್ಧಾರ್ಥ ಶಿಕ್ಷಣ ಸಂಸ್ಥೆಗೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುತ್ತವೆ.

### ೧.೪. ಅಧ್ಯಯನದ ವಿಧಾನ

ತುಮಕೂರು ಜಿಲ್ಲೆಯ ತಳಸಮುದಾಯಗಳನ್ನು ಕುರಿತ ಅಧ್ಯಯನವು ಬಹುತೇಕ ಕ್ಷೇತ್ರಕಾರ್ಯವನ್ನು ಅವಲಂಬಿಸಿದೆ. ಇದರ ಬಗ್ಗೆ ಇದುವರೆಗೂ ನಡೆದಿರುವ ಅಧ್ಯಯನಗಳನ್ನು ಗಮನದಲ್ಲಿಟ್ಟುಕೊಂಡು ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಕ್ರೋಢೀಕರಿಸುವುದು ಮತ್ತು ಆ ಪರಿಸರದಲ್ಲಿರುವ ತಳಸಮುದಾಯಗಳನ್ನು ದಾಖಲಿಸುವುದಾಗಿದೆ. ಪ್ರಾಥಮಿಕ ಹಾಗೂ ದ್ವಿತೀಯ ಆಕರಗಳು ಇಲ್ಲಿ ಹೆಚ್ಚು ಉಪಯುಕ್ತವಾಗಿರುತ್ತದೆ. ಪತ್ರಾಗಾರ ಇಲಾಖೆ, ಗ್ರಂಥಾಲಯಗಳು, ಸಂಘ–ಸಂಸ್ಥೆಗಳು ಹಾಗೂ ಜಾನಪದ ಗಾಯಕರು ಇತ್ಯಾದಿ ಮೂಲಗಳಿಂದ ಮಾಹಿತಿ ಸಂಗ್ರಹಿಸುವುದು ಅಧ್ಯಯನದ ವಿಧಾನವಾಗಿರುತ್ತದೆ. ಅಧ್ಯಯನದ ಮೊದಲನೆಯ ಹಂತದಲ್ಲಿ ಸಂಶೋಧನೆಗೆ ಅವಶ್ಯವಾದ ಮಾಹಿತಿಯನ್ನು ಕಲೆಹಾಕುವ, ಆಕರಗಳ ನಿರ್ಮಾಣದ

ಕಾರ್ಯವನ್ನು ಕೈಗೊಳ್ಳಲಾಗಿದೆ. ಎರಡನೆಯ ಹಂತದಲ್ಲಿ ಕಲೆಹಾಕಿದ ಮಾಹಿತಿಗಳನ್ನು ವಿಶ್ಲೇಷಣೆ ಮಾಡುವ ಕಾರ್ಯ ಕೈಗೊಳ್ಳಲಾಗಿದೆ. ಮೂರನೆಯ ಹಂತದಲ್ಲಿ ಕಲೆಹಾಕಿದ ಮಾಹಿತಿಗಳನ್ನು ಹಲವಾರು ದೃಷ್ಟಿಕೋನಗಳಿಂದ ವಿಶ್ಲೇಷಣೆ ಮಾಡುವ ಹಾಗೂ ಮೌಲ್ಯಮಾಪನ ಮಾಡುವ ಪದ್ಧತಿಯನ್ನು ಅಳವಡಿಸಿಕೊಳ್ಳಲಾಗಿದೆ.

ಪ್ರಸ್ತುತ ಸಂಶೋಧನೆಗೆ ಆಯ್ಕೆ ಮಾಡಿಕೊಂಡ ವಿಷಯವು ರಾಜಕೀಯ, ಸಾಮಾಜಿಕ, ಆರ್ಥಿಕ ಮತ್ತು ವೈಚಾರಿಕತೆಗಳ ದೃಷ್ಟಿಯಿಂದ ತನ್ನದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಹೀಗಾಗಿ ಪ್ರಸ್ತುತ ಸಂಶೋಧನಾ ಮಹಾಪ್ರಬಂಧವನ್ನು ವಿಶಾಲತೆಯಿಂದ ಸೂಕ್ಷ್ಮತೆಯೆಡೆಗೆ ನಡೆಸಲಾಗಿದೆ. ಇತ್ತೀಚೆಗೆ ವಿದ್ವಾಂಸರು, ಚರಿತ್ರೆಕಾರರು ಕೆಳಹಂತದ ಜನಸಾಮನ್ಯರ, ನಿರ್ಲಕ್ಷಿತರ, ಶೋಷಿತರ ಬದುಕು ಮತ್ತು ಹೋರಾಟಗಳೇನು ಎಂಬುದರತ್ತ ಗಮನಹರಿಸಿದ್ದಾರೆ. ಇದನ್ನೆ ಸಬಾಲ್ಟರ್ನ್ ಅಧ್ಯಯನ ಎಂದು ಸಬಾಲ್ಟ್ರನ್ ಪಂಥ ಎಂದು ಕರೆಯಲಾಗಿದೆ. ಇಂತಹ ಪಂಥವನ್ನು ಆಧಾರವಾಗಿಟ್ಟುಕೊಂಡು ಸಮಾಜದಲ್ಲಿನ ನಿರ್ಲಕ್ಷಿತರ, ಶೋಷಿತರ, ಕೆಳವರ್ಗದವರ ಜೀವನ ಮತ್ತು ಸಮಸ್ಯೆಗಳನ್ನು ಮುಂದಿಟ್ಟುಕೊಂಡು ಸಂಶೋಧನೆ ಮಾಡುವ ಉದ್ದೇಶ ಈ ಅಧ್ಯಯನದ್ದಾಗಿದೆ. ಈ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯ ತಳಸಮುದಾಯಗಳ ಹೆಜ್ಜೆ ಗುರುತುಗಳನ್ನು ದಾಖಲಿಸುವ ಪ್ರಯತ್ನ ಮಾಡಲಾಗಿದೆ. ಇದಕ್ಕಾಗಿ ಅನೇಕ ಕೃತಿಗಳನ್ನು, ಅಪ್ರಕಟಿತ ದಾಖಲೆಗಳನ್ನು, ಮೌಖಿಕ ಸಂದರ್ಶನಗಳನ್ನು, ಹೋರಾಟಗಾರರ ಹೇಳಿಕೆಗಳನ್ನು, ಅಭಿಪ್ರಾಯಗಳನ್ನು ಸರಕಾರದ ವರದಿಗಳನ್ನು ಹೀಗೆ ವಿವಿಧ ಮಾಹಿತಿಗಳನ್ನು ಸಂಗ್ರಹಿಸಿ, ಪರಿಶೀಲಿಸಿ, ಆಕರಗಳನ್ನು ಸಂದರ್ಭಾನುಸಾರ ಬಳಸಿಕೊಂಡು ಪ್ರಸ್ತುತ ಅಧ್ಯಯನವನ್ನು ಕಟ್ಟುವ ಪ್ರಯತ್ನ ಮಾಡಲಾಗಿದೆ.

### ೧.೫. ಅಧ್ಯಯನದ ಸ್ವರೂಪ

ಪ್ರಸ್ತುತ ಯೋಜನೆಯ ಒಟ್ಟು ಎಂಟು ಅಧ್ಯಾಯಗಳನ್ನು ಹಾಗೂ ಅವುಗಳಿಗೆ ಪೂರಕವಾದ ಅನುಬಂಧ ಹೊಂದಿದೆ. ಕ್ಷೇತ್ರಕಾರ್ಯದ ಮೂಲಕ ಮಾಹಿತಿಗಳನ್ನು ಸಂಗ್ರಹಿಸಿ, ಮಹಾ ಪ್ರಬಂಧವನ್ನು ಸಿದ್ಧಪಡಿಸಿರುವುದು ಇಲ್ಲಿನ ಅಧ್ಯಾಯಗಳಿಂದ ಸ್ಪಷ್ಟವಾಗುತ್ತದೆ. ಇಲ್ಲಿಯವರೆಗೆ ಈ ಕುರಿತಾಗಿ ನಡೆದಿರುವ ಅಧ್ಯಯನಗಳ ಸಮೀಕ್ಷೆಯನ್ನೂ ಮಾಡಲಾಗಿದೆ. ತಳಸಮುದಾಯ ಪದದ ಅರ್ಥವನ್ನು ಅಧ್ಯಾಯ ಎರಡಲ್ಲಿ ಮಾಡಲಾಗಿದೆ. ತುಮಕೂರು ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ, ಜನಪದ ಕಾವ್ಯಗಳಲ್ಲಿ ತಳಸಮುದಾಯಗಳನ್ನು ಕುರಿತು ಪ್ರತಿಫಲಿಸಿದ ಆಯಾಮಗಳ ಬಗ್ಗೆ ತತ್ವಪದಗಳು ಹಾಗೂ ಸ್ಥಳನಾಮಗಳನ್ನು ಕುರಿತು ವಿಮರ್ಶಾತ್ಮಕವಾಗಿ ಚರ್ಚಿಸಲಾಗಿದೆ.

ಅಧ್ಯಾಯ ಮೂರರಲ್ಲಿ ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿ ತಳಸಮುದಾಯಗಳು, ಅಸ್ಪೃಶ್ಯತೆಯ ಮೂಲ, ತಳಸಮುದಾಯಗಳ ಮೇಲಾಗುತ್ತಿರುವ ದೌರ್ಜನ್ಯಗಳು, ತಳಸಮುದಾಯದ ಮಹಿಳೆ ಯಾವ ರೀತಿಯಾಗಿ ಶೋಷಣೆಗೆ ಒಳಗಾಗುತ್ತಿದ್ದಾಳೆ ಎಂಬುದನ್ನು ವಿಶ್ಲೇಷಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ತಳಸಮುದಾಯಗಳಲ್ಲಿ ಇಂದಿಗೂ ನಡೆದುಕೊಂಡು ಬರುತ್ತಿರುವ ಪ್ರಕೃತಿ ಸಂಬಂಧಿ ಆಚರಣೆಗಳು ಹಾಗೂ ಅಮಾನವೀಯ ಆಚರಣೆಗಳ ಕುರಿತು ವಿವರಿಸಲಾಗಿದೆ. ಈ ಆಚರಣೆಗಳು ಸಾಮಾಜಿಕವಾಗಿ ಒಪ್ಪಿತವಾದ ಹಾಗೂ ಹೀಗೇ ಇರಬೇಕು ಎಂಬುದಾಗಿ ನಿರ್ಧರಿಸಲ್ಪಟ್ಟ ಆಚರಣೆಗಳಾಗಿವೆ. ಹಾಗಾಗಿ ಈ ಆಚರಣೆಗಳನ್ನು ತಳಸಮುದಾಯಗಳು ನಡೆಸಿಕೊಂಡು ಬರಲೇಬೇಕು ಎನ್ನುವ ಒತ್ತಡ ಹಾಗೂ ಒತ್ತಾಯವು ಸಮಾಜದಲ್ಲಿದೆ. ಈ ಆಚರಣೆಗಳ ಹಿಂದೆ ತಳಸಮುದಾಯದ ಬದುಕು ಕಳೆದುಹೋಗುತ್ತಿರುವುದನ್ನು ಹಾಗೂ ಮೇಲ್ವರ್ಗಗಳಿಗೆ ಇದೊಂದು ಮನರಂಜನೆಯಾಗಿ ಕಂಡುಬರುತ್ತಿರುವುದನ್ನು ಉದಾಹರಣೆಗಳ ಮೂಲಕ ವಿಶ್ಲೇಷಿಸಲಾಗಿದೆ. ಕೆಲವೊಂದು ಅಮಾನವೀಯ ಆಚರಣೆಗಳನ್ನು ಸರ್ಕಾರ ನಿಷೇಧಿಸಿ ದ್ದರೂ(ತುರುವೇಕರೆ, ಪಾವಗಡದಲ್ಲಿ ನಡೆಯುವ ಮಡೆಸ್ನಾನ ಸೇವೆ), ಪಾರಂಪರಿಕವಾಗಿ ನಡೆದುಕೊಂಡು ಬಂದಿರುವ ಸೇವೆ ಮುಂದುವರಿಯಬೇಕು ಎಂಬುದಾಗಿ ಬುಡಕಟ್ಟು ಸಮುದಾಯವೊಂದು(ಮಲೆಕುಡಿಯ) ಸರ್ಕಾರದ ಆದೇಶದ ವಿರುದ್ಧ ಪ್ರತಿಭಟನೆ ನಡೆಸಿರುವುದನ್ನೂ ಕಾಣಬಹುದಾಗಿದೆ. ಇದರಿಂದ ತಿಳಿದುಬರುವ ವಿಚಾರವೆಂದರೆ, ಈ ಬಗೆಯ ಆಚರಣೆಗಳನ್ನು ತಳಸಮುದಾಯಗಳ ಬದುಕಿನ ಭಾಗ ಎಂಬುದಾಗಿ ನಂಬಿಸಿರುವುದು.

ತಳಸಮುದಾಯಗಳ ಮತಾಂತರ ಪ್ರಕ್ರಿಯೆ ಕುರಿತು ಐದನೇ ಅಧ್ಯಾಯದಲ್ಲಿ ಚರ್ಚೆಗೆ ಒಳಪಡಿಸಲಾಗಿದೆ. ಮತಾಂತರ ಪದದ ಬದಲಾಗಿ ಮತಸ್ವೀಕಾರ ಪದವನ್ನು ಬಳಸಲಾಗಿದೆ. ತಳಸಮುದಾಯಗಳೇ ಮತ ಸ್ವೀಕಾರ ಮಾಡುತ್ತಾರೆ ಎಂಬ ವಿಚಾರವನ್ನು ಗಮನದಲ್ಲಿಟ್ಟುಕೊಂಡು ತಳಸಮುದಾಯದ ಬದುಕಿನ ಸೂಕ್ಷ್ಮ ಅಧ್ಯಯನವನ್ನು ನಡೆಸುವ ಪ್ರಯತ್ನವನ್ನು ಮಾಡಲಾಗಿದೆ.

ಅಧ್ಯಾಯ ಆರು ತಳಸಮುದಾಯಗಳ ಆರ್ಥಿಕ ವ್ಯವಸ್ಥೆ, ಭೂಮಿ ಪ್ರಶ್ನೆಗಳು, ರಾಜಕೀಯ, ಶೈಕ್ಷಣಿಕ ಹಾಗೂ ಕಾನೂನು ವ್ಯವಸ್ಥೆಯನ್ನು ಕುರಿತು ಚರ್ಚಿಸುತ್ತದೆ.

ಏಳನೆಯ ಅಧ್ಯಾಯವು ತುಮಕೂರು ಜಿಲ್ಲೆಯಲ್ಲಿನ ದಲಿತ ಚಳವಳಿ, ಹೋರಾಟಗಳು, ಸಫಲತೆ ಮತ್ತು ವಿಫಲತೆಗಳ ಬಗ್ಗೆ ಚರ್ಚಿಸಿದೆ.

ಪೌರಕಾರ್ಮಿಕರನ್ನು ಕುರಿತು ಎಂಟನೇ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಪೌರಕಾರ್ಮಿಕ ಪದದ ಅರ್ಥ, ಅವರ ಮೇಲಾಗುತ್ತಿರುವ ಶೋಷಣೆಗಳ ಬಗೆಗೆ, ದೈಹಿಕವಾಗಿ ಹಾಗೂ ಮಾನಸಿಕವಾಗಿ ಕ್ಷೀಣಿಸುವಂತೆ ಮಾಡುತ್ತಿರುವ ಪ್ರಕ್ರಿಯೆಗಳು, ಪೌರಕಾರ್ಮಿಕ ಮಹಿಳೆ ಯಾವ

ರೀತಿಯಾಗಿ ಶೋಷಣೆಗೆ ಒಳಗಾಗುತ್ತಿದ್ದಾಳೆ ಎಂಬುದರ ಬಗೆಗೂ ಚಿಂತನೆ ನಡೆಸಲಾಗಿದೆ. ಸ್ವಚ್ಛತಾ ಅಭಿಯಾನ, ಪೌರಕಾರ್ಮಿಕರ ಆರೋಗ್ಯ ಮತ್ತು ಮಲಹೊರುವ ಪದ್ಧತಿ ನಿಷೇಧ ಕಾನೂನನ್ನು ಕುರಿತು ವಿಮರ್ಶಾತ್ಮಕವಾಗಿ ಚಿಂತಿಸಲಾಗಿದೆ.

ಒಂಬತ್ತನೇ ಅಧ್ಯಾಯವು ಸಮಾರೋಪವಾಗಿದ್ದು, ಅಧ್ಯಯನದಲ್ಲಿ ಕಂಡುಕೊಂಡ ಫಲಿತಗಳನ್ನು ಒಳಗೊಂಡಿದೆ. ಅನುಬಂಧದಲ್ಲಿ ಪರಾಮರ್ಶನ ಗ್ರಂಥ, ನಕ್ಷೆ ಮತ್ತು ಛಾಯಾಚಿತ್ರಗಳನ್ನು ನೀಡಲಾಗಿದೆ.

**ಕೊನೆ ಟಿಪ್ಪಣಿಗಳು**

೧. ಮೋಹನ್‌ಕೃಷ್ಣ ರೈ ಕೆ.(ಲೇ), ೨೦೦೮, **ಚರಿತ್ರೆ ನಿರ್ಮಾಣ ಹಾಗೂ ವರ್ತಮಾನದ ಅಜೆಂಡಾಗಳು,** ವಿರೂಪಾಕ್ಷಿ ಪೂಜಾರಹಳ್ಳಿ(ಸಂ), ಚರಿತ್ರೆ ಅಧ್ಯಯನ, ಸಂಪುಟ ೪, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೫

೨. ಅದೇ, ಪು.೩೭

೩. ಮೋಹನ್‌ಕೃಷ್ಣ ರೈ ಕೆ.(ಲೇ), ೨೦೦೯, **ಪರ್ಯಾಯ ಚರಿತ್ರೆ: ರಚನೆಯ ಸಾಧ್ಯತೆಗಳು,** ಚಿನ್ನಸ್ವಾಮಿ ಸೋಸಲೆ(ಸಂ), ಚರಿತ್ರೆ ಅಧ್ಯಯನ, ಸಂಪುಟ ೫, ಸಂಚಿಕೆ ೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯

೪. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, **ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು,** ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೧೨

೫. ಮೋಹನ್‌ಕೃಷ್ಣ ರೈ ಕೆ.(ಲೇ), ೨೦೦೯, ಪೂರ್ವೋಕ್ತ, ಪು.೧

೬. ವಿಜಯ್ ಪೂಣಚ್ಚ ತಂಬಂಡ, ೨೦೦೯, **ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧

೭. ಅದೇ, ಪು.೨

೮. ಮೋಹನ್‌ಕೃಷ್ಣ ರೈ ಕೆ.(ಲೇ), ೨೦೦೯, ಪೂರ್ವೋಕ್ತ, ಪು.೬

೯. ಚಿನ್ನಸ್ವಾಮಿ ಸೋಸಲೆ ಎನ್., ೨೦೧೦, **ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೮

೧೦. **ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂಪುಟ ೪,** ೨೦೧೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಪು.೧೪೧

೧೧. ಚಿನ್ನಸ್ವಾಮಿ ಸೋಸಲೆ ಎನ್., ೨೦೧೬, **ಒನಕೆ ಓಬವ್ವ ದಲಿತ ಸಂವೇದನೆಯೊಂದಿಗೆ ಮುಖಾಮುಖಿ,** ಗೌತಮ ಬುಕ್ ಹೌಸ್, ಕಮಲಾಪುರ, ಪು.೪೪

೧೨. ಯೋಗೀಶ್ ಡಿ.ಎನ್., ೨೦ ಜುಲೈ ೨೦೧೨, ಪ್ರಜಾವಾಣಿ ದಿನಪತ್ರಿಕೆ

೧೩. ಕೋಸಾಂಬಿ ಡಿ.ಸಿ., ವೇಣುಗೋಪಾಲ್ ಟಿ.ಎಸ್., ಶೈಲಜಾ(ಅನು), ೨೦೧೩, **ಪುರಾಣ ಮತ್ತು ವಾಸ್ತವ,** ಚಿಂತಹ ಪುಸ್ತಕ, ಬೆಂಗಳೂರು, ಪು.೨೪

೧೪. ಅದೇ, ಪು.೪೭

೧೫. ಅದೇ, ಪು.೪೧

೧೬. ಅದೇ, ಪು.೪೧

೧೭. ಬರ್ನಾಡ್ ಎಸ್.ಕೋಹನ್, ೨೦೧೩, **ಆನ್ ಆನ್‌ಥ್ರೋಪಾಲಜಿಸ್ಟ್ ಅಮಾಂಗ್‌ದ ಹಿಸ್ಟೋರಿಯನ್ಸ್ ಅಂಡ್ ಅದರ್ ಎಸ್ಸೇಸ್,** ಆಕ್ಸ್‌ಫರ್ಡ್ ಯುನಿವರ್‌ಸಿಟಿ ಪ್ರೆಸ್, ನ್ಯೂ ಡೆಲ್ಲಿ, ಪು.೨೫೫

೧೮. Dube S.C., 2015, Indian Society, National Book Trust India, New Delhi, Pp.48.

೧೯. Ibid, Pp.49

೨೦. Miller Committee Report, 1918, Pp.5

೨೧. Nanjundayya H.V., 1911, Mondaru Cate, The Ethnographical Survey of Mysore, Printed at the Government Press, Bangalore, P.1

೨೨. Nanjundayya H.V., 1913, Handi Jogies, The Ethnographical Survey of Mysore, Printed at the Government press, Bangalore, P.1

೨೩. Nanjundayya H.V., 1906, BEDA CASTE, The Ethnographical Survey of Mysore, Printed at the Government Press, Bangalore, P.1

൧൪. Ibid, Pp.3

൧൫. Fransis Bukanan, 1807, A Journey from Madras through the contries of Mysore, Canara and Malabar, P.1

൧൬. Ibid, Pp.1

൧൭. Ibid, Pp.13

## ಅಧ್ಯಾಯ: ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

## ಅಧ್ಯಾಯ: ಎರಡು

# ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

### ಭೌಗೋಳಿಕ ಹಿನ್ನೆಲೆ

ಕರ್ನಾಟಕದ ಪೂರ್ವ ಭಾಗದ ಮೈದಾನ ಪ್ರದೇಶದಲ್ಲಿ ಗುರುತಿಸಿಕೊಂಡಿರುವ ಹಲವು ಜಿಲ್ಲೆಗಳಲ್ಲಿ ಒಂದಾದ ತುಮಕೂರು ರಾಜ್ಯದ ಆಗ್ನೇಯ ಭಾಗದಲ್ಲಿದೆ. ಕರ್ನಾಟಕ ರಾಜ್ಯದ ಬಯಲು ಸೀಮೆಯ ಜಿಲ್ಲೆ ತುಮಕೂರು. ಈ ಜಿಲ್ಲೆಯು ಉತ್ತರದಲ್ಲಿ ಆಂಧ್ರ ಪ್ರದೇಶಕ್ಕೆ ಸೇರಿದ ಅನಂತಪುರ ಜಿಲ್ಲೆಯಿಂದ ಸುತ್ತುವರೆದಿದೆ. ಪೂರ್ವದಲ್ಲಿ ಕೋಲಾರ ಮತ್ತು ಬೆಂಗಳೂರು ಜಿಲ್ಲೆಗಳಿವೆ. ದಕ್ಷಿಣಕ್ಕೆ ಮಂಡ್ಯ ಜಿಲ್ಲೆಯಿದೆ. ಹಾಗೆಯೇ ಪಶ್ಚಿಮ ದಿಕ್ಕಿನಲ್ಲಿ ಚಿತ್ರದುರ್ಗ ಮತ್ತು ಹಾಸನ ಜಿಲ್ಲೆಗಳಿವೆ. ಈ ಜಿಲ್ಲೆಯು ತುಮಕೂರು, ಮಧುಗಿರಿ, ಕೊರಟಗೆರೆ, ಸಿರಾ, ಪಾವಗಡ, ಚಿಕ್ಕನಾಯಕನಹಳ್ಳಿ, ಗುಬ್ಬಿ, ತಿಪಟೂರು, ತುರುವೇಕೆರೆ ಮತ್ತು ಕುಣಿಗಲ್ ಎಂಬ ಹತ್ತು ತಾಲ್ಲೂಕುಗಳನ್ನು ಹೊಂದಿದೆ. ಜಿಲ್ಲೆಯ ಈಶಾನ್ಯ ಭಾಗವು ಉಳಿದ ಪ್ರದೇಶಗಳಿಗಿಂತ ಪೂರ್ಣವಾಗಿ ಬೇರ್ಪಟ್ಟಿರುವುದು ಇದರ ಒಂದು ವಿಶಿಷ್ಟ ಲಕ್ಷಣವಾಗಿದೆ. ಈ ಭಾಗವು ಪಾವಗಡ ತಾಲ್ಲೂಕಿನ ಪ್ರದೇಶವನ್ನು ಒಳಗೊಂಡಿದ್ದು, ಇದು ನೆರೆ ರಾಜ್ಯ ಆಂಧ್ರಪ್ರದೇಶದ ಗಡಿಯನ್ನು ಎಲ್ಲಾ ಕಡೆಯಿಂದಲೂ ಸುತ್ತುವರೆದಿದೆ.

ಜಿಲ್ಲೆಯ ಒಂದು ತಾಲ್ಲೂಕಾದ ಪಾವಗಡ ಭೌಗೋಳಿಕವಾಗಿ ಪ್ರತ್ಯೇಕಗೊಂಡಿದ್ದು, ಮಧುಗಿರಿ ಪಾವಗಡ ಮಧ್ಯೆ ಆಂಧ್ರದ ಮಡಕಶಿರಾ ಇದೆ. ಪಾವಗಡಕ್ಕೆ ಮಧುಗಿರಿಯಿಂದ ಹೊರಟರೆ ಮಡಕಶಿರಾ ಮೂಲಕವೇ ಹೋಗಬೇಕು. ಆಗಿನ ಕರ್ನಾಟಕದ ಮುಖ್ಯಮಂತ್ರಿಗಳಾಗಿದ್ದ ಶ್ರೀ ಬಿ.ಡಿ.ಜತ್ತಿ ಅವರು ಸರಕಾರದ ಕಡೆಯಿಂದ ಗಡಿ ಸಮಿತಿಗೊಂದು ಮನವಿ ಮಾಡಿಕೊಂಡಿದ್ದು ಅದರಲ್ಲಿ ರಾಜ್ಯದ ಎಲ್ಲ ಗಡಿ ಪ್ರಶ್ನೆಯನ್ನು ಏಕಕಾಲದಲ್ಲಿ ಏಕ ಸೂತ್ರದನ್ವಯ ಬಿಡಿಸಬೇಕೆಂದು ತಿಳಿಸಿದ್ದರು. ಇವರು ಪ್ರತಿಪಾದಿಸಿದ ಅಂಶಗಳೆಂದರೆ–

೧. ಸಣ್ಣಪುಟ್ಟ ಹೊಂದಾಣಿಕೆಗಳನ್ನು ಮಾತ್ರ ಸರಕಾರವು ಒಪ್ಪುವುದು; ಅದು ನಿಷ್ಕರ್ಷೆಯಾಗುವವರೆಗೆ ಈಗಿನ ಗಡಿಗಳನ್ನೇ ಒಪ್ಪಿಕೊಳ್ಳಬೇಕು.

೨. ಗಡಿಯ ಎರಡೂ ಕಡೆ ಹತ್ತು ಮೈಲು ಪ್ರದೇಶದ ವಿಸ್ತಾರವನ್ನಷ್ಟೇ ಗಡಿ ಪ್ರದೇಶವೆಂದು ತಿಳಿದು ಅದರ ಬಗ್ಗೆ ಮಾತ್ರ ಪರಿಶೀಲನೆ ನಡೆಯಬೇಕು.

೩. ನೂರಕ್ಕೆ ೭೦ರಷ್ಟು ಕನ್ನಡ ಮಾತಾಡುವವರಿರುವ ಹಳ್ಳಿಗಳನ್ನು ಕರ್ನಾಟಕಕ್ಕೆ ಸೇರಿಸಬೇಕು.

೪. ಇದಕ್ಕಿಂತ ಕಡಿಮೆ ಪ್ರಮಾಣದಲ್ಲಿ ಕನ್ನಡ ಮಾತಾಡುವ ಜನರಿದ್ದರೆ, ಆ ಹಳ್ಳಿಯನ್ನು ಅದು ಈಗ ಇರುವ ರಾಜ್ಯದಲ್ಲೇ ಉಳಿಯಗೊಡಬೇಕು.

೫. ನೀರಾವರಿ ಯೋಜನೆಯಿರುವ ಪ್ರದೇಶಗಳನ್ನು ಆಯಾ ಯೋಜನೆಗೆ ಸಂಬಂಧಿಸಿರುವ ರಾಜ್ಯಕ್ಕೆ ಸೇರಿಸಬೇಕು.

೬. ಪಟ್ಟಣಗಳನ್ನು ಸುತ್ತಮುತ್ತಲಿನ ಗ್ರಾಮಾಂತರ ಪ್ರದೇಶದ ಜನರು ಮಾತಾಡುವ ಭಾಷೆಯನ್ನು ನೋಡಿಕೊಂಡು ಯಾವ ರಾಜ್ಯಕ್ಕೆ ಸೇರಿಸಬೇಕೆಂದು ನಿರ್ಧರಿಸಬೇಕು ಎಂಬುದಾಗಿತ್ತು. ಆದರೆ ಈ ಪ್ರತಿಪಾದನೆಗಳು ನಿಖರವಾಗಿ ಕಾರ್ಯರೂಪಕ್ಕೆ ಬಂದಿಲ್ಲವೆಂಬುದು ಪ್ರಮುಖವಾದ ವಿಚಾರ.

"ಅನಂತಪುರ ಜಿಲ್ಲೆಯ ಮಡಕಶಿರ ತಾಲ್ಲೂಕು ಮತ್ತು ಕಲ್ಯಾಣ ದುರ್ಗ ತಾಲ್ಲೂಕಿನ ಪಶ್ಚಿಮ ಭಾಗದಲ್ಲಿ ೧೨೦ ಸಾವಿರ ಕನ್ನಡಿಗರಿದ್ದಾರೆ"[೧] ಎಂದು ವರದಿ ಮಾಡಲಾಗಿತ್ತು. ವಿಶೇಷವೆಂದರೆ ಮಡಕಶಿರಾದಲ್ಲಿ ಕನ್ನಡ, ಪಾವಗಡದಲ್ಲಿ ತೆಲುಗು ಭಾಷೆ ಹೆಚ್ಚು ಬಳಕೆಯಲ್ಲಿದೆ. ಭಾಷಾವಾರು ಪ್ರಾಂತ್ಯ ವಿಂಗಡಣೆ ಸಂದರ್ಭದಲ್ಲಿ ಇಂತಹ ವಿದ್ಯಮಾನಗಳು ನಡೆದಿರುವುದಕ್ಕೆ ಇದೊಂದು ಉದಾಹರಣೆಯಾಗಿದೆ. ಈ ಜಿಲ್ಲೆಯು ರಾಜ್ಯದ ರಾಜಧಾನಿ ಬೆಂಗಳೂರು ನಗರಕ್ಕೆ ಸುಮಾರು ೭೦ ಕಿ.ಮೀ.ಗಳ ಅಂತರವಿದ್ದರೂ ಬರಗಾಲ, ನೀರಿನ ಸಮಸ್ಯೆಗಳಿಂದಾಗಿ ಅಭಿವೃದ್ಧಿ ಹೊಂದುತ್ತಿರುವ ಜಿಲ್ಲೆಗಳಲ್ಲಿ ಒಂದಾಗಿದೆ. ಈ ಜಿಲ್ಲೆ ತುಮಕೂರು ಎಂಬ ಹೆಸರನ್ನು ಹೇಗೆ ಪಡೆಯಿತು? ಎಂಬುದಕ್ಕೆ ಶಾಸನ ಪುರಾವೆಗಳು ದೊರಕಿವೆ. ತುಮಕೂರು, ತುಂಬಿದೂರು, ತುಂಬೆಯೂರು, ಟುಂಕಿ ಅಥವಾ ಟುಮುಕಿಪೂರು ಎಂಬ ಹೆಸರುಗಳು ತುಮಕೂರಿಗಿದ್ದವು. "ಮೈಸೂರು ನಾಡನ್ನು ಗಂಗ ಮಂಡಲದ ಅರಸರು ಆಳ್ವಿಕೆ ನಡೆಸುತ್ತಿದ್ದಾಗ ಜಿಲ್ಲೆಯ ಉತ್ತರ ಭಾಗವು ನೊಳಂಬವಾಡಿಗೆ ಸೇರಿತ್ತು. ಈಗಿನ

ತುಮಕೂರು ಜಿಲ್ಲೆ ಉತ್ತರದ ಭಾಗ ನೊಳಂಬವಾಡಿಗೂ ದಕ್ಷಿಣದ ಭಾಗ ಗಂಗವಾಡಿಗೂ ನಡುವೆ ಇದ್ದ ಭೂ ಭಾಗ"[೨] ಈಗಿನ ಕೈದಾಳ ಸುತ್ತಲಿನ ಪ್ರಾಂತ್ಯವೇ ಕ್ರೀಡಾಪುರ.

ಕ್ರೀಡಾಪುರ ಅಂದು ಪ್ರಮುಖ ಸಂಸ್ಥಾನವಾಗಿತ್ತು. "ನೊಳಂಬರ ಉಪಟಳವನ್ನು ನಿಯಂತ್ರಿಸಲು ಕ್ರೀಡಾಪುರದ ಉತ್ತರ ದಿಕ್ಕಿನಲ್ಲಿ ಸುಮಾರು ಮೂರು ಮೈಲಿಗಳಷ್ಟು ದೂರದಲ್ಲಿರುವ ಗಡಿ ಪ್ರದೇಶದ ಒಂದು ದಿಣ್ಣೆಯ ಮೇಲೆ ಕೆಲವು ಮಂದಿ ಕಾವಲುಗಾರರನ್ನು ನೇಮಿಸಿದರು. ಇವರು ನೊಳಂಬ ರಾಜರ ಸೈನ್ಯದ ಸುಳಿವನ್ನರಿತು, ಕೋಟೆಯ ಬಾಗಿಲುಗಳನ್ನು ಮುಚ್ಚಿ ಸುರಕ್ಷತೆಗಾಗಿ ಮುನ್ನೆಚ್ಚರಿಕೆಯನ್ನು ವಹಿಸಲು ತಮಟೆ, ನಗಾರಿಗಳನ್ನು ಬಹಳ ಜೋರಾಗಿ ಬಾರಿಸುತ್ತಿದ್ದರು. ಕ್ರಮೇಣ ಈ ಟುಂಕಿ ಬಾರಿಸುವ ಕಾವಲುಗಾರರ ಕುಟುಂಬಗಳು ಆ ಜಾಗದಲ್ಲೇ ವಾಸ್ತವ್ಯ ಮಾಡತೊಡಗಿದ್ದರಿಂದ ಅದು ಒಂದು ಸಣ್ಣ ಹಳ್ಳಿಯ ರೂಪವನ್ನು ಪಡೆಯಿತು. ಡಂಗುರದ ಹಳ್ಳಿಯವರನ್ನು ಡಂಗುರದಹಳ್ಳಿ, ಟುಂಕಿಯ ಹಳ್ಳಿ ಎಂದು ಕರೆಯುವುದು ವಾಡಿಕೆಯಾಯಿತು."[೩] ಈ ಹಳ್ಳಿಯು ಮುಂದೆ ಊರಾಗಿ–ಪಟ್ಟಣವಾಗಿ ಬೆಳೆದು ಟುಂಕಿಯೂರು, ಟುಂಕೂರು ಅಥವಾ ತುಮಕೂರು ಎಂಬ ಹೆಸರಿನ ರೂಪವನ್ನು ಪಡೆಯಿತು ಎಂಬ ಅಭಿಪ್ರಾಯವಿದೆ.

ಇನ್ನೊಂದು ಮೂಲದ ಪ್ರಕಾರ "ಈ ನಾಡನ್ನು ಆಳುತ್ತಿದ್ದ ನವಕಾಮನಿಂದ ಹಿಡಿದು ಪೆರಮಾಡಿಯವರೆಗಿನ ಶಾಸನಗಳಲ್ಲಿ ತುಂಮೆಗೊರು ಎಂಬ ಉಲ್ಲೇಖವಿದೆ. ಈ ಊರಿನ ಸುತ್ತಲೂ ಸುವಾಸನೆಯಿಂದ ಕೂಡಿದ ತುಂಬೆ ಹೂವಿನ ಗಿಡಗಳು ಹೆಚ್ಚಾಗಿದ್ದರಿಂದ ಈ ಪ್ರಾಂತ್ಯ ತುಮ್ಮೆಯೂರು, ತುಮ್ಮಕೂರು, ತುಮಕೂರು ಎಂಬ ಹೆಸರನ್ನು ಪಡೆದಿದೆ."[೪] ಎಂದು ನಾಗರಾಜ ಓ. ಅವರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. "ಕ್ರಿ.ಶ. ೧೦ನೇ ಶತಮಾನದ ಶಾಸನವೊಂದರಲ್ಲಿ 'ಳುತ್ಮೆಗೂರು'(ತುಂಬೆವೂರು) ಎಂದು ಉಲ್ಲೇಖಗೊಂಡಿದೆ."[೫] ತುಂಬೆ ಹೂವಿನ ಪ್ರದೇಶದ ಕಾರಣಕ್ಕೆ ಈ ಹೆಸರು ಅಸ್ತಿತ್ವಕ್ಕೆ ಬಂದಿರಬಹುದೆಂದು ಹೇಳುತ್ತಾರೆ.

ತುಮಕೂರು ಜಿಲ್ಲೆಯಲ್ಲಿ ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವ ಕೆಲವು ಚಿಕ್ಕ ನದಿಗಳಿವೆ. ಅವುಗಳೆಂದರೆ ಜಯಮಂಗಲಿ, ಶಿಂಷಾ, ಸುವರ್ಣಮುಖಿ, ಗರುಡಾಚಲ, ಉತ್ತರ ಪಿನಾಕಿನಿ, ಕುಮುದ್ವತಿ ಮತ್ತು ನಾಗಿಣಿ ನದಿಗಳು ಪ್ರಮುಖವಾದವು. 'ಜಯಮಂಗಲಿ' ಮತ್ತು 'ಸುವರ್ಣಮುಖಿ' ಎಂಬ ಹೆಸರಿನ ಎರಡು ಪ್ರಮುಖ ನದಿಗಳು ಹರಿಯುತ್ತವೆ. ಇವು ಮುಖ್ಯ ನದಿಗಳಾದರೂ ಜೀವನದಿಗಳಲ್ಲ. ಕಾರಣವೆಂದರೆ ಮಳೆಗಾಲದಲ್ಲಿ ಮಾತ್ರ ಹರಿಯುತ್ತವೆ. "ದೇವರಾಯನದುರ್ಗದ ದಕ್ಷಿಣ ಭಾಗದಲ್ಲಿ ಹುಟ್ಟುವ 'ಶಿಂಷಾ' ನದಿಯು ಗುಬ್ಬಿ, ತುರುವೇಕೆರೆ, ಕುಣಿಗಲ್ ತಾಲ್ಲೂಕಿನ ಮಾರ್ಗವಾಗಿ ಹರಿದು 'ಕಾವೇರಿ' ನದಿಯನ್ನು

ಸೇರುತ್ತದೆ. ಇದಕ್ಕೆ ಕುಣಿಗಲ್ ತಾಲ್ಲೂಕಿನ ಮಾರ್ಕೋನಹಳ್ಳಿ ಹತ್ತಿರದಲ್ಲಿ ಅಣೆಕಟ್ಟು ನಿರ್ಮಿಸಲಾಗಿದೆ. ಕೊರಟಗೆರೆ ತಾಲ್ಲೂಕಿನಲ್ಲಿ ಸಾಧು-ಸಂತರಿಗೆ ಅವಧೂತಶ್ರಮವಾಗಿರುವ, ಗಿಡಮೂಲಿಕೆಗಳ ಸಂಜೀವಿನಿ ಪರ್ವತವೆಂದೇ ಹೆಸರಾಗಿರುವ, ಚನ್ನರಾಯನದುರ್ಗದ ಗಿರಿ ಶ್ರೇಣಿಗಳಲ್ಲಿ ಕಂಡುಬರುವ ಸಿದ್ಧರಬೆಟ್ಟದಲ್ಲಿ 'ಸುವರ್ಣಮುಖಿ' ನದಿ ಹುಟ್ಟುತ್ತದೆ. ಉಗಮಸ್ಥಾನ 'ಸುವರ್ಣಗಿಂಡಿ' ಎಂದು ಹೆಸರಾಗಿದೆ."[೬] ಇದು ತಾಲ್ಲೂಕಿನ ಪೂರ್ವಕ್ಕೆ ಹರಿದು ಅಕ್ಕಿರಾಂಪುರದ ಬಳಿ 'ಜಯಮಂಗಲಿ' ನದಿಯನ್ನು ಸೇರಿ ಮುಂದಕ್ಕೆ ಹರಿಯುತ್ತದೆ.

ಜಿಲ್ಲೆಯಲ್ಲಿ ೧೯೯೭ರವರೆಗೂ ಯಾವುದೇ ನಾಲಾ ನೀರಾವರಿ ಸೌಲಭ್ಯ ಇರಲಿಲ್ಲ. ಇದಕ್ಕೆ ಮುಖ್ಯ ಕಾರಣ ಇಲ್ಲಿ ಯಾವ ದೊಡ್ಡ ನದಿಗಳು ಇಲ್ಲದಿರುವುದು. ಪ್ರಸ್ತುತ ಜಿಲ್ಲೆಯಲ್ಲಿ ದಕ್ಷಿಣ ಭಾಗದ ತುರುವೇಕೆರೆ, ತಿಪಟೂರು, ಗುಬ್ಬಿ ಮತ್ತು ಕುಣಿಗಲ್ ತಾಲ್ಲೂಕುಗಳ ಕೆಲವು ಭಾಗಗಳಿಗೆ 'ಹೇಮಾವತಿ ನಾಲಾ' ನೀರಾವರಿ ಸೌಲಭ್ಯ ದೊರೆತಿದೆ. ಜಿಲ್ಲೆಯಲ್ಲಿ ಸುಮಾರು ೨೦೧೦ ಕೆರೆಗಳಿದ್ದು, ಇವುಗಳೆಲ್ಲಾ ತುಂಬಿ ಹರಿಯಲು ಮಳೆಯನ್ನೇ ಆಶ್ರಯಿಸಿವೆ. ಜಿಲ್ಲೆಯನ್ನು ಸಾಂಸ್ಕೃತಿಕವಾಗಿ ಮತ್ತು ಭೌಗೋಳಿಕವಾಗಿ ಎರಡು ಭಾಗವಾಗಿ ವಿಂಗಡಿಸಬಹುದು. ಚಿನ್ನಸ್ವಾಮಿ ಸೋಸಲೆ ಎನ್. ಅವರು "ಜಿಲ್ಲೆಯ ದಕ್ಷಿಣ ಭಾಗದ ತಾಲ್ಲೂಕುಗಳಲ್ಲಿ ನೀರಾವರಿ ಸೌಲಭ್ಯವಿರುವುದರಿಂದ, ಇಲ್ಲಿನ ತಳಸಮುದಾಯಗಳು ಜೀತಗಾರರಾಗಿ ಹಾಗೂ ಕೃಷಿಕಾರ್ಮಿಕರಾಗಿ ಕಂಡುಬರುತ್ತಾರೆ. ಉತ್ತರ ಭಾಗದ ತಾಲ್ಲೂಕುಗಳು ಮಳೆ ಆಶ್ರಿತ, ಬಯಲು ಸೀಮೆ ಆದ್ದರಿಂದ ಇಲ್ಲಿನ ತಳಸಮುದಾಯಗಳು ಕೃಷಿ ಕಾರ್ಮಿಕರಾಗಿ ಕಾರ್ಯ ನಿರ್ವಹಿಸುವುದಲ್ಲದೆ, ತಮ್ಮದೇ ಆದ ಪಾರಂಪರಿಕ ವೃತ್ತಿಗಳನ್ನು ಮಾಡುತ್ತಾರೆ." ಎಂದು ಅಭಿಪ್ರಾಯಪಟ್ಟಿದ್ದಾರೆ. ಸ್ವಾತಂತ್ರ್ಯ ಪಡೆದ ದಿನದಿಂದ ಇಂದಿನವರೆಗೆ ತುಮಕೂರು ಜಿಲ್ಲೆಯು ಇಲ್ಲಿನ ಭೌಗೋಳಿಕ ಪರಿಸ್ಥಿತಿ, ಪ್ರಕೃತಿ ವಿಕೋಪ, ಪ್ರಾದೇಶಿಕ ಅಸಮಾನತೆ, ಬರಗಾಲ, ಬಡತನ, ಅಜ್ಞಾನ, ಅನಕ್ಷರತೆ, ಬಂಡವಾಳಶಾಹಿಗಳ ಪ್ರಭಾವ ಹೀಗೆ ಅನೇಕ ಕಾರಣಗಳಿಂದ ತತ್ತರಿಸಿದೆ. ಪ್ರಾದೇಶಿಕ ಅಸಮತೋಲನವೆಂದರೆ ಅದು ಹಿಂದುಳಿದ ಪ್ರದೇಶದಲ್ಲಿನ ಹಿಂದುಳಿದ ಪರಿಶಿಷ್ಟ ಜನಸಮುದಾಯಗಳ, ಬಡವರ, ಶೋಷಿತರ ಪ್ರಶ್ನೆಯಾಗಿದೆ. ಈ ಹಿನ್ನೆಲೆಯಲ್ಲಿ ತುಮಕೂರು ಜಿಲ್ಲೆಯನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ರಾಜ್ಯದ ರಾಜಧಾನಿಗೆ ಹೆಬ್ಬಾಗಿಲಿನಂತಿರುವ ತುಮಕೂರು ನಗರ ಒಂದು ಕಡೆಯಾದರೆ, ಹೇಮಾವತಿ ಜಲಾಶಯ ಹಾಗೂ ಕೆಲವು ಚಿಕ್ಕ ನದಿಗಳ ಹರಿಯುವಿಕೆಯಿಂದಾಗಿ ಅರೆ ಮಲೆನಾಡಿನಂತಿರುವ ಜಿಲ್ಲೆಯ ದಕ್ಷಿಣ ಭಾಗ ಮತ್ತೊಂದು ಪ್ರದೇಶ. ಈ ಪ್ರದೇಶದಲ್ಲಿರುವ ಭೂಮಿ ಪ್ರಬಲ ಸಮುದಾಯಗಳ, ಜಮೀನ್ದಾರಿ, ವರ್ಗಗಳ ಹಿಡಿತದಲ್ಲಿದೆ. ಇಲ್ಲಿನ ತಳಸಮುದಾಯಗಳು ಜೀತಗಾರರಾಗಿ ಕಂಡುಬರುತ್ತಾರೆ.

ಜಿಲ್ಲೆಯ ಉತ್ತರ ಭಾಗ ಸಂಪೂರ್ಣವಾಗಿ ಬಯಲು ಸೀಮೆ, ಮಳೆ ಆಶ್ರಿತ ಪ್ರದೇಶವಾಗಿದೆ. ಇಲ್ಲಿನ ತಳಸಮುದಾಯಗಳು ಬಹುತೇಕವಾಗಿ ಕೃಷಿ ಕಾರ್ಮಿಕರು. ಅಂತರ್ಜಲದ ಮಟ್ಟ ಕಡಿಮೆ ಆಗಿರುವುದರಿಂದ ಕೊಳವೆ ಬಾವಿಗಳು ಬತ್ತಿ ಹೋಗಿ ಕುಡಿಯುವ ನೀರಿಗೆ ಸಮಸ್ಯೆಯಾಗಿದೆ. ಹೇಮಾವತಿ ಜಲಾಶಯದ ಮೂಲಕ ಜಿಲ್ಲೆಯ ದಕ್ಷಿಣ ಭಾಗದ ಕೆಲವು ತಾಲ್ಲೂಕುಗಳಿಗೆ ನೀರನ್ನು ಹರಿಸಲಾಗುತ್ತಿತ್ತು. ಈಗ ಅದು ಕೂಡ ನಿಂತಿದೆ. ಸಾವಿರಾರು ಸಂಖ್ಯೆಯಲ್ಲಿ ಕೊಳವೆ ಬಾವಿಗಳು ಬತ್ತಿಹೋಗಿವೆ. ಲಕ್ಷಾಂತರ ಬಾವಿಗಳಲ್ಲಿ ನೀರು ಕಡಿಮೆಯಾಗಿದೆ. ಯಾವ ರೈತರಿಗೂ ಕೊಳವೆ ಬಾವಿಗಳ ಮೇಲೆ ನಂಬಿಕೆ ಇಲ್ಲವಾಗಿದೆ. ಇದು ನೀರಾವರಿ ಆಶ್ರಿತ ಕೃಷಿಯ ಮೇಲೆ ಪರಿಣಾಮ ಬೀರಿದೆ. ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಮಳೆಯಾಗುತ್ತಿದ್ದರೂ ಜಿಲ್ಲೆಯಲ್ಲಿ ಮಾತ್ರ ಮಳೆ ಪ್ರಮಾಣ ತುಂಬಾ ಕಡಿಮೆ ಇದೆ. ತೆಂಗು, ಅಡಕೆ ಮೊದಲಾದ ವಾಣಿಜ್ಯ ಬೆಳೆಗಳು ಒಣಗಿವೆ. ಪ್ರಮುಖ ಹಾಗೂ ಅತ್ಯಾವಶ್ಯಕವಾದ ರಾಗಿ, ಭತ್ತ, ಶೇಂಗಾ ಮೊದಲಾದ ಬೆಳೆಗಳನ್ನು ಕೂಡ ಬೆಳೆಯಲು ಸಾಧ್ಯವಾಗುತ್ತಿಲ್ಲ. ಸರ್ಕಾರ ಸುಮಾರು ಐದು ವರ್ಷಗಳಿಂದ ಹಸುಗಳಿಗೆ ಮೇವನ್ನು ಒದಗಿಸಲು ಗೋಶಾಲೆಗಳನ್ನು ತೆರೆಯಲಾಗುತ್ತಿದೆ. ಪ್ರಮುಖ ಕಾರಣ ಬರಗಾಲ, ಬರಪೀಡಿತ ಜಿಲ್ಲೆಗಳು ಎಂದು ಘೋಷಿಸಿದ ಸರ್ಕಾರದ ಪಟ್ಟಿಯಲ್ಲಿ ಪ್ರಸ್ತುತ ಜಿಲ್ಲೆಯು ಒಂದಾಗಿದೆ.

ಜಿಲ್ಲೆಯಲ್ಲಿ ಭೂ ಸಂಪತ್ತು ಹಾಗೂ ಮಾನವ ಸಂಪನ್ಮೂಲ ವಿಪುಲವಾಗಿದೆ. ಆದರೆ ಜಲ ಸಂಪತ್ತಿನ ಕೊರತೆ ಹಾಗೂ ಜಮೀನ್ದಾರಿ ವ್ಯವಸ್ಥೆಯಿಂದಾಗಿ ಹಿಂದುಳಿದಿದೆ. ತುಮಕೂರು ಜಿಲ್ಲೆಯ ಜಿಲ್ಲಾ ಮಾನವ ಅಭಿವೃದ್ಧಿ ವರದಿ ಪ್ರಕಾರ "ಜಿಲ್ಲೆಯ ಜನಸಂಖ್ಯೆಯಲ್ಲಿ ಶೇ. ೧೮.೯೨ರಷ್ಟು ಪರಿಶಿಷ್ಟ ಜಾತಿಯವರು ಮತ್ತು ಶೇ. ೭.೮೨ರಷ್ಟು ಪರಿಶಿಷ್ಟ ವರ್ಗದ ಜನರು ಇದ್ದಾರೆ. ಈ ಎರಡು ಸಾಮಾಜಿಕ ಗುಂಪುಗಳಲ್ಲಿ ಸಣ್ಣ ಮತ್ತು ಅತಿಸಣ್ಣ ಹಿಡುವಳಿದಾರರ ಸಂಖ್ಯೆಯು ಹೆಚ್ಚಾಗಿರುತ್ತದೆ."[2] ಸರ್ಕಾರದಿಂದ ಹಲವಾರು ಕಾರ್ಯಕ್ರಮಗಳು ಈ ವರ್ಗದವರಿಗೆ ಅನುಷ್ಠಾನಗೊಂಡಿದ್ದರೂ ಅವರ ಆರ್ಥಿಕ ಸ್ಥಿತಿಯು ಉತ್ತಮವಾಗಿಲ್ಲದಿರುವುದು ಕಂಡುಬರುತ್ತದೆ.

ಈ ಭಾಗದ ತಳಸಮುದಾಯಗಳ ಸ್ಥಿತಿಗತಿಗಳನ್ನು ಗಮನಿಸಿದಾಗ ಇಲ್ಲಿರುವಂತಹ ಈ ಸಮುದಾಯಗಳ ಸ್ಥಿತಿ ಶೋಚನೀಯವಾಗಿದೆ. ಇಲ್ಲಿ ಬಹಳಷ್ಟು ತಳಸಮುದಾಯಗಳಿಗೆ ಸ್ವಂತ ಭೂಮಿ ಇಲ್ಲ. ಅಲ್ಪಸ್ವಲ್ಪ ಭೂಮಿ ಇರುವ ತಳಸಮುದಾಯಗಳಿಗೆ ಕೃಷಿ ಮಾಡಲು ಬಂಡವಾಳವಿಲ್ಲ. ಇನ್ನು ಬೆಳೆದ ಬೆಳೆಗಳಿಗೆ ಮಾರುಕಟ್ಟೆ ಮತ್ತು ಸೂಕ್ತ ಬೆಲೆ ಸಮಸ್ಯೆ ಇದೆ. ಹೀಗಾಗಿ ತಳಸಮುದಾಯಗಳು ಸಾಲದಿಂದ ತತ್ತರಿಸಿ ಭೂಮಿಯನ್ನು ಮಾರಾಟ

ಮಾಡುವುದು ಅಥವಾ ಆತ್ಮಹತ್ಯೆಗೆ ಶರಣಾಗುವುದರ ಬಗ್ಗೆ ಆಗಾಗ ಕೇಳುತ್ತಿದ್ದೇವೆ. ಕೃಷಿ ಭೂಮಿಗೆ ಸಂಬಂಧಿಸಿದಂತೆ ಹೇಳುವುದಾದರೆ ನೂರಾರು ಎಕರೆ ಭೂಮಿ ಹೊಂದಿರುವ ಶ್ರೀಮಂತ ರೈತ ಒಂದು ಕಡೆಯಾದರೆ, ಒಂದೆರಡು ಎಕರೆ ಭೂಮಿ ಹೊಂದಿರುವ ಬಡರೈತ ಇನ್ನೊಂದು ಕಡೆ. ಹೀಗಾಗಿ ರೈತರಲ್ಲೇ ಅಂತರ ಬಹಳ ಇದೆ. ಶ್ರೀಮಂತ ರೈತರು ಅಥವಾ ಜಮೀನ್ದಾರರು ಉತ್ಪಾದನಾಂಗಗಳ ಮೇಲೆ ಹತೋಟಿ ಮತ್ತು ಪೂರ್ಣ ನಿಯಂತ್ರಣ ಹೊಂದಿದ್ದಾರೆ. ಹೀಗಾಗಿ ಹಳೆ ಭೂಮಾಲೀಕರು ಇಂದಿನ ಬಂಡವಾಳಗಾರರಾಗಿ ಪರಿವರ್ತನೆ ಗೊಂಡಿದ್ದಾರೆ. ಇದರಿಂದಾಗಿ ಇಂದು ನಿಜವಾದ ಉಳುಮೆದಾರನ ಕೈಯಲ್ಲಿ ಭೂಮಿ ಇಲ್ಲ. ಬದಲಾಗಿ ಹೆಚ್ಚಿನ ಭೂಮಿಯು ಬಂಡವಾಳಶಾಹಿಗಳ, ಶ್ರೀಮಂತರ, ಬಹುರಾಷ್ಟ್ರೀಯ ಕಂಪನಿಗಳ ಪಾಲಾಗಿದೆ. ಯಾರು ನಿಜವಾಗಿ ಉಳುಮೆಯನ್ನು ಮಾಡುತ್ತಾರೋ ಅವರಿಗೆ ಭೂಮಿ ದೊರಕಬೇಕಿರುವುದು ಇಂದಿನ ಅಗತ್ಯವಾಗಿದೆ.

ಸಾಮಾಜಿಕ, ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿದಾಗ ಇಲ್ಲಿನ ಬಡತನ, ಅನಕ್ಷರತೆ, ಬೃಹತ್ ಕೈಗಾರಿಕೆಗಳ ಅಭಾವ ಮುಂತಾದ ಕಾರಣಗಳಿಂದ ಹೆಚ್ಚು ಉದ್ಯೋಗಾವಕಾಶಗಳು ಇಲ್ಲದೆ ತಳಸಮುದಾಯಗಳು ಸಾಮಾಜಿಕವಾಗಿ, ಆರ್ಥಿಕವಾಗಿ ಕೆಳಮಟ್ಟದಲ್ಲಿವೆ. ಇಲ್ಲಿರುವ ಕೆಲವೇ ಕೈಗಾರಿಕೆಗಳು ಹೆಚ್ಚು ಶ್ರಮವನ್ನು ಕೇಳುವಂತಹವು. ಬೇರೆ ಉದ್ಯೋಗವಕಾಶಗಳಿಲ್ಲದೆ ಹೊಟ್ಟೆಪಾಡಿಗಾಗಿ ಅತಿ ಕಡಿಮೆ ಕೂಲಿಗೆ ಹೆಚ್ಚು ಶ್ರಮವಹಿಸಬೇಕಾಗಿದೆ. ಇವರಿಗೆ ಹೋರಾಟ ಮಾಡುವ, ಪ್ರತಿರೋಧಿಸುವ ಕಲ್ಪನೆಯಾಗಲಿ, ಶಕ್ತಿಯಾಗಲಿ ಇಲ್ಲ. ಇದರಿಂದಾಗಿ ಇವರ ಶ್ರಮಕ್ಕೆ ತಕ್ಕ ವೇತನ, ಉತ್ಪಾದನೆಗೆ ತಕ್ಕಷ್ಟು ಪ್ರತಿಫಲ ದೊರೆಯುತ್ತಿಲ್ಲ. ಅಸಂಘಟಿತ ವಲಯದ ಕಾರ್ಮಿಕರ ಬದುಕಂತು ತೀರಾ ಶೋಚನೀಯವಾಗಿದೆ. ಇವರಿಗೆ ವರ್ಷದಲ್ಲಿ ೧೦೦ ದಿನವೂ ಉದ್ಯೋಗದ ಖಾತರಿ ಇಲ್ಲ. ಹೀಗಾಗಿ ಗುಳೆ ಹೋಗುವುದು ಇವರಿಗೆ ಅನಿವಾರ್ಯವಾಗಿದೆ. ಹೊಟ್ಟೆಪಾಡಿಗಾಗಿ ಕೆಲಸ ಹುಡುಕಿಕೊಂಡು ದೊಡ್ಡ ದೊಡ್ಡ ನಗರಗಳಿಗೆ ಅಲೆದಾಡುವುದನ್ನು ತಪ್ಪಿಸಲು ಬೃಹತ್ ಕೈಗಾರಿಕೆಗಳನ್ನು ಸ್ಥಾಪಿಸುವುದು ಅತ್ಯಗತ್ಯವಾಗಿದೆ. ರಸ್ತೆ, ಸಾರಿಗೆ, ಶಿಕ್ಷಣ, ಉದ್ಯೋಗ, ತಲವರಮಾನ, ಆರೋಗ್ಯ ಮುಂತಾದ ಹಲವಾರು ವಿಷಯಗಳಲ್ಲಿ ಈ ಭಾಗವು ಎಷ್ಟು ಹಿಂದುಳಿದಿದೆ ಎನ್ನುವುದನ್ನು ಸರಕಾರದ ವರದಿಗಳೇ ತಿಳಿಸುತ್ತವೆ. ಒಂದು ಪ್ರದೇಶದ ಭೌಗೋಳಿಕತೆಯು ಅಲ್ಲಿ ವಾಸಿಸುವ ಸಮುದಾಯಗಳ ಮೇಲೆ ಪ್ರಭಾವ ಬೀರುತ್ತದೆ ಎಂಬುದನ್ನು ತಿಳಿಯಬಹುದಾಗಿದೆ.

### ಚಾರಿತ್ರಿಕ ಹಿನ್ನೆಲೆ

ತುಮಕೂರು ಜಿಲ್ಲೆಯ ಇತಿಹಾಸವು ನಾಲ್ಕು ಲಕ್ಷ ವರ್ಷದ ಹಿಂದಿನಿಂದ ಆರಂಭವಾಗಿದೆ ಎಂದು ಇತ್ತೀಚಿನ ಸಂಶೋಧನೆಗಳು ಅಭಿಪ್ರಾಯಪಟ್ಟಿವೆ. "ಶಿಲಾಯುಗದ

ಕೊನೆಯ ಹಂತವಾದ ಬೃಹತ್ ಶಿಲಾಯುಗದ ನೆಲೆ ಹಾಗೂ ಗೋರಿಗಳು ೩೮ ಕಂಡುಬಂದಿದ್ದು, ಇವುಗಳಲ್ಲಿ ೧೭ ವಸತಿ ನೆಲೆಗಳಾದರೆ, ೨೧ ನೆಲೆಗಳು ಶಿಲಾಗೋರಿಗಳಾಗಿವೆ. ಜಿಲ್ಲೆಯ ಇರಕಸಂದ್ರ ಕಾಲೋನಿ, ಕತ್ತಿರಾಜನ ಹಳ್ಳಿ, ಚಿನಗ ಮುಂತಾದ ಕಡೆ ಇವುಗಳು ಕಂಡುಬಂದಿವೆ."[೮] ಇದೇ ಅಭಿಪ್ರಾಯವು ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳವರ ಕಛೇರಿಯಿಂದ ಪ್ರಕಟವಾದ 'ಆರ್ಥಿಕ-ಸಾಮಾಜಿಕ ಅವಲೋಕನ' ಕೃತಿಯಲ್ಲಿ ಪ್ರಕಟವಾಗಿದೆ. ಈ ಜಿಲ್ಲೆಯಲ್ಲಿ ಮಾನವನ ಇತಿಹಾಸವು ವಿಭಿನ್ನತೆಯ ಕಾಲವಾಗಿದ್ದಿತೆಂಬ ಅಂಶವನ್ನು ಇಲ್ಲಿ ದೊರೆತಿರುವ ವಿವಿಧ ಸಾಂಸ್ಕೃತಿಕ ಅವಶೇಷಗಳು ಸ್ಪಷ್ಟಪಡಿಸಿವೆ. "ಕರ್ನಾಟಕದಲ್ಲಿ ತುಮಕೂರು ಜಿಲ್ಲೆ ಅತಿ ಹೆಚ್ಚು ಅಂದರೆ ೨೬೬ ಶಿಲಾಯುಗದ ನೆಲೆಗಳನ್ನು ಹೊಂದಿದೆ. ಜಿಲ್ಲೆಯಲ್ಲಿ ಮುಖ್ಯವಾಗಿ ಗುಬ್ಬಿ ತಾಲ್ಲೂಕಿನ ಮೂಗನಾಯ್ಕನಕೋಟೆ, ಸಿರಾ ತಾಲ್ಲೂಕಿನ ಬುಕ್ಕಾಪಟ್ಟಣ, ಹೊಳಕಲ್ಲು ಬೆಟ್ಟ, ತುಮಕೂರು ತಾಲ್ಲೂಕಿನ ಮಂಚಕಲ್ ಕುಪ್ಪೆ, ಮೀನಾಕ್ಷಮ್ಮ ಎಸ್ಟೇಟ್, ತಿಪಟೂರು ತಾಲ್ಲೂಕಿನ ಕಿಬ್ಬನಹಳ್ಳಿ, ಕೊರಟಗೆರೆ ತಾಲ್ಲೂಕಿನ ಇರಕಸಂದ್ರ ಕಾಲೋನಿ, ಮಿಡಿಗೇಶಿ, ಅಪ್ಪೇನಹಳ್ಳಿ, ಕತ್ತಿರಾಜನಹಳ್ಳಿ ಮೊದಲಾದ ಕಡೆಗಳಲ್ಲಿ ಕಂಡುಬರುತ್ತದೆ."[೯] ಒಟ್ಟಾರೆಯಾಗಿ ತುಮಕೂರು ಜಿಲ್ಲೆಯೂ ಕೂಡ ಪ್ರಾಗಿತಿಹಾಸದ ಸಂಸ್ಕೃತಿಯ ನೆಲೆಯಾಗಿತ್ತೆಂಬುದನ್ನು ತಿಳಿಯಬಹುದಾಗಿದೆ.

ತುಮಕೂರು ಜಿಲ್ಲೆಯು ರಾಮಾಯಣ, ಮಹಾಭಾರತ ಪೌರಾಣಿಕ ಕಥೆಗಳಿಂದಲೂ ಪ್ರಸಿದ್ಧ ಸ್ಥಳವಾಗಿದೆ. ಗುಬ್ಬಿ ತಾಲ್ಲೂಕಿನ ಕಡಬದಲ್ಲಿ ರಾಮಾಯಣದ ಶ್ರೀರಾಮನು ತಂಗಿದ್ದನೆಂದೂ ತನ್ನ ಹೆಂಡತಿ ಸೀತಾದೇವಿಯ ಕೋರಿಕೆಯಂತೆ ತುಂಬಾ ಇಕ್ಕಟ್ಟಿನಿಂದ ಕೂಡಿದ ನದಿಯನ್ನು ಬೇರ್ಪಡಿಸಿದನೆಂದು ನಂಬಲಾಗಿದೆ. ಹಾಗೆ ಬೇರ್ಪಟ್ಟ ನದಿಯ ಒಂದು ಭಾಗ ಇಂದಿನ ಕಡಬದ ದೊಡ್ಡಕೆರೆ ಎಂಬುದು ಒಂದು ಐತಿಹ್ಯ. ಈ ಪ್ರದೇಶಗಳಲ್ಲಿ ವಾಸಿಸುತ್ತಿದ್ದ ಕದಂಬ ಮುನಿಯಿಂದಾಗಿ ಈ ಪ್ರದೇಶಕ್ಕೆ ಕಡಬ ಹೆಸರು ಬಂದಿತೆಂದು ಹೇಳಲಾಗಿದೆ. ಅದೇ ರೀತಿ ತುರುವೇಕೆರೆ ತಾಲ್ಲೂಕಿನ ಸಂಪಿಗೆ, ಮಹಾಭಾರತ ಕಾಲದ ಚಂಪಕ ನಗರವಾಗಿತ್ತೆಂದು ನಂಬಲಾಗಿದೆ. ಚಂಪಕಾ ನಗರ ಮಹಾಭಾರತ ಕಾಲದ ದೊರೆ ಹಂಸಧ್ವಜನ ಮಗ ಸುದನ್ವನ ರಾಜಧಾನಿಯಾಗಿತ್ತೆಂಬ ಐತಿಹ್ಯವಿದೆ.

ಜಿಲ್ಲೆಯ ನೈಜ ಇತಿಹಾಸ ಪ್ರಾರಂಭವಾಗುವುದು ಗಂಗರ ಕಾಲದಿಂದ ಆದರೂ ಮೌರ್ಯ, ಶಾತವಾಹನ ಮನೆತನದವರು ಆಳ್ವಿಕೆ ನಡೆಸಿದ್ದನ್ನು ಪರೋಕ್ಷ ಮಾಹಿತಿಗಳ ಸಹಾಯದಿಂದ ಹೇಳಬಹುದು. "ಗಂಗರು ಈ ಜಿಲ್ಲೆಯನ್ನು ಕ್ರಿ.ಶ. ೫ನೇ ಶತಮಾನದಲ್ಲಿ ಆಳ್ವಿಕೆ ನಡೆಸುತ್ತಿದ್ದರೆಂಬುದನ್ನು ಎರಡನೇ ಮಾಧವನ ಮೆಳೆಕೋಟೆಯ ತಾಮ್ರ ಶಾಸನಗಳ

ಆಧಾರದಿಂದ ತಿಳಿದುಬರುತ್ತದೆ. ಗಂಗ ಸಾಮ್ರಾಜ್ಯದ ಪ್ರಮುಖ ಭಾಗವಾದ ಈ ಜಿಲ್ಲೆಯನ್ನು ವಶಪಡಿಸಿಕೊಳ್ಳಲು ರಾಷ್ಟ್ರಕೂಟರು ದಾಳಿ ಮಾಡಿದರು. ಹಿರೇ ಗುಂಡಗಲ್ಲು ಬಳಿ ನಡೆದ ಘೋರ ಕದನದಲ್ಲಿ ಗಂಗರು ಸೋತು ರಾಷ್ಟ್ರಕೂಟರಿಗೆ ಶರಣಾದರು."[೧೦] ಇದರಿಂದ ರಾಷ್ಟ್ರಕೂಟರ ಆಳ್ವಿಕೆ ಈ ಪರಿಸರದಲ್ಲಿ ಕೆಲ ಕಾಲವೂ ಇತ್ತು ಎಂಬುದನ್ನು ಹಿರೇಗುಂಡಗಲ್ ಬಳಿ ಇರುವ ೧೮ ವೀರಗಲ್ಲುಗಳು ಸಾಬೀತುಪಡಿಸುತ್ತವೆ. ಈ ಭಾಗವನ್ನು ಆಗ ರಾಷ್ಟ್ರಕೂಟರ ಚಾಕಿರಾಜ ಎಂಬುವನು ಮಾಂಡಳಿಕನಾಗಿ ಆಳ್ವಿಕೆ ನಡೆಸಿದನು. ರಾಷ್ಟ್ರಕೂಟರ ಪತನಾನಂತರ ಉತ್ತರದಲ್ಲಿ ಕಲ್ಯಾಣಿ ಚಾಲುಕ್ಯರ ಆಳ್ವಿಕೆ ಆರಂಭವಾದ ಮೇಲೆ ಅವರು ಪ್ರಾಂತೀಯ ಅರಸರ ಮೂಲಕ ಈ ಭಾಗವನ್ನು ತಮ್ಮ ವಶದಲ್ಲಿಟ್ಟುಕೊಂಡಿದ್ದರು. ಆ ನಂತರದ ಕಾಲದಲ್ಲಿ ಚಾಲುಕ್ಯ ಸಾಮಂತರಾಗಿದ್ದ ಹೊಯ್ಸಳರು ಈ ಜಿಲ್ಲೆಯಿಂದ ಚೋಳರನ್ನು ಹೊಡೆದಟ್ಟಿದ್ದಲ್ಲದೆ, ಹೆಚ್ಚು ಕಡಿಮೆ ಸ್ವತಂತ್ರರಾಗಿ ಹೆಸರಿಗೆ ಚಾಲುಕ್ಯರ ಪ್ರಭುತ್ವವನ್ನು ಒಪ್ಪಿಕೊಂಡು ಈ ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದರು.

ಹೊಯ್ಸಳ ಸಾಮ್ರಾಜ್ಯ ಪತನ ಹೊಂದಿದ ಮೇಲೆ ಈ ಪ್ರದೇಶದಲ್ಲಿ ವಿಜಯನಗರದ ಅರಸರು ಪ್ರಾಬಲ್ಯ ಹೊಂದಿದರು. ಸಂಗಮ ಮತ್ತು ಸಾಳುವ ವಂಶಗಳ ಕಾಲದಲ್ಲಿ ಈ ಪ್ರದೇಶ ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ ವಿಷಯ ಶಾಸನಗಳಲ್ಲಿ ಉಲ್ಲೇಖವಾಗಿದೆ. ಆಗ ವಿಜಯನಗರದರಸರು ಈ ಭೂಭಾಗವನ್ನು ಹೊಯ್ಸಳ ನಾಡು, ಹೊಯ್ಸಳ ದೇಶ ಎಂದು ಕರೆಯುತ್ತಿದ್ದರು. "ವಿಜಯನಗರದವರ ಆಳ್ವಿಕೆಯ ಕಾಲದಲ್ಲಿ ಆದ ಅತಿ ಮುಖ್ಯವಾದ ಬೆಳವಣಿಗೆ ಎಂದರೆ ಈ ಜಿಲ್ಲೆಗೆ ಅನೇಕ ತೆಲುಗು ನಾಡಿನ ಕುಟುಂಬಗಳು ವಲಸೆ ಬಂದು ನೆಲೆಸಿದ್ದಾಗಿದೆ. ಇವರೆಲ್ಲ ತೆಲುಗು ನಾಡನ್ನು ಬಿಟ್ಟು ಗುಂಪಾಗಿ ಬಂದು ತುಮಕೂರು ಜಿಲ್ಲೆಯ ಪಾವಗಡ, ಮಧುಗಿರಿ ಪ್ರದೇಶಗಳಲ್ಲಿ ತಳವೂರಿ ಅಲ್ಲಲ್ಲಿ ಹಳ್ಳಿ-ಊರುಗಳನ್ನು ನಿರ್ಮಿಸಿ ತೆಲುಗು ಭಾಷಾ ವಸಾಹತುಗಳನ್ನು ಸ್ಥಾಪಿಸಿದರೆಂದು ತಿಳಿಸುವ ಶಾಸನಗಳು ಆ ಭಾಗದಲ್ಲಿ ದೊರಕಿವೆ."[೧೧] ಚಿನ್ನಸ್ವಾಮಿ ಸೋಸಲೆ ಅವರು ಇದೇ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದ್ದರಿಂದಲೇ ಆ ಭಾಗದಲ್ಲಿ ತೆಲುಗು ಭಾಷೆ ಪ್ರಾಬಲ್ಯ ಹೊಂದಲು ಸಾಧ್ಯವಾಗಿರಬಹುದು.

ಭಾರತದ ಪ್ರಾಚೀನ ಶೈವ ಪಂಥಗಳಲ್ಲಿ ಕಾಪಾಲಿಕವೂ ಒಂದು. ನಾಥ ಪಂಥಕ್ಕಿಂತ ಪ್ರಾಚೀನವಾದ ಕಾಪಾಲಿಕ ಪಂಥವು ನಾಥ ಪಂಥದೊಡನೆ ವಿಲೀನವಾದ ಬಗೆ ಕುತೂಹಲಕರವಾಗಿದೆ. "ಕಾಪಾಲಿಕರು ಭೈರವ ರೂಪಿಯಾದ ಶಿವನನ್ನು ಆರಾಧಿಸುತ್ತಿದ್ದರು. ತಲೆಯೊಡನ್ನು ಕೈಯಲ್ಲಿ ಹಿಡಿದಿರುತ್ತಿದ್ದರು; ಮೂಳೆಹಾರವನ್ನು ಧರಿಸುತ್ತಿದ್ದರು. ಜಟೆ ಬಿಟ್ಟಿರುತ್ತಿದ್ದರು. ತ್ರಿಶೂಲ, ಢಮರು, ಖಟ್ವಾಂಗ ಹಿಡಿದಿರುತ್ತಿದ್ದರು. ಕರ್ಣಕುಂಡಲ ಜನಿವಾರ

ಇರುತ್ತಿತ್ತು. ಮಸಣದ ಬೂದಿಯಿಂದ ಭಸ್ಮ ಸ್ನಾನ ಮಾಡುತ್ತಿದ್ದರು. ಲೋಕದ ನಶ್ವರತೆಯನ್ನು ಸೂಚಿಸುವ ಈ ಬೂದಿ, ತೀವ್ರವಾಗಿ ಬದುಕಲು ಪ್ರೇರೇಪಿಸುತ್ತದೆ ಎಂದು ಭಾವಿಸಿದ್ದರು. ಅವರ ಆಚರಣೆಗಳು ಸಾಮಾನ್ಯವಾಗಿ ರಾತ್ರಿ ಕಾಲದವು. ಇವುಗಳಲ್ಲಿ ನರಬಲಿ ಕೊಡುವುದು ಹಾಗೂ ನರಮಾಂಸ ತಿನ್ನುವುದು ಸೇರಿದ್ದವು. ಕಪಾಲದಲ್ಲಿ ಶಿವ ನೆಲೆಸಿದ್ದಾನೆ ಎಂದು ನಂಬಿದ ಕಾರಣ, ಅದರಲ್ಲಿ ಸೋಮರಸವನ್ನು ಕುಡಿಯುತ್ತಿದ್ದರು. ಸೋಮ ಎಂದರೆ (ಸ.ಉಮ) ಉಮಾ ಸಮೇತನಾದ ಶಿವ. ಹೀಗಾಗಿ ಸೋಮಪಾನಕ್ಕೂ ಸ್ತ್ರೀ ಮಿಲನಕ್ಕೂ ಸಂಬಂಧವಿದೆ ಎಂದು ತಿಳಿಯಬಹುದು. ಅವರ ಜೊತೆ ಭೈರವಿಯರು ಇರುತ್ತಿದ್ದರು. ಪರಸ್ತ್ರೀಯರನ್ನು ವಶೀಕರಣ ಮಾಡಿ ಸಾಧನೆಗೆ ಕರೆದುಕೊಂಡು ಹೋಗುತ್ತಿದ್ದರು."[೧೨] ಕಾಪಾಲಿಕರನ್ನು ವಿಕಾರವಾಗಿ ಚಿತ್ರಿಸುವ ದಾರ್ಶನಿಕ ಪಠ್ಯಗಳಲ್ಲಿ ಹೆಚ್ಚಿನವು ವೈದಿಕವಾದಿಯಾದವನ್ನು ಗಮನಿಸಬಹುದಾಗಿದೆ. ಕಾಪಾಲಿಕರ ಪರವಾದ ಗ್ರಂಥಗಳಲ್ಲಿ ಸಿಗುವ ಚಿತ್ರಗಳೇ ಬೇರೆ. "ಕಾಪಾಲಿಕರ ಮೇಲೆ ಕಹಿ ಕಾರುವುದರಲ್ಲಿ ಕನ್ನಡ ಪಠ್ಯಗಳು ಹೊರತಾಗಿಲ್ಲದಿರುವುದನ್ನು ಗಮನಿಸಬಹುದಾಗಿದೆ. ಶರಣರ ವಚನಗಳಲ್ಲಿ, ಬ್ರಹ್ಮಶಿವನ ಸಮಯ ಪರೀಕ್ಷೆ, ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣ, ವೀರಶೈವ ಪಠ್ಯಗಳು ಕಾಪಾಲಿಕರ ಬಗ್ಗೆ ಕೊಡುವ ಚಿತ್ರಗಳು ಬಹುತೇಕವಾಗಿ ವಿಕೃತವಾಗಿವೆ:"[೧೩] ಎದುರಾಳಿಗಳು ಅವರ ಬಗ್ಗೆ ಕೊಡುವ ಚಿತ್ರಗಳಲ್ಲಿ ಎಷ್ಟೇ ದುರಾಗ್ರಹವಿದ್ದರೂ, ಅವರು ಜ್ಞಾನಿಗಳಾಗಿದ್ದರು. ತಮ್ಮ ಸಿದ್ಧಾಂತದಲ್ಲಿ ಶ್ರದ್ಧೆಯುಳ್ಳವರಾಗಿದ್ದರು. ಅದನ್ನು ಸಮರ್ಥವಾಗಿ ಮಂಡಿಸುವ ಅವರು ಪರಿಣತಿ ಹೊಂದಿದ್ದರು. ಎದುರಾಳಿಗಳನ್ನು ವಾಗ್ವಾದಗಳಲ್ಲಿ ಸೋಲಿಸುತ್ತಿದ್ದರು. ಶಂಕರರಿಗೆ ಅವರ ಅದ್ವೈತ ತತ್ವದ ಮಿತಿಯನ್ನು ತೋರಿಸಿಕೊಡುವ ಪ್ರಕರಣವು ಇದರಲ್ಲಿ ಒಂದು. ವರ್ಣಪದ್ಧತಿಯನ್ನು ನಂಬುತ್ತಿರದ ಕಾಪಾಲಿಕರಲ್ಲಿ ಅನೇಕರು ಬ್ರಾಹ್ಮಣರಿದ್ದರು. ಸಾಮಾಜಿಕವಾಗಿ ಇವರ ಬಗ್ಗೆ ಭೀತಿ ತುಂಬಿದ ಗೌರವ ಹಾಗೂ ತಿರಸ್ಕಾರಗಳಿದ್ದವು.

ನಾಥ ಪಂಥವು ಕಾಪಾಲಿಕರ ಒಳಗಿಂದ ಮೂಡಿದ ಬಳಿಕವೂ ಉಳಿದುಬಂದ ಆಚರಣೆಗಳಲ್ಲಿ ಭೈರವಾರಾಧನೆಯು ಒಂದಾಗಿದೆ. ಅಹಿಂಸೆಯ ಪ್ರತಿಪಾದಕವಾದ ಬೌದ್ಧಧರ್ಮದಲ್ಲಿ ಹುಟ್ಟಿದ ವಜ್ರಯಾನವು ಬಲಿದೇವತೆ ಭೈರವನನ್ನು ಆರಾಧಿಸುವ ಕಾಪಾಲಿಕವು ಸೇರಿ ನಾಥಪಂಥವನ್ನು ರೂಪಿಸಿದವು. ಇದು ಭಾರತದ ತಂತ್ರಪಂಥಗಳ ಚರಿತ್ರೆಯಲ್ಲಿ ಪ್ರಮುಖವಾದದ್ದಾಗಿದೆ. ಕರ್ನಾಟಕದಲ್ಲಿ ನಾಥರೂ, ಕಾಪಾಲಿಕರೂ ವಿಲೀನಗೊಂಡ ಬಳಿಕ, ಅನೇಕ ಕಾಪಾಲಿಕ ಆಚರಣೆಗಳು ಮುಂದುವರೆದವು. ಅವು ಶರಣರಿಗೆ ಒಪ್ಪಿಗೆಯಾಗಲಿಲ್ಲ. ವೈದಿಕ ವಿರೋಧಿಯಾದ ಶರಣರು, ನಾಥರು ಕಾಪಾಲಿಕರ ವಿಷಯ ಬಂದಾಗ ವೈದಿಕರ ನಿಲುವು ತಳೆಯುತ್ತಾರೆ. ಭೈರವ ಆರಾಧನೆಯಲ್ಲಿ ಬಲಿ, ಮಾಂಸಹಾರ, ಮದ್ಯಪಾನಗಳನ್ನು

ತಿರಸ್ಕರಿಸಿದರು. ನಾಥ ಪಂಥಕ್ಕೂ, ಬೆಟ್ಟ, ಕಣಿವೆ, ಗುಹೆಗಳಿಗೂ ಆಪ್ತ ಸಂಬಂಧವಿದೆ. ಬಹುತೇಕವಾಗಿ ನಾಥರ ನೆಲೆಗಳು ನಿರ್ಜನವಾದ ಬೆಟ್ಟಗಳಲ್ಲಿವೆ. ನಾಥರ ಬೆಟ್ಟಗಳು ಆಯಾ ಪರಿಸರದಲ್ಲಿ ಸಿದ್ಧರಬೆಟ್ಟಗಳೆಂದೇ ಹೆಸರಾಗಿವೆ. ಇವುಗಳಲ್ಲಿ ಕೊರಟಗೆರೆ ತಾಲ್ಲೂಕಿನ ಸಿದ್ಧರಬೆಟ್ಟವು ಹೆಚ್ಚು ಹೆಸರಾಗಿದೆ. ಇದನ್ನು ಬೂದಗಾವಿ ಸಿದ್ಧರ ಬೆಟ್ಟವೆಂದೂ ಕರೆಯುವರು. ಬೂದಗಾವಿಯು ಬಹುಶಃ ಬೂದಿಗವಿಯ ಆಡುರೂಪ ಆಗಿರಬಹುದು. ಗವಿಗಳಲ್ಲಿ ಧುನಿ ಹಾಕಿಕೊಂಡು ಭಸ್ಮಧಾರಿಗಳಾದ ಸಿದ್ಧರು ಇದ್ದ ಕಾರಣ ಈ ಹೆಸರು ಬಂದಿರಬಹುದು.

'ಸಿದ್ಧರ ಬೆಟ್ಟದ ಮೇಲಿರುವ ಗುಹೆಯಲ್ಲಿ ಗೋಸಲ ಸಿದ್ಧೇಶ್ವರನ ಸಮಾಧಿ ಇದೆ. ಸಿದ್ಧರಬೆಟ್ಟವು ಔಷಧಿ ಸಸ್ಯಗಳಿಗಾಗಿ ಪ್ರಸಿದ್ಧವಾಗಿದೆ. ಔಷಧಿ ಜ್ಞಾನವು ವಿಶಾಲ ಸಿದ್ಧಪರಂಪರೆಯ ಮುಖ್ಯ ಕುರುಹು ಆಗಿದೆ. ಸಿದ್ಧರಬೆಟ್ಟದ ಕೆಳಗೆ ಇರುವ ಜೋನಿಗರಹಳ್ಳಿಯಲ್ಲಿ (ಜೋಗೇರಹಳ್ಳಿ) ಭೈರವ ಗುಡಿಯಿದೆ. ಸಿದ್ಧರಬೆಟ್ಟದ ಆಸುಪಾಸಿನ ಗ್ರಾಮಗಳಲ್ಲಿ ಕಾಪಾಲಿಕ ಸಮುದಾಯವಿದೆ. ಕೊರಟಗೆರೆ ಪಾಳೇಗಾರರು ಭೈರವ ಆರಾಧಕರಾಗಿದ್ದರು' ಎಂದು ರಹಮತ್ ತರೀಕೆರೆ ಅವರು ಅಭಿಪ್ರಾಯಪಟ್ಟಿದ್ದಾರೆ. ಇಂದಿಗೂ ತುಮಕೂರು ಸೀಮೆಯ ಜನರ ಜನಪ್ರಿಯ ಹೆಸರೆಂದರೆ ಸಿದ್ಧಯ್ಯ, ಇವೆಲ್ಲ ಆಧಾರಗಳು ಇದೊಂದು ಸಿದ್ಧರ ಸೀಮೆಯೆಂದು ಸಾಬೀತುಮಾಡುತ್ತವೆ. ಆದರೆ ಈ ಸಿದ್ಧರು ಕಾಪಾಲಿಕರೋ, ನಾಥರೋ ನಿಶ್ಚಯವಾಗಿ ಹೇಳಲು ಸಾಧ್ಯವಿಲ್ಲ. ಇಲ್ಲಿ ಚುಂಚನ ಗಿರಿಯಲ್ಲಿರುವಂತೆ ನಾಥ ಮಠವಿದ್ದ ಕುರುಹುಗಳಿಲ್ಲ. ಒಂದೇ ಸಿದ್ಧಕ್ಷೇತ್ರದಲ್ಲಿ ನಾಥ, ಕಾಪಾಲಿಕ, ಆರೂಢ ಹಾಗೂ ಶೈವ ಎಲ್ಲವೂ ಪದರಗಳಾಗಿ ಕಂಡುಬರುತ್ತವೆ. ಸಿದ್ಧರಬೆಟ್ಟದ ಕೆಳಗೆ ಕಾಡುಸಿದ್ದಯ್ಯನಪಾಳ್ಯ ಎಂಬ ಊರಿದೆ. ಅಲ್ಲಿಯೇ ಆರೂಢಿ ಎಂಬ ಹಳ್ಳಿಯಿದೆ. ಜೋಗಿಹಳ್ಳಿ ಎಂಬ ಹೆಸರಿನ ಗ್ರಾಮವಿದೆ. ಸಿದ್ಧ, ಆರೂಢಿ, ಅವಧೂತ ಎಲ್ಲವೂ ಒಂದೇ ಅರ್ಥದ ಶಬ್ದಗಳು, ಜೋಗಿ ಇದು ಹೆಚ್ಚಾಗಿ ನಾಥರಿಗೇ ಸಂಬಂಧಪಟ್ಟವು ಆಗಿವೆ. ಸಿದ್ಧರಬೆಟ್ಟದ ಬುಡದಲ್ಲಿರುವ ಮಠದಲ್ಲಿ ಅಮ್ಮಾಜಮ್ಮ ಎಂಬ ಯೋಗಿನಿ ಇದ್ದರು. ಬೆಟ್ಟವು ಮೊದಲು ನಾಥರದಾಗಿದ್ದು, ನಂತರ ಸ್ಥಳೀಯ ಅವಧೂತರ ಜಾಗವಾಗಿ ಬದಲಾಗಿರಬಹುದು. ಚರಿತ್ರೆಯ ಒಂದು ಘಟ್ಟದಲ್ಲಿ ಪ್ರಬಲವಾಗಿ ಬೆಳೆದ ವೀರಶೈವವು ನಾಥ ಮೊದಲಾದ ತಾಂತ್ರಿಕ ಯೋಗಪಂಥಗಳ ವಿಷಯದಲ್ಲಿ ಆಕ್ರಮಣಕಾರಿಯಾಗಿ ವರ್ತಿಸಿರಬಹುದು. ತುಮಕೂರು ಜಿಲ್ಲೆಯಲ್ಲಿ ನಾಥ, ಕಾಪಾಲಿಕ, ಶೈವ ಪಂಥಗಳು ಅಸ್ತಿತ್ವದಲ್ಲಿದ್ದದ್ದನ್ನು ಮೇಲ್ಕಂಡ ಅಂಶಗಳಿಂದ ಗಮನಿಸಬಹುದಾಗಿದೆ.

ಭಾರತೀಯ ಸಿದ್ಧ ಪರಂಪರೆಯ ಪ್ರಭಾವಕ್ಕೆ ಕರ್ನಾಟಕದ ಪ್ರದೇಶವು ಒಳಗಾಗಿದೆ. ಕರ್ನಾಟಕದ ಚರಿತ್ರೆಯಲ್ಲೂ ಹಲವು ಸಿದ್ಧ ಪರಂಪರೆಗಳು ಜನ್ಮ ತಾಳಿವೆ. ಸಾಮಾನ್ಯವಾಗಿ

ಸಿದ್ಧ ಎಂದರೆ ಪರಿಪೂರ್ಣವಾದ, ಪಕ್ವವಾದ, ಸಾಧನೆಯ ಗುರಿ ಮುಟ್ಟಿರುವ ಎಂದು ಅರ್ಥೈಸಬಹುದಾಗಿದೆ. ಒಂದರ್ಥದಲ್ಲಿ ಸಾಧನೆಯ ಸಾಧಕನೆಂದು ಹೇಳಬಹುದಾಗಿದೆ. ಸಿದ್ಧರು ಹಾಗೂ ಆ ಪರಂಪರೆಗಳ ಸಾಹಿತ್ಯವನ್ನು, ಸಂಪ್ರದಾಯಗಳನ್ನು ಗಮನಿಸಿದಾಗ ಬೌದ್ಧಸಿದ್ಧರು, ನಾಥಸಿದ್ಧರು, ರಸಸಿದ್ಧರು, ಮಹೇಶ್ವರಸಿದ್ಧರು, ಕಪಾಲಿಸಿದ್ಧರು ಮೊದಲಾದ ಬಗೆಯ ಪ್ರಮುಖ ಸಿದ್ಧರನ್ನು ಗುರುತಿಸಬಹುದಾಗಿದೆ. ಕರ್ನಾಟಕದ ಧಾರ್ಮಿಕ, ಸಾಮಾಜಿಕ, ಇತಿಹಾಸದಲ್ಲಿ ರೇವಣಸಿದ್ಧನದು ಬಹುದೊಡ್ಡ ಹೆಸರು. ರೇವಣಸಿದ್ಧ ಒಬ್ಬ ಧಾರ್ಮಿಕ ಪುರುಷ ಮಾತ್ರವಾಗಿರದೆ ಸಾಮಾಜಿಕ ಕಳಕಳಿಯನ್ನು ಹೊಂದಿದವನೂ ಆಗಿದ್ದ. ೧೨ನೇ ಶತಮಾನದ ಶರಣರ ಚಳವಳಿಯ ಕಾಲಘಟ್ಟದಲ್ಲಿ ರೇವಣಸಿದ್ಧ ಹಾಗೂ ಸಿದ್ಧರಾಮರ ನೇತೃತ್ವದಲ್ಲಿ ರೂಪುಗೊಂಡ ಗುರುಪರಂಪರೆಗಳು ಅತ್ಯಂತ ಮುಖ್ಯವಾದವುಗಳು.

ದಕ್ಷಿಣ ಕರ್ನಾಟಕದಲ್ಲಿ ತುಮಕೂರು, ಚಿತ್ರದುರ್ಗ, ಹಾಸನ, ರಾಮನಗರ, ಚಿಕ್ಕಮಗಳೂರು, ಮೈಸೂರು, ಕೋಲಾರ, ಬೆಂಗಳೂರು ಗ್ರಾಮಾಂತರ ಜಿಲ್ಲೆಗಳಲ್ಲಿ ರೇವಣಸಿದ್ಧನ ನೆಲೆಗಳನ್ನು ಗುರುತಿಸಬಹುದಾಗಿದೆ. "ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿಯಲ್ಲಿ ರೇವಣ್ಣ ಸಿದ್ಧೇಶ್ವರ ಮಠ, ಸಿದ್ಧೇಶ್ವರ ಮಠ, ಸಿದ್ಧರಾಮೇಶ್ವರರ ಮೂರು ಮಠಗಳಿವೆ"[೧೪] "ತಿಪಟೂರು ತಾಲ್ಲೂಕಿನ ಹೊನ್ನವಳ್ಳಿ ಗ್ರಾಮದಲ್ಲಿ ಶ್ರೀ ರೇವಣ ಸಿದ್ಧೇಶ್ವರರ ಗದ್ದುಗೆ ಮಠವಿದೆ"[೧೫] ಹೀಗೆ ತುಮಕೂರು ಜಿಲ್ಲೆಯಲ್ಲೂ ಇವರ ನೆಲೆಗಳನ್ನು ಗುರುತಿಸಬಹುದಾಗಿದೆ. ರೇವಣಸಿದ್ಧರು ಜೀವಿತ ಕಾಲಾವಧಿಯಲ್ಲಿ ಧಾರ್ಮಿಕತೆಯನ್ನು ಮೀರಿ ಸಾಮಾಜಿಕ, ರಾಜಕೀಯ ಕ್ಷೇತ್ರಗಳಲ್ಲಿ ತನ್ನ ಪ್ರಭಾವ ಬೀರಿದವರಾಗಿದ್ದಾರೆ. ಸವರ್ಣೀಯರ ಪ್ರಭುತ್ವದ ತುಳಿತಕ್ಕೆ ಒಳಗಾದ, ತಳಸಮುದಾಯಗಳಿಗೆ ಆಗುತ್ತಿದ್ದ ಅನ್ಯಾಯಗಳ ವಿರುದ್ಧ ಧ್ವನಿ ಎತ್ತಿದವರಲ್ಲಿ ಮರುಳಸಿದ್ಧರು ಒಬ್ಬರು, ಶತಮಾನಗಳ ಕಾಲ ತಳಸಮುದಾಯಗಳನ್ನು ಕೀಳಾಗಿ ಕಂಡ ಪುರೋಹಿತಶಾಹಿ ವರ್ಗವನ್ನು ಪ್ರತಿಭಟಿಸಿದ ಮೊದಲ ದಲಿತ ನಾಯಕ ಮರುಳಸಿದ್ಧ. ಇವರು ಸಮಾಜದಲ್ಲಿ ನಡೆಯುವ ಹೀನ ಕೃತ್ಯಗಳನ್ನು ಖಂಡಿಸುತ್ತಾರೆ.

ದಲಿತ ಶಿವಶರಣ ಮರುಳಸಿದ್ಧರು ೧೨ನೇ ಶತಮಾನದ ಕಲ್ಯಾಣ ಕ್ರಾಂತಿ ಅಥವಾ ವಚನ ಚಳವಳಿಯಲ್ಲಿ ಗುರುತಿಸಲ್ಪಡದಿದ್ದರೂ ಅವರು ವಚನ ಚಳವಳಿಗಿಂತ ದೂರವೇ ಇದ್ದು ಹೋರಾಟದ ಕಾರ್ಯ ಕ್ಷೇತ್ರದಲ್ಲಿ ತೊಡಗಿಸಿಕೊಂಡರು. ಬಸವಣ್ಣ ಅವರಿಗೆ ಸಿಕ್ಕಷ್ಟು ಪ್ರಾಶಸ್ತ್ಯ ಮರುಳಸಿದ್ಧರಿಗೆ ಪ್ರಾಪ್ತವಾಗಲಿಲ್ಲ. "ಬಸವಣ್ಣ ಅವರು ಹುಟ್ಟಿನಿಂದ ಬ್ರಾಹ್ಮಣರು, ಅವರಿಗೆ ಹುಟ್ಟೇ ಭೂಷಣ. ಜೊತೆಗೆ ಅವರೊಂದಿಗೆ ಶರಣರೂ ಹುಟ್ಟಿಕೊಂಡರು. ಅಧಿಕಾರ, ಖಜಾನೆ, ಶರಣರ ಬೆಂಬಲದ ಬೆಂಗಾವಲಿನಲ್ಲಿ ಬಸವಣ್ಣ ಮಿಂಚಿದರು. ಜೊತೆಗೆ ಅವರ

ಸರಳ ವಚನಗಳಲ್ಲಿನ ಗಟ್ಟಿತನ ಹಾಗೂ ಒಬ್ಬ ಮೇಲ್ವರ್ಗದ ವ್ಯಕ್ತಿಯಾಗಿಯೂ ತೋರಿದ ದಲಿತಪರ ಕಾಳಜಿಗಳು ಮೇಳೈಸಿದವು. ಅವರದ್ದು ಸಾಮೂಹಿಕ ಹೋರಾಟ ಆಗಿದ್ದರಿಂದ ಹೆಚ್ಚು ಪ್ರಚಾರವೂ ದೊರೆಯಿತು."[೧೬] ಆದರೆ ಮರುಳಸಿದ್ಧರು ಹುಟ್ಟಿನಿಂದ ಅಸ್ಪೃಶ್ಯ, ಆತನದು ಏಕಾಂಗಿ ಹೋರಾಟ. ಆತನ ಜಾತಿ ಅರಿಯುತ್ತಲೇ ದೂರ ಸರಿವವರು, ಶಪಿಸುವವರು, ಅಸಹ್ಯಪಟ್ಟುಕೊಳ್ಳುವಂಥವರ ನಡುವೆಯೇ ಅವರನ್ನೆಲ್ಲಾ ವಿರೋಧಿಸಿ ಕೇವಲ ತನ್ನ ವೈಚಾರಿಕ ನಿಲುವು, ವಾಚಾಳಿತನ, ತನಗಿರುವ ಪಾಂಡಿತ್ಯದ ಬೆಂಬಲ, ನೈತಿಕ ಧೈರ್ಯದಿಂದ ಎಂಥವರನ್ನು ಮರಳು ಮಾಡಿ, ತನ್ನತನದಿಂದಲೇ ಆಕರ್ಷಿಸಿ, ತನ್ನ ಸಮುದಾಯದಲ್ಲಿ ಗುರುತಿಸಿಕೊಂಡವರಾಗಿದ್ದಾರೆ.

ಮರುಳಸಿದ್ಧರ ಪ್ರಭಾವ ತುಮಕೂರು ಜಿಲ್ಲೆಯ ಮೇಲೂ ಆಯಿತು ಎಂಬುದನ್ನು ಗಮನಿಸಬಹುದು. "ಮರುಳಸಿದ್ಧರು ಉತ್ತರ ದಿಕ್ಕಿನತ್ತ ಸಂಚರಿಸುತ್ತಾ ಬಂದರು. ಆಗ ಅವರು ಅನಾರೋಗ್ಯಕ್ಕೆ ಒಳಗಾಗುತ್ತಾರೆ. ಆ ಊರಿನಲ್ಲಿ ಹರನ ಪೂಜೆಯಲ್ಲಿ ನಿರತರಾಗಿ ಲಿಂಗಜಂಗಮಕ್ಕೆ ತನು, ಮನ, ಧನಗಳನ್ನರ್ಪಿಸಿ ಮಠಾಧಿಪತಿಯೂ ಆಗಿದ್ದ ಶಿವಶರಣ ರಾಮಿತಂದೆಯು ಮರುಳಸಿದ್ಧರನ್ನು ಕಂಡು, ತನ್ನ ಮಠಕ್ಕೆ ಕರೆದೊಯ್ದು ಔಷದೋಪಚಾರ ಮಾಡುತ್ತಾರೆ. ರೋಗವು ವಾಸಿಯಾದ ನಂತರ ಮರುಳಸಿದ್ಧರ ಪ್ರಭಾವಕ್ಕೆ ಒಳಗಾದ ರಾಮಿತಂದೆಯು ಅವರ ಮುಖ್ಯ ಶಿಷ್ಯನಾದನು. ಚಿಕ್ಕನಾಯಕನಹಳ್ಳಿ ತಾಲ್ಲೂಕು ಗೋಡೆಕೆರೆ ಎಂಬ ಹಳ್ಳಿಯಲ್ಲಿ ರಾಮಿತಂದೆ ಹಾಗೂ ಮರುಳಸಿದ್ಧರ ಗದ್ದುಗೆ ಸ್ಮಾರಕಗಳು ಇವೆ."[೧೭] ಚಿತ್ರದುರ್ಗ ತಾಲ್ಲೂಕಿನ ಸಿರಿಗೆರೆಯು ಕರ್ನಾಟಕಕ್ಕೆ ಪರಿಚಿತವಾದದ್ದು. ಇಲ್ಲಿ ಮರುಳಸಿದ್ಧರ ಪ್ರಭಾವದಿಂದ ತೆಲುಗುಬಾಳು ಸಿದ್ಧೇಶ್ವರರಿಂದ ಸ್ಥಾಪಿತವಾದ ಶ್ರೀ ತರಳಬಾಳು ಜಗದ್ಗುರುಗಳ ಪೀಠ ಪರಂಪರೆ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಪ್ರಸಿದ್ಧಿ ಪಡೆದಿದೆ. "ತುಮಕೂರು ಜಿಲ್ಲೆ ತಿಪಟೂರು ಕೇಂದ್ರಕ್ಕೆ ೧೩ ಕಿ.ಮೀ ದೂರದಲ್ಲಿ ಪಾಲ್ಕುರಿಕೆ ಎಂಬ ಗ್ರಾಮವಿದೆ. ಇಲ್ಲಿ ತರಳಬಾಳು ಬೃಹನ್ಮಠದ ಶಾಖಾ ಮಠವಿದೆ"[೧೮] ಹೀಗೆ ಶಿವಮೊಗ್ಗ, ತುಮಕೂರು, ಹಾಸನ, ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಅವರ ಸ್ಮಾರಕಗಳು ಕಾಣಸಿಗುತ್ತವೆ.

ತಳಸಮುದಾಯದಿಂದ ಹುಟ್ಟಿ ಬಂದ ಮರುಳಸಿದ್ಧರು ಜಿಡ್ಡುಗಟ್ಟಿದ ಸಾಮಾಜಿಕ ವ್ಯವಸ್ಥೆಯ ಪರಿವರ್ತನೆಗಾಗಿ ಜೀವನದುದ್ದಕ್ಕೂ ಹಲವು ನೋವುಂಡಂತಹವರು. ಪ್ರಾಣಿ ಬಲಿಯನ್ನು ತಡೆಯೊಡ್ಡಿ ಬ್ರಾಹ್ಮಣರ ಯಾಗವನ್ನು ತಡೆದು ಎಲ್ಲಾ ಜಾತಿಗಳೂ ಒಂದೇ ಎಂದು ಸಾರಿದರು. ರಾಜಪ್ರಭುತ್ವಗಳ ಆಕ್ರೋಶಕ್ಕೆ ಬಲಿಯಾಗಿ ಹಲವು ಯಾತನೆಗಳನ್ನು ಅನುಭವಿಸಿದರು. ಮಾನವ ಹಕ್ಕುಗಳ ರಕ್ಷಣೆಗಾಗಿ ಮೊದಲು ಧ್ವನಿ ಎತ್ತಿದ ಮರುಳಸಿದ್ಧರು,

ದುಷ್ಟ ಜನರ ಪರಿವರ್ತನೆಗಾಗಿ ಶ್ರಮಿಸಿದರು. ಸಮಾಜದ ಅಸಮಾನತೆಯನ್ನು ತೊಡೆದುಹಾಕಿ ಸಮಾನತೆಯನ್ನು ಸಾರಿದ ಇವರು ಸಮಾಜ ಸುಧಾರಕರಾಗಿ ಹೋರಾಡಿದ ಶರಣರಾಗಿದ್ದಾರೆ. ರೇವಣ್ಣ ಸಿದ್ಧರ ಶಿಷ್ಯರಾದ ಇವರು, ಕರ್ನಾಟಕದ ಭೂ ಭಾಗದಲ್ಲಿ ನಡೆದಾಡಿದ್ದಾರೆ. ೧೨ನೇ ಶತಮಾನದ ಕಲ್ಯಾಣದಲ್ಲಿ ಒಂದುಗೂಡಿದ ಶಿವಶರಣರ ಪರಂಪರೆಯವರಿಂದಲೂ ದೂರವೇ ಉಳಿದಿದ್ದರು. ತಳಸಮುದಾಯಗಳಿಗಾಗಿ, ಶೋಷಿತ ಸಮಾಜದ ಏಳಿಗೆಗಾಗಿ ಹೋರಾಡುತ್ತಲೇ ಬಂದ ಮರುಳಸಿದ್ಧರನ್ನು ಚರಿತ್ರೆಯಲ್ಲಿ ಗುರುತಿಸಬೇಕಾದ ಅಗತ್ಯವಿದೆ.

ಮಧ್ಯಕಾಲೀನ ಚರಿತ್ರೆಯಲ್ಲಿ ಪಾಳೆಯಗಾರರ ಮೂಲಕ ೧೬ನೇ ಶತಮಾನದಲ್ಲಿ ವಿಜಯನಗರದ ಅರಸರು ಈ ಜಿಲ್ಲೆಯನ್ನು ಅಧೀನದಲ್ಲಿಟ್ಟುಕೊಂಡಿದ್ದರು. "ನಿಡುಗಲ್ಲು, ಪಾವಗಡ, ಬಿಜ್ಜಾವರ (ಮಧುಗಿರಿ), ಮಿಡಿಗೇಶಿ, ಸಿರಾ, ರತ್ನಗಿರಿ, ಹಾಗಲವಾಡಿ, ಚಿಕ್ಕನಾಯಕನಹಳ್ಳಿ, ಗುಬ್ಬಿಹೊಸಳ್ಳಿ, ಕೋರಾ, ಹೆಬ್ಬೂರು, ಹೊಳವನಹಳ್ಳಿ (ಕೊರಟಗೆರೆ), ಬಿದರೆ, ಬಟವಾಡೆ (ದೇವರಾಯ ಪಟ್ಟಣ) ಕುಣಿಗಲ್, ತುರುವೇಕೆರೆ ಮುಂತಾದವು. ಪಾಳೆಯಗಾರರ ಆಡಳಿತಕ್ಕೆ ಒಳಪಟ್ಟಿದ್ದವು. ಇವರು ಕ್ರಿ.ಶ.೧೫೬೫ರಲ್ಲಿ ವಿಜಯನಗರ ಪತನ ಹೊಂದಿದ ನಂತರ ಈ ಜಿಲ್ಲೆಯಲ್ಲಿ ಸ್ವತಂತ್ರರಾಗಿ ಆಳ್ವಿಕೆ ನಡೆಸಿ ಜಿಲ್ಲೆಯ ಸಾಂಸ್ಕೃತಿಕ ಅಭಿವೃದ್ಧಿಗೆ ಕಾರಣಕರ್ತರಾಗಿದ್ದಾರೆ."[೧೯] ತುಂಬಾಡಿಗೆ ಸಮೀಪದಲ್ಲಿರುವ ಸಿದ್ಧರ ಬೆಟ್ಟದಲ್ಲಿ ಕೋಟೆ ನಿರ್ಮಿಸಿ ತಳಸಮುದಾಯದ ರಾಜನಾದ ಕುರಂಗರಾಜ ಆಳುತ್ತಿದ್ದನು. ಮಾದಿಗ ಜಾತಿಯ ಇವನು ಕೋಟೆಯ ಮೇಲೆ ಆಳ್ವಿಕೆ ನಡೆಸುತ್ತಿದ್ದ. ಕುರುಹಿಗೆ ಗಲ್ಲೇಬಾನಿಯಂತಹ ಕೊಳವನ್ನು ಜನಪದರು ನಿದರ್ಶನ ನೀಡುತ್ತಾರೆ. "ದೊರೆತಿರುವ ಸಾಹಿತ್ಯದಲ್ಲಿ ಕುರಂಗರಾಜನು ಚರ್ಮದ ನಾಣ್ಯಗಳನ್ನು ಚಲಾವಣೆಗೆ ತಂದಿದ್ದನೆಂದು ತಿಳಿದುಬರುತ್ತದೆ."[೨೦] ಇವನ ಹೆಸರಿನಲ್ಲಿ ಕುರಂಕೋಟೆ ಹೆಸರಿನ ಗ್ರಾಮ ಇಂದಿಗೂ ಇದೆ.

"ಜಿಲ್ಲೆಯ ಇತಿಹಾಸದಲ್ಲಿ ಎಲ್ಲೂ ಕೂಡ ಕುರಂಗರಾಜನ ಪ್ರಸ್ತಾಪ ಇಲ್ಲ. ಶಾಸನ, ದಾಖಲೆ ಲಭ್ಯವಾಗಿಲ್ಲ. ಹೀಗಾಗಿ ಕುರಂಕೋಟೆಯ ಪಾಳೇಗಾರ ಕುರಂಗ ಎಂದು ಹೇಳಲು ಸಾಧ್ಯವಿಲ್ಲ. ಆತ ದಲಿತ ಎಂಬುದಕ್ಕೂ ದಾಖಲೆ ಇಲ್ಲ"[೨೧] ಎನ್ನುತ್ತಾರೆ ಇತಿಹಾಸಕಾರರಾದ ಯೋಗೀಶ್ವರಪ್ಪ ಡಿ.ಎನ್. ಅವರು ಕೊರಟಗೆರೆಯನ್ನು ಒಕ್ಕಲಿಗರು, ಪಾವಗಡವನ್ನು ಗೊಲ್ಲರು, ನಿಡುಗಲ್ಲು ಬೆಟ್ಟವನ್ನು ಬೇಡರು(ನಾಯಕರು), ಮಧುಗಿರಿ ಮತ್ತು ಹಾಗಲವಾಡಿ ಸಂಸ್ಥಾನವನ್ನು ಲಿಂಗಾಯತರು ಆಳ್ವಿಕೆ ನಡೆಸಿದ್ದರು. ಆದರೆ ದಲಿತರು ಆಳ್ವಿಕೆ ನಡೆಸಿದ ಉದಾಹರಣೆ ಇಲ್ಲ ಎಂಬುದು ಅವರ ಅಭಿಪ್ರಾಯ.

ಈ ಅಭಿಪ್ರಾಯ ಒಪ್ಪದ ತುಮಕೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಓ.ಅನಂತರಾಮಯ್ಯ ಅವರು "ಕುರಂಕೋಟೆಯನ್ನು ದಲಿತ ಕುರಂಗ ಆಳ್ವಿಕೆ ಮಾಡಿರುವುದು ಸತ್ಯ. ಆದರೆ ಜಾತಿ ಕಾರಣಕ್ಕೆ ಇತಿಹಾಸಕಾರರು ಆತನ ಕುರಿತು ಹೆಚ್ಚಿನ ಅಧ್ಯಯನ ನಡೆಸಿಲ್ಲ. ಇತಿಹಾಸದಲ್ಲಿ ದಾಖಲಿಸಿಲ್ಲ"[೨೨] ಎನ್ನುತ್ತಾರೆ. ಕುರಂಗರಾಜನ ಕುರಿತು ಸಾಕಷ್ಟು ಪುರಾವೆಗಳಿವೆ. ಸಾಹಿತಿ ವಿ.ಚೀ. ಕುರಂಗರಾಜ ಒಬ್ಬ ಮಾದಿಗ ಎಂದು ಹೇಳಿದ್ದಾರೆ. ಕುರಂಗರಾಜ ಒಬ್ಬ ಸ್ವತಂತ್ರ ಆಡಳಿತಗಾರ; ಯಾವುದೇ ಸಾಮಂತ ರಾಜ ಅಲ್ಲ ಎಂಬುದು ಅನಂತರಾಮಯ್ಯ ಅವರ ಅಭಿಪ್ರಾಯ. ಕುರಂಗರಾಜನ ಕುರಿತು ಮೌಖಿಕ ಮಾಹಿತಿ ಸಂಗ್ರಹಿಸಿ 'ಕುರಂಗರಾಜನ ವೈಭವ ಕಾದಂಬರಿ ಬರೆದಿರುವ ಕೊರಟಗೆರೆ ಸರ್ಕಾರಿ ಪ್ರಥಮ ದರ್ಜೆ ಕಾಲೇಜು ಕನ್ನಡ ಉಪನ್ಯಾಸಕ ಓ.ನಾಗರಾಜ್ ಕೂಡ "ದಲಿತ ಜನಾಂಗಕ್ಕೆ ಸೇರಿದ ಕುರಂಗ ಎಂಬ ವ್ಯಕ್ತಿಯೇ ಕುರಂಕೋಟೆ ಆಳ್ವಿಕೆ ಮಾಡಿದಾತ"[೨೩] ಎಂದು ಹೇಳುತ್ತಾರೆ. ವೀ. ಚಿಕ್ಕವೀರಯ್ಯ ಅವರ 'ಸಿದ್ಧರಬೆಟ್ಟ ಒಂದು ದರ್ಶನ' ಕೃತಿಯಲ್ಲಿ ಕುರಂಗರಾಜನ ಪ್ರಸ್ತಾಪ ಮಾಡಿದ್ದಾರೆ. ತಳಸಮುದಾಯದ ವ್ಯಕ್ತಿಯೊಬ್ಬ ರಾಜನಾಗಿ ಮೆರೆದ ಕಥೆ ರಾಜ್ಯದ ಇತಿಹಾಸದಲ್ಲಿ ಅಪರೂಪ. ಆದರೆ ಸಿದ್ಧರಬೆಟ್ಟದ ತಪ್ಪಲಿನಲ್ಲಿರುವ ಕುರಂಕೋಟೆಯನ್ನು ಆಳ್ವಿಕೆ ನಡೆಸಿದ್ದು ತಳಸಮುದಾಯದ ರಾಜ ಕುರಂಗರಾಜ.

ತಳಸಮುದಾಯದ ಕುರಂಗ ರಾಜ ಕುರಂಕೋಟೆಯಲ್ಲಿ ಆಳ್ವಿಕೆ ನಡೆಸಿದ ಎಂಬುದಕ್ಕೆ ದಾಖಲೆ ಸಿಗದಿದ್ದರೂ ಮೌಖಿಕ ಆಕರಗಳಿವೆ. ನಾಲ್ಕು ನೂರು ವರ್ಷಗಳ ಹಿಂದೆ ಕುರಂಗ ಎಂಬಾತ ಕುರಂಕೋಟೆ ಸುತ್ತಮುತ್ತಲ ಗ್ರಾಮಗಳ ಆಳ್ವಿಕೆ ಮಾಡಿದ್ದ ಎಂಬ ಐತಿಹ್ಯ ಈ ಗ್ರಾಮದ ಹೆಗ್ಗಳಿಕೆಯಾಗಿದೆ. ಕುರಂಕೋಟೆಯ ಪಾಳೇಗಾರನಾಗಿ ಮಧುಗಿರಿಯ ಮುಮ್ಮಡಿ ಚಿಕ್ಕಪ್ಪಗೌಡ ನೇಮಿಸಿದ ಎಂಬ ನಂಬಿಕೆಯಿದೆ. ಆದರೆ ಈತ ಒಬ್ಬ ಸ್ವತಂತ್ರ ಆಡಳಿತಗಾರ ಎಂಬುದಕ್ಕೆ ಹೆಚ್ಚಿನ ಒತ್ತು ಇದೆ. "ಇಡೀ ಕರ್ನಾಟಕದಲ್ಲಿ ತಳಮುದಾಯದ ವ್ಯಕ್ತಿ ಕೋಟೆ ಕಟ್ಟಿ ಆಳಿದ ದಾಖಲೆ ಕುರಂಕೋಟೆ ಬಿಟ್ಟರೆ ಎಲ್ಲೂ ಇಲ್ಲ. ಬೆಟ್ಟದ ಮೇಲೆ ದೇಸಿ ಮಾದರಿಯಲ್ಲಿ ಕೋಟೆ ಕಟ್ಟಿಸಲಾಗಿದೆ. ಕೆರೆ, ಕೊಳ್ಳ ಕಟ್ಟಿಸಿದ್ದಾನೆ. ತನ್ನ ನೆನಪಿಗಾಗಿ ಬೆಟ್ಟದ ಕೆಳಗೆ ಕುರಂಕೋಟೆ ಗ್ರಾಮ ಕಟ್ಟಿದ. ಈ ಗ್ರಾಮ ಈಗಲೂ ಇದೆ"[೨೪] ಎಂದು ಲೇಖಕ ಎಚ್.ಕೆ.ನರಸಿಂಹಮೂರ್ತಿ ಅಭಿಪ್ರಾಯಪಟ್ಟಿದ್ದಾರೆ. ಕೊರಟಗೆರೆ ತಾಲೂಕಿಗೆ ಸೇರಿರುವ ಕುರಂಕೋಟೆ ಸಿದ್ಧರಬೆಟ್ಟದ ತಪ್ಪಲಿನಲ್ಲಿರುವ ಮುನ್ನೂರು ಮನೆಗಳಿರುವ ಗ್ರಾಮ. ತಳಸಮುದಾಯಗಳೊಂದಿಗೆ ನಾಯಕ, ಸವಿತಾ ಸಮಾಜ, ಒಕ್ಕಲಿಗರು ಮತ್ತು ಲಿಂಗಾಯತ ಸಮುದಾಯದವರು ಇಲ್ಲಿದ್ದಾರೆ. ವಿಶೇಷ ಔಷಧಿ ಗಿಡಮೂಲಿಕೆಗಳಿಗೆ ಹೆಸರಾದ ಸಿದ್ಧರಬೆಟ್ಟದ

ಮೇಲೆ ಇಂದಿಗೂ ತಳಸಮುದಾಯದ ಪಾಳೇಗಾರನ ಕೋಟೆಯ ಪಳೆಯುಳಿಕೆಗಳಿವೆ. "ಕುರಂಕೋಟೆ ಗ್ರಾಮ ಸೇರಿದಂತೆ ಸುತ್ತಮುತ್ತಲ ಗ್ರಾಮಗಳಲ್ಲಿ ಜನಪದೀಯ ಮಾಹಿತಿಗಳು, ಲಾವಣಿಗಳು ಕುರಂಕೋಟೆಯನ್ನು ಆಳ್ವಿಕೆ ಮಾಡಿದ್ದು, ತಳಸಮುದಾಯದ ರಾಜ"[೨೫] ಎಂದು ಹೇಳುತ್ತವೆ. ಕುರಂಗ ತಳಸಮುದಾಯವನಾದ ಕಾರಣಕ್ಕೆ ಈ ಕೋಟೆಯ ಇತಿಹಾಸ ಕೆದಕುವಲ್ಲಿ ಇತಿಹಾಸಕಾರರು ಹೆಚ್ಚಿನ ಒತ್ತು ನೀಡುತ್ತಿಲ್ಲ ಎಂಬ ಮಾತುಗಳೂ ಇವೆ. ತಳಸಮುದಾಯದವನು ಎಂಬ ಕಾರಣಕ್ಕೆ ಆಗಿನ ಇತಿಹಾಸಕಾರರು ಕೂಡ ಈ ಕೋಟೆಯ ಕುರಿತು ಏನನ್ನೂ ದಾಖಲಿಸದೆ ಇರುವ ಸಾಧ್ಯತೆಯನ್ನು ಅಲ್ಲಗಳೆಯುವಂತಿಲ್ಲ. ಕೋಟೆಯ ಸುತ್ತಲೂ ಅನೇಕ ಶಾಸನಗಳಿವೆ, ವಿಗ್ರಹಗಳಿವೆ. ಇಷ್ಟಿದ್ದು ಕೋಟೆಯ ಕುರಿತು ಇಲ್ಲಿಯವರೆಗೂ ಗಂಭೀರ ಸಂಶೋಧನೆ, ಅಧ್ಯಯನ ಆಗಿಲ್ಲ.

ಕುರಂಕೋಟೆ ಮತ್ತು ಸುತ್ತಮುತ್ತಲ ಗ್ರಾಮಗಳ ಜನರು ಕುರಂಗರಾಜನ ಕುರಿತು ಅನೇಕ ಕತೆಗಳನ್ನು ಈಗಲೂ ಹೇಳುತ್ತಾರೆ. ತಲೆತಲಾಂತರದಿಂದ ಕೇಳಿಕೊಂಡು ಬಂದಿರುವ ಜನರ ಮಾತುಗಳು ನಿಜವೇ ಆಗಿದ್ದಲ್ಲಿ ಕುರಂಕೋಟೆ ಗ್ರಾಮವು ರಾಜ್ಯ ಮಾತ್ರವಲ್ಲ ದೇಶವೇ ಹೆಮ್ಮೆ ಪಡುವಂಥ ಗ್ರಾಮವಾಗಲಿದೆ. "ಮಧುಗಿರಿ ನಾಡಪ್ರಭುಗಳಲ್ಲಿ ದಳವಾಯಿಯಾಗಿದ್ದ ಮಾದಿಗ ದಂಡೋರ ಎಂಬಾತನ ಪುತ್ರ ಕುರಂಗರಾಜ."[೨೬] ಸಿದ್ಧರಬೆಟ್ಟದ ಮೇಲಿನ ಅಳಿದುಳಿದಿರುವ ಕೋಟೆಯಲ್ಲಿ ಸಾಕಷ್ಟು ಮಾಹಿತಿ ಈಗಲೂ ಲಭ್ಯವಿದೆ. "ಅರ್ಧಚಂದ್ರ ಆಕೃತಿಯ ಬೆಟ್ಟದ ಮೇಲಿರುವ ಅಲಸಂದೆ ಕೆರೆಯನ್ನು ಕುರಂಗರಾಜನೇ ಕಟ್ಟಿಸಿದ ಎಂಬ ಪ್ರತೀತಿ ಇದೆ. ಗಲ್ಲೇಬಾನಿ ಎಂದು ಕರೆಯುವ ದೊಣೆ ಇದ್ದು, ಇಲ್ಲಿಯೇ ಚರ್ಮದ ನಾಣ್ಯ ತಯಾರಿಸಲು ಚರ್ಮ ನೆನೆ ಹಾಕಲಾಗುತ್ತಿತ್ತು"[೨೭] ಎಂದು ದೊಡ್ಡ ತಿಮ್ಮಯ್ಯ ಹೇಳಿದ್ದಾರೆ. "ಆನೆ ಮತ್ತು ಕುದುರೆಗಳಿಗೆ ನೀರುಣಿಸುವ ಲದ್ದಿಕಟ್ಟೆ ಇದೆ. ಬಂಡೆಯ ಮೇಲಿರುವ ನಿಸರ್ಗದತ್ತವಾಗಿ ರೂಪಿತವಾಗಿರುವ ಮೊಟ್ಟೆಯಾಕಾರದ ಬಾವಿ ಇಲ್ಲಿನ ವಿಶೇಷವಾಗಿದೆ. ಗ್ರಾಮದ ಮಧ್ಯೆ ಸಿಪಾಯಿಗಳಿಗಾಗಿಯೇ ನಿರ್ಮಿಸಿದ್ದ ಮಲ್ಲಪ್ಪನ ಗುಡಿ ಈಗ ಪಾಳು ಬಿದ್ದಿದೆ. ಕಂಚುಗಾರರ ಬೀದಿ ಈಗ ಹೊಲಗಳಾಗಿವೆ. ಹೊಲ ಉಳುಮೆ ಮಾಡುವಾಗ ಒಡವೆ, ಮಡಕೆ ಚೂರು, ಕಬ್ಬಿಣದ ಅಸ್ತ್ರಗಳು ಈಗಲೂ ಸಿಗುತ್ತವೆ ಎನ್ನುತ್ತಾರೆ ಗ್ರಾಮದ ಕೆ.ಎಸ್.ರಾಮಚಂದ್ರಪ್ಪ ಅವರು."[೨೮]

ಕುರಂಗರಾಯನ ಪ್ರೇಯಸಿ ವಾಸಿಸುತ್ತಿದ್ದ ಬೆಟ್ಟದ ಮೇಲಿನ ಅರಮನೆ ಜಾಗವನ್ನು ಸೂಳೆಕಲ್ಲು ಎಂದೇ ಜನ ಕರೆಯುತ್ತಾರೆ. ಯೋಧ ಪಾತಪ್ಪ ಮಡಿದ ಪಾತಪ್ಪನ ಗುಂಡು,

ಬಜೆಹಳ್ಳ, ಕೊಲುಮೆ ಗುಂಡು, ಮಾದಗಿತ್ತಿ ಮಡು ಮುಂತಾದವು ಕುರಂಗರಾಜನ ಕತೆ ಸಾರುತ್ತಿವೆ.

ಮುಂದಿನ ಅವಧಿಯಲ್ಲಿ ಪಾಳೆಯಗಾರರು ಸರ್ವಾಧಿಕಾರಿಯಾದ ಹೈದರಾಲಿಯ ಅವಕೃಪೆಗೆ ಪಾತ್ರರಾಗಿ ತಮ್ಮ ಸ್ಥಾನಮಾನ ಕಳೆದುಕೊಂಡರು. ಈ ರೀತಿ ರಾಜ್ಯ ಕಳೆದುಕೊಂಡ ಈ ಪಾಳೇಗಾರರು ಹೈದರಾಲಿಯ ಪುತ್ರ ಟಿಪ್ಪು ಸುಲ್ತಾನನ ವಿರುದ್ಧವಾಗಿದ್ದ ಬ್ರಿಟೀಷರಿಗೆ ಸಹಾಯಕರಾಗಿ ಟಿಪ್ಪುವಿನ ಪತನಕ್ಕೂ ಕಾರಣರಾದರು. ಈ ಜಿಲ್ಲೆ ಪೂರ್ಣವಾಗಿ ಮೈಸೂರು ಅರಸರ ಆಡಳಿತಕ್ಕೆ ಒಳಪಟ್ಟಿತು. ಮುಮ್ಮಡಿ ಕೃಷ್ಣರಾಜ ಒಡೆಯರ ಆಳ್ವಿಕೆಯಲ್ಲಿ ಮಧುಗಿರಿ ಫೌಜುದಾರರಿಗೆ ಸೇರಿತು. ಆದರೆ ಮುಮ್ಮಡಿ ಕೃಷ್ಣರಾಜ ಒಡೆಯರಿಂದ ಬ್ರಿಟೀಷರು ಮೈಸೂರು ಆಡಳಿತವನ್ನು ಕಿತ್ತುಕೊಂಡು ೧೮೩೧ರಿಂದ ೧೮೮೧ರವರೆಗೆ ಕಮೀಷನರ್‌ಗಳ ಮೂಲಕ ಆಡಳಿತ ನಡೆಸಿದರು.

ಅಂಬೇಡ್ಕರ್ ಅವರು ಭಾರತಕ್ಕೆ ಅಸ್ಪೃಶ್ಯತೆ ನಿವಾರಣೆ ಹಾಗೂ ಅದರ ಕರಾಳ ಮುಖಗಳನ್ನು ಎಳೆಎಳೆಯಾಗಿ ಪರಿಚಯಿಸುವುದಕ್ಕೂ ಹಿಂದೆಯೇ, ಮೈಸೂರು ಸಂಸ್ಥಾನದಲ್ಲಿ ನಾಲ್ವಡಿ ಕೃಷ್ಣರಾಜರು, ದಿವಾನ್ ಮಿರ್ಜಾ ಇಸ್ಮಾಯಿಲ್ ಅವರ ಸಹಕಾರ ಹಾಗೂ ಪ್ರೋತ್ಸಾಹದಿಂದಾಗಿ, ಈ ಭಾಗದಲ್ಲಿ ಪಂಚಮರ ಆರ್.ಗೋಪಾಲಸ್ವಾಮಿ ಅಯ್ಯರ್ ಅವರು ಅಸ್ಪೃಶ್ಯತೆ ನಿವಾರಣೆಗೆ ಕೈಗೊಂಡ ಕ್ರಮಗಳು, ಅಸ್ಪೃಶ್ಯರ ಶಿಕ್ಷಣಕ್ಕೆ ನೀಡಿದ ಪ್ರೋತ್ಸಾಹ ಪ್ರಮುಖವಾದದ್ದು. "ಕರ್ನಾಟಕ ಚರಿತ್ರೆಯಲ್ಲಿ ಮಾತ್ರವಲ್ಲದೆ ಭಾರತ ಚರಿತ್ರೆಯಲ್ಲೂ ಮೈಸೂರು ಸಂಸ್ಥಾನಕ್ಕೆ ೧೮೮೧ರಿಂದ ೧೯೪೭ರವರೆಗಿನ ಅವಧಿಯಲ್ಲಿನ ಸಾಂಸ್ಕೃತಿಕ ಚರಿತ್ರೆಗೆ ಒಂದು ವಿಶಿಷ್ಟ ಸ್ಥಾನವಿದೆ. ಏಕೆಂದರೆ ಅಸ್ಪೃಶ್ಯರು, ದಲಿತರು, ಶೋಷಿತರು, ಕೆಳವರ್ಗದವರು, ಮಹಿಳೆಯರು, ಬುಡಕಟ್ಟು ಸಮುದಾಯದವರು ಮೊದಲ ಬಾರಿಗೆ ಸಾಮಾಜಿಕ ನ್ಯಾಯ ಹಾಗೂ ಬದಲಾವಣೆಯ ಮುಖಾಂತರ ಮಾತನಾಡಿದ್ದು ಇದೇ ಸಂದರ್ಭದಲ್ಲಿ."[೨೯] ನಾಲ್ವಡಿ ಕೃಷ್ಣರಾಜ ಒಡೆಯರ್ ಅವರು ತಮ್ಮ ಸುದೀರ್ಘ ಆಳ್ವಿಕೆಯ ಅವಧಿಯಲ್ಲಿ ಕೈಗೊಂಡ ಸಾಮಾಜಿಕ, ಶೈಕ್ಷಣಿಕ ಹಾಗೂ ಸಾಂಸ್ಕೃತಿಕ ಅಭಿವೃದ್ಧಿ ಕಾರ್ಯಗಳು ಮಹತ್ವಪೂರ್ಣ ವಾಗಿದ್ದವು. ಇದರಿಂದಾಗಿ ಭಾರತದಲ್ಲಿಯೇ ಮೈಸೂರು ಮಾದರಿ ಸಂಸ್ಥಾನ ಎಂದು ಹೆಸರು ಪಡೆದಿತ್ತು.

೧೮೮೫ರ ಸುಮಾರಿಗೆ ಅಖಂಡ ಭಾರತದ ಪರಿಕಲ್ಪನೆ, ತಮ್ಮತನವನ್ನು ದಾಸ್ಯಕ್ಕೆ ಅಡವಿಟ್ಟ ಮಾನಸಿಕ ಯಾತನೆ, ಸಂಸ್ಕೃತಿಯ ಬಗೆಗಿನ ಮೋಹ ಈ ಎಲ್ಲವೂ 'ಸ್ವಾತಂತ್ರ್ಯ'

ಎಂಬ ಮೂರಕ್ಷರದಲ್ಲಿ ಅಡಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ತುಮಕೂರು ಜಿಲ್ಲೆ ತನ್ನದೇ ಆದ ಭಾವನಾತ್ಮಕ ಹೋರಾಟದ ಹಾದಿಯನ್ನು ಕಂಡುಕೊಂಡಿತು. ಇದರಲ್ಲಿ ಅಕ್ಷರ, ಸಾಮಾಜಿಕ ಸವಲತ್ತುಗಳಿಂದ ವಂಚಿತರಾದವರೂ, ಮಡಿ, ಮೈಲಿಗೆಗಳ ಹೆಸರಲ್ಲಿ ಶೋಷಣೆಯನ್ನು ಅನುಭವಿಸಿದವರೂ, ಜೀತದಾಳುಗಳು ಹಾಗೂ ಕೃಷಿ ಕಾರ್ಮಿಕರು ಮುಂತಾದ ಅಲಕ್ಷಿತ ಸಮುದಾಯಗಳಿಂದ ಬಂದವರು ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡಿದ್ದು ಮಹತ್ವಪೂರ್ಣವಾಗಿದೆ. ತುಮಕೂರು ಜಿಲ್ಲೆಯಲ್ಲಿ ಆರಂಭವಾದ ಚಳವಳಿ ತಳಸಮುದಾಯಗಳಿಗೆ ಕ್ರಾಂತಿಯ ನೆಲವಾಯಿತು. "ಕಾಡಿನ ಭಾಗಗಳನ್ನು ಅರಿತಿದ್ದ ತಳಸಮುದಾಯಗಳ ನೂರಾರು ಯುವಕರು ದೇಶಾಭಿಮಾನದಿಂದ ಮುನ್ನುಗ್ಗಿದರು. ಸಿರಾ ತಾಲ್ಲೂಕಿನ ಹುಣಸೆಹಳ್ಳಿ, ಯಂದೊರೆ, ಭೂತಕಾಟನಹಳ್ಳಿ, ಯಲಿಯೂರು, ಬುಕ್ಕಾಪಟ್ಟಣ, ಮಧುಗಿರಿ, ಮಿಡಗೇಶಿ, ಹೊಸಕೆರೆ, ಚಿನಕವಜ್ರ, ಐಡಿಹಳ್ಳಿ ಇತ್ಯಾದಿ ಪ್ರದೇಶಗಳಲ್ಲಿ ಹೇರಳ ವಾಗಿದ್ದ ಈಚಲು ಮರಗಳನ್ನು ಕಡಿಯಲಾಯಿತು. ಸಿರಾ ತಾಲ್ಲೂಕಿನ ಕೆರೆಯಾಗಲಹಳ್ಳಿ, ಹುಲಿಕುಂಟೆ ಭಾಗಗಳಲ್ಲಿನ ಈಚಲು ಮರಗಳನ್ನು ಕಡಿಯಲು ಹೆಂದೊರೆಯ ಸಿ.ಟಿ.ಹನುಮಂತಯ್ಯ ಅವರ ನೇತೃತ್ವದಲ್ಲಿ ಹತ್ತಾರು ಯುವಕರು ಮುಂದಾದರು"[೩೦] ಸಿ.ಟಿ.ಹನುಮಂತಯ್ಯ ಹೆಂದೊರೆಯ ಪರಿಶಿಷ್ಟ ಜಾತಿಯ ತಿಮ್ಮಯ್ಯ ಅವರ ಮಗನಾಗಿದ್ದು, ಗಾಂಧೀಜಿಯವರ ಅವರ ಅನುಯಾಯಿಯಾಗಿದ್ದವರು. ಕರ ನಿರಾಕರಣೆ, ಸೇಂದಿ ವನ ನಾಶದ ಕಾರಣದಿಂದ ಬ್ರಿಟೀಷರ ಬಂಧನಕ್ಕೆ ಒಳಗಾಗಿ ೨ ವರ್ಷಗಳ ಕಾಲ ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ ಸೆರೆಯಾಗಿದ್ದರು.

ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳ ಅಡಿಯಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ, ಅಸ್ಪೃಶ್ಯತಾ ನಿವಾರಣೆ, ಗೋಸಂರಕ್ಷಣೆ, ಹಿಂದಿ ಪ್ರಚಾರ, ಶುಚಿತ್ವ ಮತ್ತು ಆರೋಗ್ಯ, ಆರ್ಥಿಕ ಸಮಾನತೆ, ಹಿಂದು-ಮುಸ್ಲಿಂ ಐಕ್ಯತೆ, ಪಾನನಿರೋಧ, ಮೂಲಶಿಕ್ಷಣ, ಸ್ತ್ರೀಯರ ಏಳಿಗೆ ಇವು ಪ್ರಮುಖವಾದವು. ಜಿಲ್ಲೆಯ ಕಾಂಗ್ರೆಸ್ಸಿಗರಾದ ಕೆ.ರಂಗಯ್ಯಂಗಾರ್, ಮಾಲಿಮರಿಯಪ್ಪ, ಆರ್.ಚನ್ನಿಗರಾಮಯ್ಯ, ಸಿ.ಟಿ.ಹನುಮಂತಯ್ಯ, ನೀಲಕಂಠರಾವ್, ಟಿ.ತಾರೇಗೌಡ, ಕೆ.ವಿ. ಸುಬ್ರಮಣಿಸ್ವಾಮಿ ಮುಂತಾದವರು ಗಾಂಧೀಜಿ ಅವರ ರಚನಾತ್ಮಕ ಕಾರ್ಯಗಳಿಂದ ಪ್ರೇರಿತರಾಗಿದ್ದರು. ಇವರು ಜಿಲ್ಲೆಯಲ್ಲಿ ಖಾದಿ ಗ್ರಾಮೋದ್ಯೋಗ, ಪಾನ ನಿರೋಧ, ದಲಿತೋದ್ಧಾರ, ಹಿಂದು-ಮುಸ್ಲಿಂ ಐಕ್ಯತೆ, ಗೋ-ಸಂರಕ್ಷಣೆ ಹಿಂದಿ ಪ್ರಚಾರ ಇವುಗಳ ಯಶಸ್ಸಿಗೆ ಅವಿರತವಾಗಿ ಶ್ರಮಿಸಿದ್ದಾರೆ.

೧೯೨೭ರಲ್ಲಿ ಜುಲೈ ತಿಂಗಳಲ್ಲಿ ಗಾಂಧೀಜಿ ಅವರು ಖಾದಿ ಪ್ರಚಾರದ ನಿಮಿತ್ತವಾಗಿ ಮೈಸೂರು ಸಂಸ್ಥಾನದಾದ್ಯಂತ ಪ್ರವಾಸ ಕೈಗೊಂಡಿದ್ದರು. ಈ ವೇಳೆಯಲ್ಲಿ ಇವರು ಅಸ್ಪೃಶ್ಯತಾ ನಿವಾರಣೆಯ ಬಗ್ಗೆ ಪ್ರಚಾರ ಕೈಗೊಂಡರು. ಈ ಸಂದರ್ಭದಲ್ಲಿ "೧೯೨೭ ಜುಲೈ ೧೪ರಂದು ಕಸ್ತೂರಬಾ ಗಾಂಧಿ, ಗಂಗಾಧರ ರಾವ್ ದೇಶಪಾಂಡೆ, ಮಹದೇವ ದೇಸಾಯಿ, ಮಣಿಬಹನ ಪಾಟೀಲ್, ದೇವದಾಸ್‌ಗಾಂಧಿ, ಮೃದುಲಾಸಾರಾಬಾಯಿ ಅವರೊಂದಿಗೆ ತುಮಕೂರಿಗೆ ಭೇಟಿ ನೀಡಿದರು. ಅಂದು ಅಲ್ಲಿ ಸಾರ್ವಜನಿಕ ಸಭೆಯ ನಂತರ ಗಾಂಧೀಜಿ ತಳಸಮುದಾಯಗಳು ವಾಸಿಸುವ ಕೇರಿಗಳಿಗೆ ಭೇಟಿ ನೀಡಿ, ಅವರಿಗೆ ಸ್ವಚ್ಛತೆಯಿಂದ ಇರಬೇಕು, ಹೆಂಡ ಕುಡಿಯುವುದನ್ನು ನಿಲ್ಲಿಸಬೇಕು. ಗೋ ಮಾಂಸ ತಿನ್ನುವುದನ್ನು ಬಿಡಬೇಕು ಎಂದು ಭಾಷಣ ಮಾಡಿದರು."[೩೧] ಈಗಾಗಲೇ ತುಮಕೂರಿನಲ್ಲಿದ್ದ ಆದಿ ಕರ್ನಾಟಕ ವಸತಿ ಮತ್ತು ಔದ್ಯೋಗಿಕ ಶಿಕ್ಷಣ ಶಾಲೆಗೆ ಭೇಟಿ ನೀಡಿ ಅಲ್ಲಿನ ಅಡುಗೆ ಮನೆ, ಪಾಯಿಖಾನೆಗಳ ಸ್ವಚ್ಛತೆಯನ್ನು ಕೊಂಡಾಡಿದರು. ಅಲ್ಲಿ ತಯಾರಿಸಿದ ರಾಗಿಯ ರೊಟ್ಟಿಗಳನ್ನು ತರಿಸಿಕೊಂಡು ಅಂದು ಮಧ್ಯಾಹ್ನದ ಊಟದ ಸಮಯದಲ್ಲಿ ಅಂದಿನ ಸಭೆಯ ಸ್ವಾಗತ ತಿಳಿಸಿದರು. "ಮರುದಿನ ಬೆಳಗ್ಗಿನ ಉಪಹಾರವನ್ನು ಅಸ್ಪೃಶ್ಯ ಬಾಲಕನೊಬ್ಬನಿಂದ ಗಾಂಧೀಜಿ ಅವರಿಗೆ ಬಡಿಸಬೇಕೆಂದು ಸ್ಥಳೀಯ ವ್ಯವಸ್ಥಾಪಕರು ನಿರ್ಧರಿಸಿದರು. ಇದರಿಂದಾಗಿ ಹೆಚ್.ಎಂ.ಗಂಗಾಧರಯ್ಯ ಎಂಬ ತಳಸಮುದಾಯದ ಬಾಲಕ ಆದಿ ಕರ್ನಾಟಕ ಮತ್ತು ಔದ್ಯೋಗಿಕ ವಸತಿ ಶಾಲೆಯಲ್ಲಿ ತಯಾರಿಸಿದ ರಾಗಿ ರೊಟ್ಟಿ ಮತ್ತು ಹುಚ್ಚೆಳ್ಳು ಚಟ್ನಿಯನ್ನು ತಂದು ಗಾಂಧೀಜಿ, ಕಸ್ತೂರ ಬಾ, ದೇವದಾಸ್ ಗಾಂಧೀ ಅವರಿಗೆ ಉಪಹಾರವಾಗಿ ಬಡಿಸಿದರು."[೩೨]

ಈ ಸಂದರ್ಭದಲ್ಲಿ ಗಾಂಧೀಜಿ ಅವರು ತುಮಕೂರಿನಲ್ಲಿ ತಳಸಮುದಾಯಗಳು ವಾಸಿಸುವ ನರಸಿಂಹರಾಜ ಕಾಲೋನಿಗೆ ಭೇಟಿ ನೀಡಿದರು. ಅಲ್ಲಿನ ಜನತೆಗೆ ಗಾಂಧೀಜಿ ಅವರು ಬಾವಿ, ಕೆರೆ, ಶಾಲೆ, ದೇವಸ್ಥಾನಗಳಿಗೆ ಸಾರ್ವಜನಿಕ ಪ್ರವೇಶ ಪಡೆಯುವುದಕ್ಕೆ ಮೇಲು-ಕೀಳು, ಶ್ರೇಷ್ಠ-ನೀಚ, ಉತ್ತಮ-ಅಧಮ ಎಂಬ ಭೇದ ಭಾವವನ್ನು ತೊಡೆದು ಹಾಕಲು ಹೋರಾಟ ನಡೆಸಬೇಕು ಎಂದು ತಿಳಿಸಿದರು. ಅಲ್ಲದೆ ಉತ್ತಮ ಪೌಷ್ಟಿಕ ಆಹಾರ ಸೇವಿಸಬೇಕು, ಸ್ವಚ್ಛತೆಯಿಂದ ಇರಬೇಕು, ಪರಿಸರ ನೈರ್ಮಲ್ಯವನ್ನು ಕಾಪಾಡಿಕೊಳ್ಳಬೇಕು ಎಂದು ತಿಳಿಸಿದರು.

ಗಾಂಧೀಜಿ ಅವರು ತುಮಕೂರಿನ ಭೇಟಿಯ ನಂತರ "೧೯೨೭ರ ಜುಲೈ ೧೫ರಂದು ಜಿಲ್ಲೆಯ ಮಧುಗಿರಿ, ಕೊರಟಗೆರೆ, ತಿಪಟೂರು, ಕ್ಯಾತ್ಸಂದ್ರಗಳಿಗೆ ಭೇಟಿ ನೀಡಿದರು. ಆ

ಸಂದರ್ಭದಲ್ಲಿ ಮಧುಗಿರಿ ಜನತೆ ದರಿದ್ರ ನಾರಾಯಣ ನಿಧಿಗೆ ಒಂದು ಸಾವಿರ ರೂಪಾಯಿಗಳನ್ನು, ಕೊರಟಗೆರೆಯಲ್ಲಿ ಒಂದು ನೂರು ರೂಪಾಯಿಗಳನ್ನು ನಿಧಿಗೆ ಅರ್ಪಿಸಿದರು."[೩೩] "೧೯೩೨ರಲ್ಲಿ ಗಾಂಧೀಜಿ ಅವರು ತಳಸಮುದಾಯದವರ ಸಮಸ್ಯೆ ನಿವಾರಣೆಗಾಗಿ ಉಪವಾಸ ಕೈಗೊಂಡಾಗ ತುಮಕೂರು ಜಿಲ್ಲೆಯ ಕೊರಟಗೆರೆ ತಾಲ್ಲೂಕಿನ ಟಿ.ಆರ್. ಚನ್ನಿಗರಾಮಯ್ಯ ಅವರು ತಳಸಮುದಾಯಗಳ ದೇವಾಲಯ ಪ್ರವೇಶ, ಸಹಪಂಕ್ತಿ ಭೋಜನ, ಪಾನನಿರೋಧ ಆಂಧೋಲನಗಳನ್ನು ಪ್ರಾರಂಭಿಸಿದರು."[೩೪] ಇವರು ಜಿಲ್ಲೆಯಲ್ಲಿ ಅಲ್ಲದೆ ರಾಜ್ಯದಲ್ಲಿಯೂ ತಳಸಮುದಾಯಗಳ ಅಭಿವೃದ್ಧಿ ಕಾರ್ಯಗಳಲ್ಲಿ ತೊಡಗಿದರು. ಮೈಸೂರು ರಾಜ್ಯದ ಆದಿಜಾಂಬವ ಅಭಿವೃದ್ಧಿ ಸಂಘವನ್ನು ಸ್ಥಾಪಿಸಿದರು. ಅದರ ಕಾರ್ಯದರ್ಶಿ ಚಿಕ್ಕಹನುಮಂತಯ್ಯ ಅವರೊಡನೆ ರಾಜ್ಯದಲ್ಲಿ ತಳಸಮುದಾಯಗಳ ಸಂಘಟನೆಯನ್ನು ಮಾಡಿದರು. ತಳಸಮುದಾಯಗಳ ಸಂಖ್ಯೆಗೆ ಅನುಗುಣವಾಗಿ ಶಾಸನ ಸಭೆ, ಸ್ಥಳೀಯ ಸಂಸ್ಥೆಗಳಲ್ಲಿ ಪ್ರತ್ಯೇಕ ಪ್ರಾತಿನಿಧ್ಯವನ್ನು ಮೀಸಲಿಡುವುದಕ್ಕೆ ಹೋರಾಟವನ್ನು ಪ್ರಾರಂಭಿಸಿದರು.

ಗಾಂಧೀಜಿ ಅವರು ೧೯೩೪ ಜನವರಿ ೪ರಂದು ರಾಜ್ಯದಲ್ಲಿ ಪ್ರವಾಸ ಕೈಗೊಂಡು ತುಮಕೂರಿಗೆ ಭೇಟಿ ನೀಡಿದರು. ಅಂದು ತುಮಕೂರಿನ ಸರ್ಕಾರಿ ಪ್ರೌಢಶಾಲೆಯ ಮೈದಾನದಲ್ಲಿ ಸಾರ್ವಜನಿಕ ಸಭೆಯನ್ನು ಉದ್ದೇಶಿಸಿ, ಅಸ್ಪೃಶ್ಯತಾ ನಿವಾರಣೆಯ ಚಳವಳಿಯಲ್ಲಿ ತುಮಕೂರು ಜಿಲ್ಲೆಯ ಪ್ರತಿಯೊಬ್ಬ ನಾಗರಿಕರು ಭಾಗವಹಿಸಬೇಕೆಂದು ಪ್ರಾರ್ಥಿಸಿಕೊಂಡರು. ಈ ಸಂದರ್ಭದಲ್ಲಿ ಸಾರ್ವಜನಿಕರು ಹರಿಜನ ನಿಧಿಗಾಗಿ ಒಂದು ಸಾವಿರ ರೂಪಾಯಿಗಳನ್ನು ಅರ್ಪಿಸಿದರು. ೧೯೩೪ರಲ್ಲಿ ಗಾಂಧೀಜಿ ತುಮಕೂರಿಗೆ ಭೇಟಿ ನೀಡಿದಾಗ ಸಿ.ಟಿ. ಹನುಮಂತಯ್ಯ ನೆಲಗಡಲೆಯ ಹಾರ ಅರ್ಪಿಸಿದರು. ಇದರಿಂದ ಸಂತೋಷಗೊಂಡ ಗಾಂಧೀಜಿ ಇವರನ್ನು "ಮೈಸೂರಿನ ಹನುಮಾನ್ ಎಂದು ಕರೆದರು. ಅಲ್ಲದೆ ಬಡವರ ದಲಿತರ ಸೇವೆಯನ್ನು ಹನುಮಂತನಂತೆ ಮಾಡಬೇಕು ಎಂದು ಮೆಚ್ಚುಗೆ ವ್ಯಕ್ತಪಡಿಸಿದರು."[೩೫] ಇದರಿಂದ ಪ್ರೇರಿತರಾದ ಇವರು ಜಿಲ್ಲೆಯ ತಳಸಮುದಾಯಗಳ ಅಭಿವೃದ್ಧಿಗಾಗಿ ತಮ್ಮ ಜೀವನವನ್ನು ಮುಡಿಪಾಗಿಟ್ಟರು. ಇವರನ್ನು ತಳಸಮುದಾಯಕ್ಕೊಳಪಟ್ಟ ಕೋಡಿಹಳ್ಳಿ ಮಠದ ಸರ್ವಾಧಿಕಾರಿಯನ್ನಾಗಿ ನೇಮಿಸಲಾಯಿತು. ಆ ನಂತರ ತಳಸಮುದಾಯಗಳ ಹಿತರಕ್ಷಣೆಗಾಗಿ ಸಮ್ಮೇಳನಗಳನ್ನು ಸಂಘಟಿಸಿ, ಸಂಸ್ಥಾನದ ಕಾಂಗ್ರೆಸ್ ನಾಯಕರಾದ ಕೆ.ಸಿ.ರೆಡ್ಡಿ, ಹೆಚ್.ಸಿ.ದಾಸಪ್ಪ, ಹೆಚ್.ಸಿದ್ಧಯ್ಯ, ಮಾಲಿಮರಿಯಪ್ಪ, ಕೆ.ಹನುಮಂತಯ್ಯ ಅವರ ಸಹಕಾರವನ್ನು ಪಡೆಯುತ್ತಿದ್ದರು.

ಹೀಗೆ ವಸಾಹತುಶಾಹಿ ಕಾಲಘಟ್ಟದಲ್ಲಿ ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿ ಅವರ ಅಸ್ಪೃಶ್ಯತಾ ನಿವಾರಣಾ ಹೋರಾಟಗಳನ್ನು ಗಮನಿಸಬಹುದು. ಒಟ್ಟಾರೆಯಾಗಿ ಹೇಳುವುದಾದರೆ ತುಮಕೂರು ಜಿಲ್ಲೆಯು ಶಿಲಾಯುಗದಿಂದ ಪ್ರಸ್ತುತದವರೆಗೆ ವಿಶಿಷ್ಟವಾದ ಪ್ರಾಮುಖ್ಯತೆಯನ್ನು, ಚಾರಿತ್ರಿಕತೆಯನ್ನು ಹೊಂದಿದೆ.

## ೨.೧. ತಳಸಮುದಾಯ ಪದ ನಿಷ್ಪತ್ತಿ

ತಳಸಮುದಾಯ ಪದದ ಅರ್ಥವನ್ನು ಕುರಿತು ಇತಿಹಾಸಕಾರರು, ಚಿಂತಕರು ವಿಭಿನ್ನ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ.

ವಿಜಯ್ ಪೂಣಚ್ಚ ತಂಬಂಡ ಅವರು ತಮ್ಮ ಕೃತಿಯಾದ 'ಕೆಳವರ್ಗದ ಪ್ರತಿಭಟನೆ ಸಬಾಲ್ಟರ್ನ್ ಚರಿತ್ರೆ ಬರವಣಿಗೆ ಕ್ರಮ ಮತ್ತು ವಿಮರ್ಶೆ' ಎಂಬ ಕೃತಿಯಲ್ಲಿ ಸಬಾಲ್ಟರ್ನ್ ಪದದ ಅರ್ಥದ ಬಗ್ಗೆ ಆ್ಯಂಟೊನಿಯೊ ಗ್ರಾಂಸಿಯು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು ಕುರಿತು ಚರ್ಚಿಸಿದ್ದಾರೆ.

"ಸಬಾಲ್ಟರ್ನ್ ಎನ್ನುವ ಪದವು ಕೇವಲ ರೈತರ ಮತ್ತು ಭೂ ಒಡೆಯರ ನಡುವಿನ ವಿಚಾರವನ್ನು ಮಾತ್ರ ಅಭಿವ್ಯಕ್ತಗೊಳಿಸದೆ ನಿಯಂತ್ರಣದಲ್ಲಿರುವವರು ಮತ್ತು ನಿಯಂತ್ರಣಕ್ಕೊಳ ಪಡಿಸುವವರ ನಡುವಿನ ಸಂಬಂಧದ ಪ್ರಕ್ರಿಯೆಯನ್ನು ವಿವರಿಸುತ್ತದೆ"[೩೬] ಎಂದು ಗ್ರಾಂಸಿಯು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೧೯೦೧ರ ಜನಗಣತಿಯು ಅಸ್ಪೃಶ್ಯರ ಒಟ್ಟು ಜನಸಂಖ್ಯೆಯನ್ನು ಸರಿಯಾಗಿ ಇಷ್ಟೇ ಎಂದು ನಿಗದಿಗೊಳಿಸುವುದರಲ್ಲಿ ವಿಫಲವಾಯಿತು. ಇದಕ್ಕೆ ಎರಡು ಕಾರಣಗಳಿವೆ. ಮೊದಲನೆಯದಾಗಿ ಅಸ್ಪೃಶ್ಯನು ಯಾರೆಂದು ನಿರ್ಧರಿಸಲು ನಿಷ್ಕೃಷ್ಟ ಕಾರಣವಾದ ಪ್ರಮಾಣ ಗಳನ್ನು ಅನ್ವಯಿಸಲಿಲ್ಲ. ಎರಡನೆಯದಾಗಿ ನಿಜಕ್ಕೂ ಅಸ್ಪೃಶ್ಯರಾಗಿದ್ದವರೊಂದಿಗೆ ಅಸ್ಪೃಶ್ಯರಲ್ಲದ, ಆದರೆ ಆರ್ಥಿಕ ಮತ್ತು ಶೈಕ್ಷಣಿಕ ದೃಷ್ಟಿಯಿಂದ ಹಿಂದುಳಿದಿದ್ದವರನ್ನು ಒಂದು ಭಾಗವಾಗಿ ಬೆರೆಸಲಾಯಿತು.

೧೯೧೧ರ ಜನಗಣತಿಯು ಒಂದು ಹೆಜ್ಜೆ ಮುಂದೆ ಹೋಗಿ ಸ್ಪೃಶ್ಯರಿಂದ ಅಸ್ಪೃಶ್ಯರನ್ನು ಹೊರತುಪಡಿಸಿ ಗುರುತಿಸಲು ಬೇಕಾದ ಹತ್ತು ಸೂತ್ರಗಳನ್ನು ವಾಸ್ತವಿಕವಾಗಿ ನಿಬಂಧಗೊಳಿಸಿತು. ಈ ಪ್ರಮಾಣ ಸೂತ್ರಗಲ ಪ್ರಕಾರ ಜನಗಣತಿಯ ಮೇಲ್ವಿಚಾರಕರು ಜಾತಿಗಳ ಮತ್ತು ಬುಡಕಟ್ಟುಗಳ ನಮೂದನೆಯನ್ನು ಕೆಳಕಂಡಂತೆ ಮಾಡಿದರು.

"೧. ಬ್ರಾಹ್ಮಣರ ಶ್ರೇಷ್ಠತೆಯನ್ನು ನಿರಾಕರಿಸುವವರು

೨. ಬ್ರಾಹ್ಮಣ ಅಥವಾ ಇತರ ಹಿಂದೂ ಗುರುಗಳಿಂದ ಮಂತ್ರವನ್ನು ಸ್ವೀಕರಿಸದವರು

೩. ವೇದಗಳ ಪ್ರಾಮಾಣ್ಯವನ್ನು ನಿರಾಕರಿಸುವವರು

೪. ಪ್ರಮುಖ ಹಿಂದೂ ದೇವತೆಗಳನ್ನು ಪೂಜೆ ಮಾಡದವರು

೫. ಕಟ್ಟಾ ಬ್ರಾಹ್ಮಣರಿಂದ ಸೇವೆ ಪಡೆಯದಿದ್ದವರು

೬. ಬ್ರಾಹ್ಮಣ ಪೂಜಾರಿಗಳನ್ನೇ ಹೊಂದದಿದ್ದವರು

೭. ಆಮಾನ್ಯ ಹಿಂದೂ ದೇವಾಲಯದೊಳಕ್ಕೆ ಪ್ರವೇಶ ಇಲ್ಲದವರು

೮. ಮಾಲಿನ್ಯ ಉಂಟು ಮಾಡುವವರು

೯. ಸತ್ತವರನ್ನು ಹೂಳುವವರು

೧೦. ಗೋವನ್ನು ಪೂಜಿಸದವರು ಮತ್ತು ಗೋಮಾಂಸವನ್ನು ತಿನ್ನುವವರು"[೩೭]

೧೯೧೧ರ ಜನಗಣತಿಯು ಅಸ್ಪೃಶ್ಯರ ಸಂಖ್ಯೆನ್ನು ತಿಳಿಯುವುದರಲ್ಲಿ ಮೊತ್ತಮೊದಲ ಹೆಜ್ಜೆಯನ್ನಿಟ್ಟಿತು. "೧೯೨೧ ಮತ್ತು ೧೯೩೧ ಜನಗಣತಿಗಳಲ್ಲಿ ಇದೇ ದಿಕ್ಕಿನಲ್ಲಿ ಪ್ರಯತ್ನವನ್ನು ಮುಂದುವರೆಸಲಾಯಿತು. ಈ ಪ್ರಯತ್ನಗಳ ಫಲವಾಗಿ ೧೯೩೦ರಲ್ಲಿ ಭಾರತಕ್ಕೆ ಬಂದ ಸೈಮನ್ ಆಯೋಗವು ಸ್ವಲ್ಪಮಟ್ಟಿನ ನಿಖರತೆಯಿಂದ ಹೇಳಲು ಸಾಧ್ಯವಾದದ್ದೇನೆಂದರೆ ಬ್ರಿಟಿಷ್ ಆಳ್ವಿಕೆಯಲ್ಲಿದ್ದ ಭಾರತದಲ್ಲಿ ಅಸ್ಪೃಶ್ಯರ ಒಟ್ಟು ಸಂಖ್ಯೆ ೪ ಕೋಟಿ ೪೫ ಲಕ್ಷ ಎಂದು"[೩೮] ಈ ರೀತಿಯಾಗಿ ೧೯೧೧, ೧೯೨೧ ಮತ್ತು ೧೯೩೧ರ ಜನಗಣತಿಗಳು ಭಾರತದಲ್ಲಿನ ಅಸ್ಪೃಶ್ಯರ ಒಟ್ಟು ಸಂಖ್ಯೆಯನ್ನು ತಿಳಿಯುವಲ್ಲಿ ಸಹಾಯಕವಾದವು.

ಚಿದಾನಂದಮೂರ್ತಿ ಅವರು ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ ಕೃತಿಯಲ್ಲಿ ಚಂಡಾಲರ ಬಗ್ಗೆ ಉಲ್ಲೇಖ ಮಾಡಿದ್ದಾರೆ. ಯಜುರ್ವೇದದಲ್ಲಿ 'ಚಂಡಾಲ'ರ ಉಲ್ಲೇಖವಿದೆ. "ಛಾಮದೋಗ್ಯೋಪನಿಷತ್ತಿನಲ್ಲಿ 'ಚಂಡಾಲರ ಸಂತತಿಯು ನಾಯಿ ಹಂದಿಗಳಂತೆ ತುಚ್ಛವಾದುದು ಎಂದಿದೆ."[೩೯] ಅಂದರೆ ಇವರು ತೀರ ನಿಕೃಷ್ಟರಾದ ಜನ ಎಂದರ್ಥ.

"ಭಾರತಕ್ಕೆ ಹೊರಗಿನಿಂದ ಬಂದ ವಿದೇಶಿಯರು ದಮನ ಮಾಡಿದ ದೇಶೀಯ ಜನರೇ ಈಗಿನ ಅಸ್ಪೃಶ್ಯರೆಂದೂ, ಅವರನ್ನು ಗೆದ್ದವರು ತಮ್ಮ ಕಾವಲುಗಾರರನ್ನಾಗಿ ಮಾಡಿಕೊಂಡುದರ ಪರಿಣಾಮವೇ ಅಸ್ಪೃಶ್ಯತೆಗೆ ಕಾರಣವೆಂದು ಡಾ. ಅಂಬೇಡ್ಕರ್ ಅವರು

ಅಭಿಪ್ರಾಯಪಡುತ್ತಾರೆ. ಕಾವಲುಗಾರರಾಗಿ ಅವರು ಊರ ಹೊರಗೆ ಇರಬೇಕಾಯ್ತು. ಆ ಕಾರಣದಿಂದಾಗಿ ಅವರನ್ನು 'ಅಂತ್ಯಜ'(ಊರ ಹೊರಗಿನವರು) ಎಂದು ಕರೆದರು"[೪೦] ಎಂದು ಅವರು ವಾದಿಸುತ್ತಾರೆ.

ಚಿದಾನಂದಮೂರ್ತಿ ಅವರು 'ಅಂತ್ಯಜ' ಪದದ ಅರ್ಥದ ಬಗ್ಗೆ ಈ ಕೆಳಗಿನಂತೆ ಚರ್ಚಿಸಿದ್ದಾರೆ. ಅವರ ಪ್ರಕಾರ 'ಅಂತ್ಯಜ' ಎಂದರೆ ಕೊನೆಯಲ್ಲಿ ಹುಟ್ಟಿದವನು ಅಥವಾ ಕಾಣಿಸಿಕೊಂಡವನು ಎಂದರ್ಥ. ಅದು ಚತುರ್ವರ್ಣಗಳ ಹೊರಗೆ, ಕೊನೆಯಲ್ಲಿ ಇರುವ ಗುಂಪನ್ನು ಹೇಳುವುದೇ ಹೊರತು ಊರ ಹೊರಗಿರುವುದನ್ನು ಹೇಳುವುದಿಲ್ಲ. ಬಹುಪಾಲು ಅಸ್ಪೃಶ್ಯರು ಭಾರತ ದೇಶದ ಮೂಲ ನಿವಾಸಿಗಳೆಂಬುದಕ್ಕೆ ಬಹಳ ಜನ ಸಮಾಜ ವಿಜ್ಞಾನಿಗಳ ಒಪ್ಪಿಗೆಯಿದೆ. ಹೊರಗಿನಿಂದ ಬಂದ ಆರ್ಯರು ಈ ಕಾಡು ಜನರಂತಿದ್ದ ಮೂಲನಿವಾಸಿಗಳನ್ನು ತಿರಸ್ಕಾರದಿಂದ ಕಂಡಿರಬೇಕು; ಅವರನ್ನು ದೂರವಿಟ್ಟದ್ದು ಮಾತ್ರವಲ್ಲದೆ ಅವರನ್ನು ಮುಟ್ಟುವುದು, ನುಡಿಸುವುದು, ಅವರ ಜೊತೆ ಯಾವುದೇ ಸಂಪರ್ಕವನ್ನಿರಿಸಿಕೊಳ್ಳುವುದು ಮೈಲಿಗೆ ಉಂಟು ಮಾಡುತ್ತದೆ ಎಂದು ಭಾವಿಸಿರಬೇಕು. ಇದು ಬಹುಶಃ ಅಸ್ಪೃಶ್ಯತೆಗೆ ಕಾರಣವಿರಬೇಕು"[೪೧] ಎಂದಿದ್ದಾರೆ.

ಆರ್.ಎಸ್.ಶರ್ಮ ಅವರು 'ಪ್ರಾಚೀನ ಭಾರತದಲ್ಲಿ ಶೂದ್ರರು' ಕೃತಿಯಲ್ಲಿ ತಳಸಮುದಾಯಗಳನ್ನು ಕುರಿತು ಈ ಕೆಳಗಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಬೌದ್ಧ ಗ್ರಂಥಗಳು ಹೇಳುವ ಅನೇಕ ಹೀನ ಜಾತಿಗಳು ಬ್ರಾಹ್ಮಣ್ಯದಲ್ಲಿ ಹೇಳಿದ ಅಸ್ಪೃಶ್ಯರಿಗೆ ಸಂವಾದಿ, ಸ್ವಂತ ನುಡಿ ಹೊಂದಿದ್ದ ಚಾಂಡಲರು ಮೂಲತಃ ಒಂದು ಬುಡಕಟ್ಟು ಇರಬೇಕು. ಪ್ರಾಯಶಃ ಪಶು, ಪಕ್ಷಿಗಳ ಬೇಟೆಯಾಡುತ್ತಿದ್ದ ಚಂಡಾಲರನ್ನು ಪಶುಗಳ, ಮನುಷ್ಯರ ಹೆಣ ಒಪ್ಪ ಮಾಡಲು ಕರೆಯುತ್ತಿದ್ದರು. ಈ ಕೆಲಸ ಮಾಡುವ 'ಪಣ'ರನ್ನೂ ಚಂಡಾಲರೆಂದು ಕರೆಯುತ್ತಿದ್ದರು"[೪೨] ಎಂದಿದ್ದಾರೆ.

### ದಲಿತ

ಕರ್ನಾಟಕದಲ್ಲಿ ದಲಿತ ಪದ ಬಳಕೆಗೆ ಬರಲು ಮಹಾರಾಷ್ಟ್ರದ ದಲಿತ ಚಳುವಳಿ ಕಾರಣ. "ಬುದ್ದಣ್ಣ ಹಿಂಗಮಿರೆ ೧೯೭೩ರಲ್ಲಿ 'ದಲಿತ ಪತ್ರಿಕೆ' ಆರಂಭಿಸಿದರು. ಮುಂದೆ ೧೯೭೬ರಲ್ಲಿ ಬಿ.ಕೃಷ್ಣಪ್ಪ ಅವರ ನೇತೃತ್ವದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಹುಟ್ಟಿತು. ಮಹಾರಾಷ್ಟ್ರದಲ್ಲಿ ದಲಿತ ಪದಕ್ಕೆ ಬದಲಾಗಿ ಬೌದ್ಧ ಶಬ್ದವನ್ನು ಬಳಸಲು ಪ್ರಯತ್ನ ನಡೆಯಿತು"[೪೩]

"ಕನ್ನಡ ನಿಘಂಟುವಿನಲ್ಲಿ 'ದಲಿತ' ಎಂದರೆ ಒಡೆಯಲ್ಪಟ್ಟ, ಸೀಳಲ್ಪಟ್ಟ, ತುಂಡು ಮಾಡಲ್ಪಟ್ಟ, ನಾಶ ಮಾಡಲ್ಪಟ್ಟ, ಪುಡಿ ಮಾಡಲ್ಪಟ್ಟ, ಅರೆಯಲ್ಪಟ್ಟ, ಅರಳಿಸಲ್ಪಟ್ಟ ಎಂಬರ್ಥಗಳನ್ನು ಕೊಡಲಾಗಿದೆ."[೪೪]

ಚಿನ್ನಸ್ವಾಮಿ ಸೋಸಲೆ ಅವರು 'ದಲಿತ' ಎನ್ನುವ ಪದದ ಅರ್ಥವನ್ನು ಕುರಿತು ಈ ರೀತಿ ಚರ್ಚಿಸಿದ್ದಾರೆ. "ಈ ಮೂರು ಅಕ್ಷರ ಹೆಚ್ಚಾಗಿ ಅಸ್ಪೃಶ್ಯರಾಗಿರುವ ಹೊಲೆಯ ಹಾಗೂ ಮಾದಿಗ ಜನಾಂಗದ ಕುರಿತು ಬಳಸುವ ಪದವಾಗಿದ್ದರೂ ಸಹ ಇದರ ವಿವರಣೆ ಇದಕ್ಕೆ ಹೊರತಾದ್ದಾಗಿದೆ. ತಳಸಮುದಾಯಗಳಿಗೆ ದಲಿತ ಎಂಬ ಪದ ಬಳಸುವ ಬದಲು 'ಅಸ್ಪೃಶ್ಯ' ಎಂಬ ಪದವನ್ನೇ ಬಳಸಿದರೆ ಹೆಚ್ಚು ಅರ್ಥಪೂರ್ಣವಾಗಿರುತ್ತದೆ"[೪೫] ಎಂದಿದ್ದಾರೆ.

ಹೀಗೆ ತಳಸಮುದಾಯಗಳನ್ನು ಚಂಡಾಲ, ಅಂತ್ಯಜ, ಪಂಚಮ ಎಂದು ಕರೆದಿದ್ದಾರೆ. ಗಾಂಧೀಜಿ ಅವರು ಹರಿಜನ ಎಂದು ಕರೆದರೆ ಅಂಬೇಡ್ಕರ್ ಅವರು ನಿಮ್ನವರ್ಗ ಎಂದು ಕರೆದಿದ್ದಾರೆ.

ಮೇಲ್ಕಂಡ ಎಲ್ಲಾ ಹೇಳಿಕೆಗಳನ್ನು ಗಮನದಲ್ಲಿಟ್ಟುಕೊಂಡು ಒಟ್ಟಾರೆಯಾಗಿ ಹೇಳುವುದಾದರೆ ಸಾಮಾಜಿಕವಾಗಿ, ಆರ್ಥಿಕವಾಗಿ ಮತ್ತು ರಾಜಕೀಯವಾಗಿ ತಳಸ್ತರದಲ್ಲಿರುವವರೆಲ್ಲರೂ ತಳಸಮುದಾಯಗಳು ಎನ್ನಬಹುದಾಗಿದೆ.

ದಲಿತ ಎಂಬ ಪದವನ್ನು ಇತ್ತೀಚೆಗೆ ವಿಶಾಲಾರ್ಥದಲ್ಲಿ ಬಳಸುತ್ತಿದ್ದಾರೆ. ಶೋಷಣೆಗೆ ಒಳಗಾದವರೆಲ್ಲರೂ ದಲಿತರೇ ಎಂಬ ಅರ್ಥದಲ್ಲಿ ಬಳಸುತ್ತಿದ್ದರೆ. ಸಾಮಾಜಿಕವಾಗಿ ಶೋಷಣೆಗೆ ಒಳಗಾದವರನ್ನು ಮಾತ್ರ ದಲಿತ ಎಂದು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ. ದಲಿತ, ಅಂತ್ಯಜ, ಚಂಡಾಲ, ಪಂಚಮ, ಹರಿಜನ, ಅಸ್ಪೃಶ್ಯ ಹಾಗೂ ನಿಮ್ನ ವರ್ಗಗಳು ಮೊದಲಾದ ಪದಗಳನ್ನು ಸಾಮಾಜಿಕವಾಗಿ ತಳಸ್ತರದಲ್ಲಿರುವ ಅಥವಾ ಕೆಳಸ್ತರದಲ್ಲಿರುವ ಸಮುದಾಯಗಳಿಗೆ ಸಂವಾದಿಯಾಗಿ ಪ್ರಸ್ತುತ ಅಧ್ಯಯನದಲ್ಲಿ ಬಳಸಲಾಗಿದೆ. ಅಧ್ಯಯನದಲ್ಲಿ ತಳಸಮುದಾಯಗಳ ಜೊತೆಗೆ ಬುಡಕಟ್ಟು ಸಮುದಾಯಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ.

### ೨.೨. ಜನಪದ ಕಾವ್ಯಗಳು

ತಳಸಮುದಾಯಗಳಿಗೆ ಲಿಖಿತ ಚರಿತ್ರೆಗಳಿಲ್ಲ ಎನ್ನುವ ಹಿನ್ನೆಲೆಯಲ್ಲಿ ಅವರ ಚರಿತ್ರೆಯನ ಮತ್ತು ಆ ಮೂಲಕ ಕರ್ನಾಟಕದ ಚರಿತ್ರೆಯನ್ನು ವಿವರಿಸಬೇಕಾದರೆ ಮೌಖಿಕ ಆಕರಗಳು ಬಹಳ ಪ್ರಧಾನವಾದ ಪಾತ್ರವನ್ನು ವಹಿಸುತ್ತವೆ. ಜನಪದ ಕಾವ್ಯಗಳು ನೀಡುವ ಆಕರಗಳ

ಮೂಲಕ ತಳಸಮುದಾಯಗಳ ನಂಬಿಕೆ, ಆಚರಣೆಗಳ ಇನ್ನೊಂದು ಮಗ್ಗುಲನ್ನು ನೋಡುವ ಉದ್ದೇಶವನ್ನು ಪ್ರಸ್ತುತ ಅಧ್ಯಾಯ ಹೊಂದಿದೆ. ಎಲ್ಲ ಜನಪದ ಕಾವ್ಯಗಳು ಬಹಳ ಮುಖ್ಯವಾಗಿ ಜನಪದ ನಾಯಕರ ಅಥವಾ ಸಾಂಸ್ಕೃತಿಕ ವೀರರ ಬಗ್ಗೆ ಮಾಹಿತಿಗಳನ್ನು ನೀಡುತ್ತವೆ. ಇದರ ಅರ್ಥ ಯಾರೋ ಒಬ್ಬ ಅಥವಾ ಒಬ್ಬಳು 'ಜನಪದ ನಾಯಕ' ಕೇಂದ್ರಿತ ಚರಿತ್ರೆಯನ್ನು ಬರೆಯುವುದು ಎಂದರ್ಥವಲ್ಲ. ಬದಲಿಗೆ ಆ ಕಾವ್ಯಗಳ ಮೂಲಕ ಸಿಗುವ ಮಾಹಿತಿಗಳಿಂದ ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಮೂಲೆಗೊತ್ತಲ್ಪಟ್ಟಿರುವ ಭಿನ್ನ ಭಿನ್ನ ಸಮುದಾಯಗಳ ಸಮಾಜದ ಚರಿತ್ರೆಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ಮಾಡಬಹುದಾಗಿದೆ. ಕನ್ನಡ ಭಾಷೆಯ ಸಂದರ್ಭದಲ್ಲಿ ಈ ರೀತಿಯ ಅಧ್ಯಯನವನ್ನು ಕೈಗೊಂಡ ಆರಂಭಿಕರಲ್ಲಿ ಜೀ.ಶಂ.ಪರಮಶಿವಯ್ಯ ಅವರು ಮುಖ್ಯರು. ೧೯೭೯ರಲ್ಲಿ ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು ಎಂಬ ಅವರ ಕೃತಿಯ ನಂತರ ಇಪ್ಪತ್ತೊಂದನೇ ಶತಮಾನದ ಆರಂಭದವರೆಗೆ ಜನಪದ ಕಾವ್ಯಗಳ ಅಧ್ಯಯನ ಮಾದರಿಗಳ ಮಹಾಪೂರವೇ ಹರಿದು ಬಂದಿದೆ"[೪೬] ಬಹುಪಾಲು ಹೆಚ್ಚಿನ ಅಧ್ಯಯನಗಳೆಲ್ಲವೂ ಈಗಾಗಲೇ ಪ್ರಚಲಿತದಲ್ಲಿರುವ ಶಿಷ್ಟ ಸಾಹಿತ್ಯದಿಂದ ರೂಪಿತವಾಗಿರುವ ಚರಿತ್ರೆಗೆ ಸಮನಾಂತರವಾಗಿಯೇ ಹೊರಬಂದಿವೆ ಎಂಬ ರೀತಿಯಲ್ಲಿರುವುದನ್ನು ಗಮನಿಸಬಹುದಾಗಿದೆ.

**ಜುಂಜಪ್ಪನ ಸಂಪ್ರದಾಯ**

ದಕ್ಷಿಣ ಕರ್ನಾಟಕದಲ್ಲಿ ಜನಪದ ಸಂಸ್ಕೃತಿಯನ್ನು ದಟ್ಟವಾಗಿ ಉಳಿಸಿಕೊಂಡು ಬಂದ ಬುಡಕಟ್ಟುಗಳಲ್ಲಿ ಕಾಡುಗೊಲ್ಲರು ಪ್ರಮುಖರಾಗಿದ್ದಾರೆ. ಚಿತ್ರದುರ್ಗ, ತುಮಕೂರು, ಬೆಂಗಳೂರು, ಕೋಲಾರ ಜಿಲ್ಲೆಗಳಲ್ಲಿ ಕಾಡುಗೊಲ್ಲರು ಹೆಚ್ಚಾಗಿ ಕಂಡುಬರುತ್ತಾರೆ. ಚಿತ್ರದುರ್ಗ, ತುಮಕೂರು ಜಿಲ್ಲೆಗಳಲ್ಲಿ ಇವರ ಸಂಸ್ಕೃತಿಯ ಕೇಂದ್ರಗಳಿವೆ. ದಕ್ಷಿಣ ಕರ್ನಾಟಕದ ಒಂದು ತುದಿಯಲ್ಲಿ ಮಾದೇಶ್ವರ, ಮಂಟೇಸ್ವಾಮಿ ಕಾವ್ಯಗಳು ಹುಟ್ಟಿಕೊಂಡಿವೆ, ಮಧ್ಯ ಕರ್ನಾಟಕದ ಪೂರ್ವ ಭಾಗದ ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಅತಿದಟ್ಟವಾಗಿರುವ ಕಾಡುಗೊಲ್ಲರ ಸಮೂಹದಿಂದ ಹುಟ್ಟಿಕೊಂಡ ಸಾಂಸ್ಕೃತಿಕ ವೀರರನ್ನು ಕುರಿತ ಕಾವ್ಯಗಳು ಅತ್ಯಂತ ವಿಶಿಷ್ಟವೂ, ಬೇರೆಲ್ಲ ಜನಪದ ಮಹಾಕಾವ್ಯದ ನಾಯಕರಿಗಿಂತ ಭಿನ್ನವಾಗಿದ್ದು, ಹೊಸ ಬಗೆಯ ಲೋಕವನ್ನು ತೆರೆಯುತ್ತದೆ.

"ಕಾಡುಗೊಲ್ಲರ ಜನಪದ ಕಾವ್ಯವು ಕನ್ನಡದ ಇತರ ಜನಪದ ಕಾವ್ಯಗಳಿಗಿಂತ ಕೆಲವು ಅಂಶಗಳಲ್ಲಿ ಭಿನ್ನವೂ, ವೈಶಿಷ್ಟ್ಯಪೂರ್ಣವೂ ಆಗಿದೆ. ತಮ್ಮನ್ನು ಇತರೆ ಜನಸಮುದಾಯದಿಂದ ಪ್ರತ್ಯೇಕಿಸಿಕೊಂಡ ಸಮುದಾಯವೊಂದರ ಸಾಂಸ್ಕೃತಿಕ ಸ್ವರೂಪವನ್ನು ಈ ಕಾವ್ಯಗಳು ತಿಳಿಯ

ಪಡಿಸುತ್ತವೆ"[೪೭] ಎನ್ನುವ ಕಾಳೇಗೌಡ ನಾಗವಾರ ಅವರ ಅನಿಸಿಕೆ ಸರಿಯಾಗಿಯೇ ಇದೆ. ತುಮಕೂರು ಜಿಲ್ಲೆಯಲ್ಲಿ ಜುಂಜಪ್ಪನ ಆರಾಧನೆ ಹೆಚ್ಚು. ಜುಂಜಪ್ಪ ಸಮಾಧಿ ಇರುವ ಕಳುವೋರ ಹಳ್ಳಿಯೂ ಸೇರಿದಂತೆ ಬೇವಿನಹಳ್ಳಿ, ಹಾಗಲವಾಡಿಗಳು ಈ ಭಾಗದ ಸಾಂಸ್ಕೃತಿಕ ಕೇಂದ್ರಗಳು. ಜುಂಜಪ್ಪ ನಡೆದಾಡಿದ, ಪವಾಡ ಮೆರೆದ ಅನೇಕ ಸ್ಥಳಗಳು ಇದೇ ಜಿಲ್ಲೆಯಲ್ಲೇ ಇವೆ. ಕಳೆದ ಶತಮಾನದ ಪಶುಪಾಲನೆಯನ್ನು ಕಣ್ಣಾರೆ ಕಂಡು ವರ್ಣಿಸುವ ಬುಕನನ್‌ನ ವಿವರಗಳಿಗೆ ಜುಂಜಪ್ಪನ ಕಾವ್ಯ ಅನೇಕ ವಿಚಾರಗಳಲ್ಲಿ ಸಮೀಪದ ಹೋಲಿಕೆ ಹೊಂದಿರುವುದನ್ನು ಗುರುತಿಸಬಹುದಾಗಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಜುಂಜಪ್ಪನ ಕಥೆಕಾವ್ಯದ ಸಾರಾಂಶವನ್ನು ಕುರಿತು ವಕ್ತೃಗಳು ಈ ಕೆಳಗಿನಂತೆ ಮಾಹಿತಿ ನೀಡಿದ್ದಾರೆ. "ಕೆಂಗರು ಮಲ್ಲೇಗೌಡ ಹಾಗೂ ಸಿನ್ನಮ್ಮ ದಂಪತಿಗಳು ಮಕ್ಕಳಿಲ್ಲದ ಕೊರಗಿನಲ್ಲಿರುತ್ತಾರೆ. ಮಲ್ಲೇಗೌಡನು ಕಾಡುಗೊಲ್ಲನಾಗಿ ಹುಟ್ಟಿದರೂ ಕೃಷಿಕನೊಬ್ಬನ ಮನೆಯಲ್ಲಿ ಬೆಳೆದಿದ್ದನು. ಮದುವೆಯಾಗಿದ್ದರೂ ಒಂದು ದಿನವೂ ಈತನು ಹೆಂಡತಿಯೊಂದಿಗೆ ಸಂಸಾರ ಮಾಡದಿದ್ದರಿಂದ ಅವಳು ಬಂಜೆ ಎಂದು ಎಲ್ಲರ ಹೀಯಾಳಿಕೆಗೆ ಗುರಿಯಾಗಿದ್ದಳು. ಆ ದುಃಖದಿಂದ ಶಿವನನ್ನು ಪ್ರಾರ್ಥಿಸಿ, ಅವನ ಅನುಗ್ರಹದಿಂದ ಮಕ್ಕಳ ವರವನ್ನು ಪಡೆಯುತ್ತಾಳೆ. ಅವಳ ಮೊದಲನೆಯ ಮಗನೇ ಜುಂಜಪ್ಪ; ತಾಯಿಯ ಬಲಹೆಗಲನಿಂದ ಹುಟ್ಟಿದಾಕ್ಷಣವೇ ಇವನಿಗೆ ೧೦೧ ಹೆಸರುಗಳು ಮತ್ತು ಆಯುಧಗಳು ಲಭ್ಯವಾಗುತ್ತವೆ. ಬಾಲ್ಯದಿಂದಲೇ ಅಸಾಧಾರಣ ವ್ಯಕ್ತಿಯಾಗಿ ಆತ ಬೆಳೆಯತೊಡಗಿದನು. ಅವನ ಸೋದರ ಮಾವಂದಿರು ಕಾಡಿನಲ್ಲಿ ಎಸೆದಿದ್ದ ಹೋರಿಯೊಂದನ್ನು ಬಡವ್ವೆಲ ಎಂದು ಕರೆದು ಅತ್ಯಂತ ಪ್ರೀತಿಯಿಂದ ಸಾಕಿಕೊಂಡಿದ್ದನು. ಮುಂದೆ ಅದು ಯಾರು ಬಗ್ಗಿಸಲು ಸಾಧ್ಯವಾಗದ ಗೂಳಿಯಾಗುತ್ತದೆ. ಜಂಜಪ್ಪನ ಏಳಿಗೆಯನ್ನು ಸಹಿಸಲಾರದ ಅವನ ಸೋದರ ಮಾವಂದಿರು ಹೇಗಾದರೂ ಅವನನ್ನು ನಾಶ ಮಾಡಬೇಕೆಂದು ಪಿತೂರಿ ಮಾಡುತ್ತಾರೆ. ಚೇಳೂರು ದೊರೆಗಳೊಡನೆ ಸೇರಿಕೊಂಡು ಜುಂಜಪ್ಪನ ಪ್ರೀತಿಯ ಬಡವ್ವೇಲನನ್ನು ಅವರು ಸಾಯಿಸುತ್ತಾರೆ. ಆದರೆ ಜುಂಜಪ್ಪ ತನ್ನ ಮಾಯಾಶಕ್ತಿಯಿಂದ ಅದಕ್ಕೆ ಮತ್ತೆ ಜೀವಕೊಟ್ಟು, ಚೇಳೂರು ದೊರೆಗಳನ್ನು ಕವಡೆಯಾಟದಲ್ಲಿ ಸೋಲಿಸುತ್ತಾನೆ. ವಾಮಮಾರ್ಗಗಳಿಂದ ಜುಂಜಪ್ಪನನ್ನು ಸಾಯಿಸುವ ಅವನ ಮಾವಂದಿರ ಕುತಂತ್ರಗಳೆಲ್ಲವೂ ಆ ನಂತರ ವಿಫಲ ವಾಗುತ್ತವೆ. ಕೊನೆಗೆ ಜುಂಜಪ್ಪ ತನ್ನ ಏಳು ಜನ ಮಾವಂದಿರನ್ನು ತುಂಡರಿಸಿ, ಅವರ ಹೊಲ–ಮನೆಗಳಿಗೆ ಬೆಂಕಿ ಹಚ್ಚುತ್ತಾನೆ. ಆನಂತರ ತನ್ನ ಹದಿನಾರನೆಯ ವಯಸ್ಸಿನಲ್ಲಿ ಹುಟ್ಟುವಾಗಲೇ ದೈವವಾಣಿಯಾಗಿದ್ದಂತೆ ಜೀವಂತ ಸಮಾಧಿಯಾಗುತ್ತಾನೆ."[೪೮]

ಜುಂಜಪ್ಪನ ಹುಟ್ಟಿಗೆ ಮುಂಚಿನ ಎರಡು ತಲೆಮಾರುಗಳ ಕಥೆ ಯಾವ ಅಸಹಜ ಘಟನೆಗಳಿಲ್ಲದೆ ಅತ್ಯಂತ ಸಹಜವಾಗಿ ಚಿತ್ರಿತವಾಗಿದೆ. ಆದರೆ ಜುಂಜಪ್ಪನ ತಲೆಮಾರಿನ ಇಡೀ ಘಟನೆಗಳ ಚಿತ್ರಣದಲ್ಲಿ ಪುರಾಣ ತನ್ನ ದಟ್ಟ ಪ್ರಭಾವವನ್ನು ಬೀರಿ ಜುಂಜಪ್ಪನನ್ನು ಒಬ್ಬ ಸಾಮರ್ಥ್ಯಶಾಲಿಯನ್ನಾಗಿ ಮಾಡಿದೆ. ಜುಂಜಪ್ಪನ ಕಥಾಭಾಗವನ್ನು ಪುರಾಣ ತನ್ನ ಪ್ರಭಾವದ ಕಕ್ಷೆಗೆ ತೆಗೆದುಕೊಂಡಿದ್ದು, ಆ ಜನಾಂಗದ ಆಶಯಗಳಿಗೆ ಅನುಗುಣವಾಗಿ ಜುಂಜಪ್ಪನ ವ್ಯಕ್ತಿತ್ವ ರೂಪುಗೊಂಡಿದೆ. ಒಂದು ಸಮುದಾಯದ ಮನಸ್ಸು ಹೇಗೆ ಚಿಂತಿಸುತ್ತದೆ? ಹೇಗೆ ಪುರಾಣವನ್ನು ರೂಪಿಸುತ್ತದೆ ಎಂಬುದಕ್ಕೆ ಜುಂಜಪ್ಪನ ಕಥೆ ಉತ್ತಮ ಉದಾಹರಣೆಯಾಗಿದೆ. ಆದ್ದರಿಂದಾಗಿ ಜುಂಜಪ್ಪ ವೀರಭದ್ರನ ಅವತಾರ, ಅವನ ಹುಟ್ಟು ಕೂಡ ಅಸಾಮಾನ್ಯವೇ ಆಗಬೇಕಾಗಿರುವುದರಿಂದ ತಾಯಿ ಬೆನ್ನಲ್ಲಿ ಮೂಡುತ್ತಾನೆ. ಜುಂಜಪ್ಪನನ್ನು ಅಲೌಕಿಕತೆಯಿಂದ ಹೊರತುಪಡಿಸಿ ನೋಡಲು ಸಾಧ್ಯವೇ ಇಲ್ಲದ ರೀತಿಯಲ್ಲಿ ಅವನನ್ನು ಪವಾಡ, ಮಹಿಮೆಗಳು ಸುತ್ತುವರೆದಿವೆ. ಇಂಥವನಿಗೆ ಸರಿಯಾದ ಜೋಡಿಯೆಂದರೆ ಬಡಮ್ಮೈಲ, ಪುರಾಣ ಅದನ್ನೂ ಶಿವನ ಮಹಾನಂದಿಯಂತೆಯೂ ಮಾತನಾಡುವ ಕಾಲಜ್ಞಾನದ ಎತ್ತಾಗಿಯೂ, ಸಾಹಸಶಾಲಿಯಾಗಿಯೂ ಚಿತ್ರಿಸಿದೆ.

ತೀ.ನಂ.ಶಂಕರನಾರಾಯಣ ಅವರ 'ಜುಂಜಪ್ಪನ ಪುರಾಣ ಶೈವ ಮತ್ತು ವೈಷ್ಣವ ಸಂಪ್ರದಾಯಗಳಿಂದ ಹುಟ್ಟಿದ ಮಿಶ್ರಪುರಾಣವಾಗಿದೆ' ಎಂಬ ಅಭಿಪ್ರಾಯವನ್ನು ಭಾಗಶಃ ಒಪ್ಪಬಹುದಾಗಿದೆ. ಜುಂಜಪ್ಪನನ್ನು ವೀರಭದ್ರನ ಅವತಾರವೆಂಬಂತೆ ಚಿತ್ರಿಸಿರುವುದರಿಂದ ಶೈವ ಸಂಪ್ರದಾಯದ ಪ್ರಭಾವ ಎದ್ದು ಕಾಣುತ್ತದೆ. "ಉತ್ತರ ಸಂಪ್ರದಾಯದ ಜುಂಜಪ್ಪನ ಕತೆಯಲ್ಲಿ ಒಂದು ಪ್ರಕರಣದಲ್ಲಿ ಶ್ರೀ ವೈಷ್ಣವರ ತಿರುಮಲೆ ತಾತಾಚಾರಿ ಜುಂಜಪ್ಪನಿಗೆ ಆಶೀರ್ವಾದ ಮಾಡಿದ್ದಕ್ಕೆ ಆತನ ಕೈಯೇ ಸುಟ್ಟು ಹೋಗುತ್ತದೆ. ಆಗ ಜುಂಜಪ್ಪ ನೀನು ನನಗೆ ಕುಲಗುರುವೇ ಹೊರತು, ನನಗೆ ಗುರುವಲ್ಲ ಎನ್ನುತ್ತಾರೆ. ಆಗ ತಾತಾಚಾರಿ ನಡೆತಪ್ಪು ನುಡಿತಪ್ಪು ಸರ್ವಥಾ ತಪ್ಪು ಜುಂಜಪ್ಪ" ಎಂದು ಕ್ಷಮೆ ಕೇಳಿದ್ದರಿಂದ ಕೈ ಸರಿ ಹೋಯಿತಂತೆ"[೪೯] ಮೇಲ್ಕಂಡ ಹೇಳಿಕೆಯನ್ನು ಗಮನಿಸಿದಾಗ ಜುಂಜಪ್ಪ ವೈಷ್ಣವ ವಿರೋಧಿಯಾಗಿ ಕಾಣುತ್ತಾನೆ. ವಿಪರ್ಯಾಸವೆಂದರೆ ಆಚರಣೆಯಲ್ಲಿ ಜನ ಜುಂಜಪ್ಪನನ್ನು ವೈಷ್ಣವೀಕರಣಗೊಳಿಸಿದ್ದಾರೆ. ಜುಂಜಪ್ಪನ ಸಮಾಧಿಗೆ ಮೂರು ನಾಮಗಳನ್ನು ಇಟ್ಟು, ದಾಸಯ್ಯಗಳು ಶಂಕ ಊದುತ್ತಾ, ಜಾಗಟೆ ಬಾರಿಸುವುದನ್ನು ಇಂದಿಗೂ ನೋಡಬಹುದು. ಹೀಗಾಗಿ ಕಾಡುಗೊಲ್ಲರಲ್ಲಿ ಶೈವ–ವೈಷ್ಣವಗಳ ಸಂಗಮವನ್ನು ಕಾಣಬಹುದಾಗಿದೆ.

ಹಾವು–ಚೇಳುಗಳ ಭಯಕ್ಕೆ ಹರಕೆ ಮಾಡಿ ಎಣ್ಣೆಯ ಗಡಿಗೆಗೆ ಕಾಸನ್ನು ಹಾಕಿದ್ದ ಮಂದಿ ಅದನ್ನು ತೆಗೆದು ಕಾಣಿಕೆ ಅವರಿಗೆ ಅರ್ಪಿಸುತ್ತಾರೆ. ಸ್ವೀಕರಿಸಿದ ಗಣೆ ಅವರು, ತಮ್ಮ ಸ್ವಾಮಿ ಜುಂಜಪ್ಪನನ್ನು ನೆನೆದು "ಅವರ ಹೊಲದಲ್ಲಿ ಮನೆಯಲ್ಲಿ ಮಕ್ಕಳಲ್ಲಿ ಮರಿಯಲ್ಲಿ ಹೋದ್ರಾವು, ಬಂದ್ರಾವು, ಕುರೀನಲ್ಲಿ, ದನೀನಲ್ಲಿ ಹಾವು ಚೇಳು ಹುಳಹುಪ್ಪಟೆಯಾಗಿ, ಏನಾರ ಕಂಡಿಯಪ್ಪ... ನಿನ್ನ ಕಾಣಿಕೆ ಅಗ್ಯದಪ್ಪ ಕಾಪಾಡೂ"[೫೦] ಎಂದು ಪ್ರಾರ್ಥಿಸಿ ಮುಂದೆ ಹೋಗುತ್ತಾರೆ. ಇಂದಿಗೂ ಕೂಡ ಈ ಆಚರಣೆ ತುಮಕೂರು ಜಿಲ್ಲೆಯಲ್ಲಿ ಪ್ರಚಲಿತದಲ್ಲಿದೆ. ಜುಂಜಪ್ಪನ ಕಾವ್ಯ ಹಾಡುವ ಗಣೆಯವರು ಊರಾಡಲು ಹೋದಾಗ ಆಹ್ವಾನದ ಮೇಲೆ ಕಾವ್ಯವನ್ನು ಹಾಡುತ್ತಾರೆ. ಜುಂಜಪ್ಪನ ಕಾವ್ಯವನ್ನು ಹಾಡುವ ಕಲಾವಿದರಿಗೆ ಗಣೆಯವರು ಎಂದು ಕರೆಯುತ್ತಾರೆ.

ಪ್ರಸ್ತುತ ಜುಂಜಪ್ಪನ ಜನಪದ ಕಾವ್ಯದಲ್ಲಿ ಕಂಡುಬರುವ ಮತ್ತೊಂದು ಪ್ರಮುಖ ಅಂಶವೆಂದರೆ ಅವರು ತಮ್ಮ ದನಕರುಗಳಿಗೆ ನೀಡುವ ಪ್ರಾಧಾನ್ಯತೆ. ದನಗಳೇ ಅವರ ಸರ್ವಸ್ವ, ಅವೇ ಅವರ ಮೂಲ ದೈವಗಳು, ನೂರಾರು ರಾಸುಗಳನ್ನು ನೂರಾರು ಹೆಸರುಗಳಲ್ಲಿ ಗುರುತಿಸಿ ತಮ್ಮ 'ಗಣೆ' ಊದಿ ಕರೆಯುವ ಬಗೆಯಂತೂ ಆಕರ್ಷಣೀಯವಾದದ್ದು. ಜುಂಜಪ್ಪನ ಕಾವ್ಯದ ಬಹು ಭಾಗವನ್ನು ಆಕ್ರಮಿಸಿಕೊಂಡಿರುವ ಜುಂಜಪ್ಪನ ಪ್ರೀತಿಯ ಹೋರಿ 'ಬಡಮ್ಯೆಲ' ಕಾಡುಗೊಲ್ಲರು ತಮ್ಮ ದನಗಳಲ್ಲಿ ಇದ್ದ ನಂಬಿಕೆ ಪ್ರೀತಿಗೆ ಪ್ರತೀಕವಾಗಿದೆ. ಹಿ.ಚಿ.ಬೋರಲಿಂಗಯ್ಯ ಅವರ ಪ್ರಕಾರ "ಕಡೆಗಣಿಸಿ ಬಿಸಾಡಿದ ಹಸುವಿನ ಕರುವೊಂದನ್ನು ಅಸಾಮಾನ್ಯವಾಗಿ ಬೆಳೆಸಿ ವೈರಿಗಳ ಹುಟ್ಟಗಿಸುವ ಜುಂಜಪ್ಪನ ಛಲವಾಗಲೀ, ಇಷ್ಟಾಗಿಯೂ ಅದನ್ನು ಬಡಮ್ಯೆಲ ಎಂದೇ ಕರೆಯುವ ಧ್ವನಿಯಾಗಲಿ ಈ ಕಾವ್ಯದ ಒಂದು ಪ್ರಮುಖ ಅಂಶವಾಗಿದೆ. ಜುಂಜಪ್ಪ ಅನೇಕ ಹುಲ್ಲುಗಾವಲುಗಳನ್ನು ಗೆಲ್ಲುತ್ತಾನೆ. ಚೇಳೂರು ದೊರೆಗಳನ್ನು ಗೆಲ್ಲುತ್ತಾನೆ. ಶ್ರೀಮಂತರಾದ ತನ್ನ ಸೋದರ ಮಾವರಿಂದ ಕುತಂತ್ರವನ್ನು ಬಯಲು ಮಾಡುತ್ತಾನೆ."[೫೧] ಆದರೆ ಅವನ ಛಲ, ಆತ್ಮವಿಶ್ವಾಸ, ತಾಳ್ಮೆ ಹಾಗೂ ವೃತ್ತಿಯಲ್ಲಿನ ಪ್ರಾಮಾಣಿಕತೆ ಅವನನ್ನು ನಾಯಕನನ್ನಾಗಿಸಿವೆ. ಕಾಡುಗೊಲ್ಲರು ತಮ್ಮನ್ನು ಜುಂಜಪ್ಪನ ಜೊತೆಗೆ ಸಮೀಕರಿಸುತ್ತಾರೆ. ಆದ್ದರಿಂದಲೇ ಅವನೊಬ್ಬ ಸಾಂಸ್ಕೃತಿಕ ವೀರನಾಗಿದ್ದಾನೆ.

**ಕಾಡುಗೊಲ್ಲ ಸಮುದಾಯ**

ಭಾರತೀಯ ಸಮಾಜ ವೈವಿಧ್ಯತೆಗಳ ಆಗರ. ಇಲ್ಲಿನ ಭೌಗೋಳಿಕತೆ, ಭಾಷೆ, ಧರ್ಮ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಾಗೂ ಜನಾಂಗೀಯಗಳಲ್ಲೂ ವೈವಿಧ್ಯತೆಯನ್ನು ಗುರುತಿಸಬಹುದು. ಕರ್ನಾಟಕದಲ್ಲಿ ಹಲವು ಬುಡಕಟ್ಟುಗಳು ನೆಲೆಸಿವೆ. ಇಲ್ಲಿಯ ಬುಡಕಟ್ಟುಗಳಲ್ಲಿ

ಬಹುಮುಖ್ಯವಾಗಿ ಗುರುತಿಸಬಹುದಾದ ವಿಶಿಷ್ಟ ಬುಡಕಟ್ಟು ಸಮುದಾಯವೆಂದರೆ ಕಾಡುಗೊಲ್ಲರಾಗಿದ್ದಾರೆ. ರಾಜ್ಯದಾದ್ಯಂತ ಚದುರಿದಂತೆ ವಾಸವಾಗಿರುವ ಇವರು ಚಿತ್ರದುರ್ಗ, ತುಮಕೂರು, ಬಳ್ಳಾರಿ ಜಿಲ್ಲೆಗಳಲ್ಲಿ ವ್ಯಾಪಕವಾಗಿ ಕಂಡುಬರುತ್ತಾರೆ. ಗೊಲ್ಲ ಮತ್ತು ಕಾಡುಗೊಲ್ಲ ಎಂಬ ಎರಡು ಬಗೆಯ ಸಮುದಾಯದವರು ಇಲ್ಲಿ ನೆಲೆಸಿದ್ದು ಇವರ ಸಾಮಾಜಿಕ, ಆರ್ಥಿಕ, ರಾಜಕೀಯ, ಶೈಕ್ಷಣಿಕ, ಸಾಂಸ್ಕೃತಿಕ ಅಂಶಗಳಲ್ಲಿ ವ್ಯತ್ಯಾಸಗಳನ್ನು ಗುರುತಿಸಲು ಸಾಧ್ಯವಿದೆ. ಗೊಲ್ಲ ಎಂಬುದು ಜಾತಿ ಸೂಚಕ ಪದವಾಗಿದ್ದರೆ ಕಾಡುಗೊಲ್ಲ ಬುಡಕಟ್ಟು ಲಕ್ಷಣಗಳನ್ನು ಒಳಗೊಂಡ ಸಮುದಾಯವಾಗಿದೆ. ಇದರ ಆಚಾರ, ವಿಚಾರ, ನಂಬಿಕೆ, ಸಂಪ್ರದಾಯ ಪದ್ಧತಿಗಳು, ವಾಸಸ್ಥಾನ, ಉಡುಗೆ-ತೊಡುಗೆ, ಆಹಾರಭ್ಯಾಸ ಎಲ್ಲವೂ ಸಂಪ್ರದಾಯಬದ್ಧವಾಗಿದೆ. ಆಧುನಿಕತೆಯು ಎಷ್ಟೇ ಮುಂದುವರಿದಿದ್ದರೂ ಇವರಲ್ಲಿ ಯಾವುದೇ ಬಗೆಯ ಬದಲಾವಣೆಗಳಾಗಲೀ ಕಂಡುಬಂದಿಲ್ಲ. 'ಕಾಡುಗೊಲ್ಲ' ಬುಡಕಟ್ಟು ಸಮುದಾಯದವರಲ್ಲಿ ಕಾಣಬರುವ ಮಡಿ-ಮೈಲಿಗೆ-ಸೂತಕದಂತಹ ಆಚರಣೆಗಳು ನಾಗರಿಕ ಸಮುದಾಯಗಳಲ್ಲಿ ಕಂಡುಬರುವುದಿಲ್ಲ.

ಮೂಲತಃ ಪಶುಪಾಲಕರಾಗಿ, ಇವುಗಳ ಸಾಕಣೆ ನಿಮಿತ್ತ ಊರಿಂದೂರಿಗೆ ಅಲೆಯುವ ಇವರನ್ನು ಅರೆ-ಅಲೆಮಾರಿಗಳೆಂದು ಕರೆಯಲಾಗಿದೆ. ಊರಿನಿಂದ ಪ್ರತ್ಯೇಕಿತರಾಗಿ ಗುಡ್ಡಗಾಡು-ಅರಣ್ಯ ಪ್ರದೇಶಗಳಂತಹ ಬೆಟ್ಟದ ತಪ್ಪಲಿನಲ್ಲಿ ವಾಸಿಸುವುದರಿಂದ ಇವರ ಮಕ್ಕಳು ಶಿಕ್ಷಣದಿಂದ ವಂಚಿತರಾಗಿರುವುದು ಈ ಸಮುದಾಯದ ಅಭಿವೃದ್ಧಿಗೆ ಮಾರಕವಾಗಿದೆ. ಇವರ ಬದುಕು, ಭಾಷೆ ಎಲ್ಲವೂ ಬುಡಕಟ್ಟು ಪ್ರಧಾನವಾದವುಗಳೇ ಆಗಿವೆ. "ಆರೋಗ್ಯ ಸಂಬಂಧಿ ಸಮಸ್ಯೆಗಳಿಗೆ ಕಾಡಿನ ಸಸ್ಯ ಸಂಪತ್ತನ್ನು ವೈದ್ಯಕೀಯ ಪದ್ಧತಿಯಾಗಿ ರೂಢಿಸಿಕೊಂಡಿರುವ ಇವರು ನಾಟಿ ಔಷಧಿಯ ಪದ್ಧತಿಯನ್ನು ಕಂಡುಕೊಂಡಿದ್ದಾರೆ. ಕೆಮ್ಮು, ದಮ್ಮು, ನೆಗಡಿ, ಜ್ವರ, ಮಕ್ಕಳಾಗದಿರುವಿಕೆ, ಮೂಳೆ ಮುರಿತವಾದರೆ, ಕೀಲು ವಾಯು ಮೊದಲಾದ ಕಾಯಿಲೆಗಳಿಗೆ ಒಳಗಾದವರಿಗೆ ಗಿಡಮೂಲಿಕೆಗಳ ಮೂಲಕ ಪರಿಹಾರ ಸೂಚಿಸುವ ಇವರ ವೈದ್ಯಕೀಯ ವಿಧಾನಕ್ಕೆ ಆಧುನಿಕ ವೈದ್ಯಕೀಯ ಪದ್ಧತಿಯು ಇವರ ಜಾಡು ಹಿಡಿದಿದೆ."[೫೨] ಪಶುಗಳ ರೋಗಗಳಿಗೆ ನಾಟಿ ಔಷಧಿ ಪದ್ಧತಿಯನ್ನು ಕಂಡುಕೊಂಡಿದ್ದಾರೆ.

ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದಂತೆ ತುಮಕೂರು ಜಿಲ್ಲೆಯಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿದೆ. ಜಿಲ್ಲೆಯಲ್ಲಿ ಪ್ರಮುಖವಾಗಿ ಭೇಟಿ ಮಾಡಿದಂತಹ ಗೊಲ್ಲರ ಹಟ್ಟಿಗಳೆಂದರೆ ಬೋರಯ್ಯನಹಟ್ಟಿ, ಬಿಸಾಡಿ ಹಟ್ಟಿ, ಚಿತ್ರದೇವರ ಹಟ್ಟಿ, ಶಂಭೋನಹಳ್ಳಿ ಗೊಲ್ಲರ ಹಟ್ಟಿಗಳು; ಪ್ರಮುಖವಾಗಿ ಕಂಡುಬಂದಂತಹ ಅಂಶಗಳೆಂದರೆ ಆರ್ಥಿಕವಾಗಿ, ರಾಜಕೀಯವಾಗಿ ಹಾಘೂ ಶೈಕ್ಷಣಿಕವಾಗಿ ಹಿಂದುಳಿದವರಾಗಿದ್ದಾರೆ. ಮಹಿಳೆಯರು ಸಾಮಾಜಿಕ ಧಾರ್ಮಿಕ ಶೋಷಣೆಯೂ

ಎಲ್ಲ ರಂಗದಲ್ಲಿಯೂ ಹಿಂದುಳಿದಿದ್ದಾರೆ. ಈ ಸಮುದಾಯದವರು ವೇಷಭೂಷಣ, ಆಹಾರ, ಜೀವನ ವಿಧಾನ, ರೂಢಿ ಸಂಪ್ರದಾಯಗಳಲ್ಲಿ ಇತರ ಸಮುದಾಯದವರಿಗಿಂತ ಭಿನ್ನವಾಗಿದ್ದಾರೆ. ಇವರು ತಮ್ಮದೇ ಆದ ಪ್ರತ್ಯೇಕ ಹಟ್ಟಿಗಳನ್ನು ನಿರ್ಮಿಸಿಕೊಂಡು ಪ್ರತ್ಯೇಕವಾಗಿ ವಾಸಿಸುವುದರಿಂದ ತಮ್ಮ ಸಾಂಸ್ಕೃತಿಕ ಅನನ್ಯತೆ ಉಳಿಸಿಕೊಂಡಿದ್ದಾರೆ. ಇವರು ಗುಡ್ಡಗಾಡು ಅರಣ್ಯ ಪ್ರದೇಶದಲ್ಲಿ ವಾಸಿಸುವುದರಿಂದ "ಸರ್ಕಾರದ ಅಭಿವೃದ್ಧಿಯ ಕಾರ್ಯಕ್ರಮಗಳು ಮತ್ತು ಯೋಜನೆಗಳು ತಾಂತ್ರಿಕ ತೊಡಕಿನಿಂದಾಗಿ ಗೊಲ್ಲರ ಹಟ್ಟಿಗಳಿಗೆ ತಲುಪುವುದಿಲ್ಲ."[೫೩] ಆದ್ದರಿಂದಾಗಿ ಗೊಲ್ಲರ ಹಟ್ಟಿಗಳು ಮೂಲಭೂತ ಸೌಕರ್ಯವಿಲ್ಲದೆ ಅಲ್ಲಿನ ಜನರು ಹಲವಾರು ಮೂಢನಂಬಿಕೆಗಳಿಂದ ನರಳುವಂತಾಗಿದೆ.

**ಕಾಡುಗೊಲ್ಲ ಸಮುದಾಯದ ಮಹಿಳೆ**

ಕಾಡುಗೊಲ್ಲ ಸಮುದಾಯದ ಮಹಿಳೆ ಸಾಮಾಜಿಕವಾಗಿ ಹಾಗೂ ಧಾರ್ಮಿಕವಾಗಿ ಶೋಷಣೆಗೆ ಒಳಗಾಗುತ್ತಿದ್ದಾಳೆ. ಜನನಕ್ಕೆ ಸಂಬಂಧಿಸಿದಂತೆ ಕಾಡುಗೊಲ್ಲರಲ್ಲಿ ಹಲವು ಸಂಪ್ರದಾಯಗಳು, ರೀತಿ–ನೀತಿಗಳು, ರೂಢಿ ಪದ್ಧತಿಗಳು, ಸಾಮಾಜಿಕ ಕಟ್ಟು–ಕಟ್ಟಳೆಗಳು ಮತ್ತು ನಿಯಮಗಳಿವೆ. ಈ ಸಾಮಾಜಿಕ ನಿಯಮ ಅಥವಾ ಪದ್ಧತಿಗಳು ಬಹುಶಃ ಬೇರೆ ಯಾವುದೇ ಬುಡಕಟ್ಟು ಅಥವಾ ಜಾತಿಯಲ್ಲಿ ಕಟ್ಟು ನಿಟ್ಟಾಗಿ ಆಚರಿಸುವುದಿಲ್ಲ ಎಂದರೆ ತಪ್ಪಾಗಲಾರದು. ಈ ಆಚರಣೆಗಳು ಕೆಲವೊಮ್ಮೆ ಅಮಾನವೀಯ ರೂಪತಾಳಿವೆ. ಕಾಡುಗೊಲ್ಲ ಸಮುದಾಯದವರು ಬ್ರಾಹ್ಮಣೀಕರಿಸದ ಹಿಂದೂ ಸಂಪ್ರದಾಯವನ್ನು ಅನುಸರಿಸದೆ, ಬುಡಕಟ್ಟು ಸಮುದಾಯದವರ ಮುಖ್ಯ ಲಕ್ಷಣಗಳಾದ ಹೆತ್ತರೆ ಸೂತಕ ಸತ್ತರೆ ಸೂತಕ, ಮೈನೆರೆದರೆ ಸೂತಕ ಹಾಗೂ ಮದುವೆಯಾದರೂ ಸೂತಕ ಎಂಬ ನಿಯಮವನ್ನು ಇಂದಿಗೂ ಸಹ ಕಟ್ಟುನಿಟ್ಟಾಗಿ ಅನುಸರಿಸುತ್ತಾರೆ.

"ಕಾಡುಗೊಲ್ಲ ಸಮುದಾಯದಲ್ಲಿ ಮಗುವನ್ನು ಹೆರುವ ಕ್ರಿಯೆ ಅತ್ಯಂತ ಸೂತಕದ ವಿಚಾರ. ಬಸುರಿ ಹೆಂಗಸಿಗೆ ನೋವು ಕಾಣಿಸಿಕೊಂಡ ತಕ್ಷಣ ಅವಳನ್ನು ಹಟ್ಟಿಯಿಂದ ದೂರ ಕರೆದೊಯ್ಯಲಾಗುತ್ತದೆ. ಒಂದು ವೇಳೆ ಹಟ್ಟಿಯಲ್ಲೇ ಹೆರಿಗೆಯಾದರೆ ಆ ಮಗುವನ್ನು ಮರದಲ್ಲಿ ಹಾಕಿಕೊಂಡು ಬಾಣಂತಿಯೇ ಆ ಮಗುವನ್ನು ಹಿಡಿದುಕೊಂಡು, ಬಗ್ಗಿಕೊಂಡು, ಹಟ್ಟಿಯ ಹೊರಗೆ ಹೋಗಿ ಮಗುವಿನ ಹೊಕ್ಕಳ ಬಳ್ಳಿಯನ್ನು ಕೊಯ್ಯಬೇಕು. ಅಂದರೆ ಹೊಕ್ಕಳ ಬಳ್ಳಿಯನ್ನು ಕೊಯ್ದು ಮಗುವನ್ನು ತಾಯಿಯಿಂದ ಬೇರ್ಪಡಿಸುವವರೆಗೂ ಸೂತಕವಿಲ್ಲ ಎಂದು ಅವರ ನಂಬಿಕೆ. ನಂತರ ಈ ಸಮುದಾಯದವರಾರು ಮಹಿಳೆಯನ್ನು

ಮುಟ್ಟುವಂತಿಲ್ಲ. ಅವಳ ಸಹಾಯಕ್ಕೆ ಹೋಗುವಂತಿಲ್ಲ. ಸೂಲಗಿತ್ತಿಯು ಬಂದು ಹೆರಿಗೆ ಮಾಡಿಸುತ್ತಾಳೆ. ಹಿಂದೆ ಸೂಲಗಿತ್ತಿ ಹಾಗೂ ಯಾರೂ ಸಹ ಅವಳ ನೆರವಿಗೆ ಹೋಗುವಂತಿರಲಿಲ್ಲ."[೫೪] ಈ ಸಂದರ್ಭದಲ್ಲಿ ಹಟ್ಟಿಯ ಹೊರಗೆ ಗುಬ್ಬದಲ್ಲಿ ವಾಸಿಸಬೇಕು. ಜಿಲ್ಲೆಯ ಪ್ರತಿಯೊಂದು ಹಟ್ಟಿಯಲ್ಲೂ ಇದೇ ರೀತಿಯ ಪದ್ಧತಿ ಪ್ರಚಲಿತದಲ್ಲಿದೆ.

"ಚಿತ್ರದುರ್ಗ ಸೀಮೆಯ ಕಾಡುಗೊಲ್ಲರ ಬುಡಕಟ್ಟಿನ ಹೆಣ್ಣು ಮಕ್ಕಳಲ್ಲಿರುವ ನಂಬಿಕೆಯನ್ನು ಈವರೆಗೂ ತೆಗೆಯಲಾಗುತ್ತಿಲ್ಲ. ಗರ್ಭಿಣಿಯರು, ಬಹಿಷ್ಠೆಯಾದ ಹೆಣ್ಣು ಮಕ್ಕಳು ಹಟ್ಟಿಯ ಹೊರಗಿನ ಗುಬ್ಬದಲ್ಲಿರಬೇಕು. ಮಗು ಹೆರುವುದರ ಪೂರ್ವ, ಹೆತ್ತ ನಂತರ ಬಾಣಂತಿ ಹತ್ತು ಹನ್ನೆರಡು ದಿನ ಮೈಲಿಗೆ ಕಳೆದುಕೊಂಡೇ ಹಟ್ಟಿಯೊಳಗೆ ಬರಬೇಕು. ಬಹಿಷ್ಠೆಯಾದವರೂ ಮೂರು ಹಗಲು-ರಾತ್ರಿ ಅಲ್ಲಿಯೇ ಕಳೆಯಬೇಕು. ಹಾವು, ಮಂಡರಗಪ್ಪೆ ಕುಡುಕಿದರೆ ಅವರ ಜೀವನಾಂತ್ಯವೂ ಅಲ್ಲೇ. ಮಗು ಬದುಕಿ ತಾಯಿ ಸತ್ತದ್ದು, ತಾಯಿ ಬದುಕಿ ಮಗು ಸತ್ತದ್ದುಂಟು. ಬುಡಕಟ್ಟಿನವರಿಗೆ ಹೊರಗಿನವರು ಮೈಲಿಗೆ ಎಂದು ಕಂಡು ಬಂದಂತೆಯೇ ಅವರ ನಂಬಿಕೆಗಳ ಸಂಬಂಧ ಇರುವ ಆಚರಣೆಗಳನ್ನು ಅತಿ ಪ್ರಯಾಸದಿಂದ ಅನುಸರಿಸುವುದುಂಟು."[೫೫] ಈ ಆಚರಣೆಯಿಂದ ತುಮಕೂರು ಜಿಲ್ಲೆಯು ಹೊರತಾಗಿಲ್ಲವೆಂಬುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ. 

ಈ ಆಚರಣೆಗಳನ್ನು ಕುರಿತು ಕ್ಷೇತ್ರಕಾರ್ಯದಲ್ಲಿ ಶಂಭೋನ ಹಳ್ಳಿ ಗೊಲ್ಲರಹಟ್ಟಿಗೆ ಭೇಟಿ ನೀಡಿದಾಗ ರಾಮ, ಲಿಂಗಣ್ಣ, ಕಾಮಣ್ಣ, ಶಿವಲಿಂಗಯ್ಯ, ಪಾಲಮ್ಮ ಮುಂತಾದವರು "ಇದು ನಮ್ಮದೇ ಆದಂತಹ ಸಂಪ್ರದಾಯ. ಇದನ್ನ ಅನಿಷ್ಟ ಪದ್ಧತಿ ಅಂತಾ ಹೇಳೋರು ದಡ್ಡರು, ಇದು ನಮಗೆ ಶಿಕ್ಷೆ ಎನಿಸಲ್ಲ. ಈ ಪದ್ಧತಿ ಬಿಟ್ಟರೆ ನಮಗೆ ಪಾಪ, ನಮ್ಮ ದೇವರಿಗೆ ಆಗಲ್ಲ. ಹಬ್ಬ-ಆಚರಣೆಗಳಲ್ಲಿ ಯಾವ ಜಾತಿಯವರನ್ನು ಸೇರಿಸುವುದಿಲ್ಲ. ಋತು ಸ್ರಾವ ಮತ್ತು ಬಾಣಂತಿ ಸಂದರ್ಭದಲ್ಲಿ ಮಹಿಳೆಯರು ಹಟ್ಟಿಯ ಹೊರಗೆ ಇರುವುದರಿಂದ ಅವರಿಗೆ ವಿಶ್ರಾಂತಿ ದೊರೆಯುತ್ತದೆ"[೫೬] ಎಂದಿದ್ದಾರೆ.

ಬಿಸಾಡಿ ಹಟ್ಟಿಯ ವೀರಣ್ಣ ಎಂಬುವವರು ಕಾಡುಗೊಲ್ಲರಲ್ಲಿರುವ ಆಚರಣೆಯನ್ನು ಕುರಿತು ಈ ಕೆಳಗಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಈ ಪದ್ಧತಿಯನ್ನು ಅನುಸರಿಸದಿದ್ದರೆ ದೇವರು ನಮಗೆ ಶಿಕ್ಷೆ ಕೊಡುತ್ತಾನೆ ಎಂಬ ಭಯದ ವಾತಾವರಣದಿಂದ ಈ ಆಚರಣೆಯನ್ನು ಮಾಡುತ್ತಾರೆ. ಋತುಸ್ರಾವ ಮತ್ತು ಬಾಣಂತಿ ಸಂದರ್ಭದಲ್ಲಿ ಮಹಿಳೆಯರು ಅಡಕೆ ಪಟ್ಟೆಯಿಂದ ಮಾಡಿರುವ ಗುಬ್ಬದಲ್ಲಿ ವಾಸಿಸುತ್ತಾರೆ. ಹೆರಿಗೆ ಸಂದರ್ಭದಲ್ಲಿ ಹೆಣ್ಣು ಮಕ್ಕಳು

ಸತ್ತು ಹೋಗಿದ್ದಾರೆ. ಈ ಸಮುದಾಯ ಸಂಪೂರ್ಣವಾಗಿ ಬದಲಾಗಿಲ್ಲ. ಇವರು ಇತರೆ ಸಮುದಾಯಗಳ ಜೊತೆ ಬೆರೆಯುವುದಿಲ್ಲ"[೫೭] ಎಂದಿದ್ದಾರೆ.

ಸಂಪ್ರದಾಯದ ಹೆಸರಿನಲ್ಲಿ ಹೆಣ್ಣು ಮಕ್ಕಳನ್ನು ಋತುಸ್ರಾವದ ಮೂರು ದಿನಗಳವರೆಗೆ ಮನೆಯಿಂದ ಹೊರಗೆ ಹಾಕುವ ಕಂದಾಚಾರಗಳ ವಿರುದ್ಧ ಗೊಲ್ಲ ಸಮುದಾಯದಲ್ಲಿಯೇ ಹುಟ್ಟಿ ಬೆಳೆದ ಮಂಜಮ್ಮ ಸಿಡಿದಿದ್ದಾರೆ. ದೇವರು ಹೇಳಿದ್ದಾನೆ ಎನ್ನಲಾದ ಮಾತುಗಳನ್ನೇ ಬಳಸಿಕೊಂಡು ಮಹಿಳೆಯರಲ್ಲಿ ಜಾಗೃತಿ ಮೂಡಿಸುವ, ಪುರುಷ ವರ್ಗದ ಮನ ಬದಲಿಸುವ ಕೆಲಸ ಮಾಡುತ್ತಿದ್ದಾರೆ.

"ನಮ್ ಜುಂಜಪ್ಪ ಯಾವತ್ತೂ ಹೆಂಗಸರ್‌ನ ಹಟ್ಟಿಯಿಂದ ಹೊರಗೆ ಕೂಡ್ಸಿ ಅಂತ ಹೇಳಿಲ್ಲ. ಎಲ್ಲ ತಿಳಿದೋನು ಅವನು. ಅವನಿಗೆ ನಮ್ಮ ಕಷ್ಟ ಅರ್ಥ ಆಗದೆ ಇರುತ್ಯೇ? ನೀವು ಹೊರಗೆ ಕೂರಲ್ಲ ಅಂತ ಹೇಳ್ರೀ..."[೫೮] ಇದು ಚಿಕ್ಕನಾಯಕನಹಳ್ಳಿ ತಾಲ್ಲೂಕು ನಿರುವುಗಲ್ ಗೊಲ್ಲರಹಟ್ಟಿಯಲ್ಲಿ ಮಂಜಮ್ಮ ಎತ್ತರದ ದನಿಯಲ್ಲಿ ಆಡುತ್ತಿದ್ದ ಮಾತು. ಕಾಲೇಜು ತಪ್ಪಿಸಿಕೊಂಡ ನೋವಿನಲ್ಲಿದ್ದ ಯುವತಿ, ಮನೆಯಿಂದ ದೂರ ಉಳಿದು ಕಣ್ಣೀರಿಡುತ್ತಿದ್ದ ಈಗಷ್ಟೇ ಮದುವೆಯಾದ ಮಹಿಳೆ "ಹೇಳವ್ವ..., ಸರಿಯಾಗಿ ಹೇಳು, ನಮ್ ಕಷ್ಟ ಅರ್ಥ ಆಗೋಹಂಗೆ ಹೇಳು"[೫೯] ಎಂದು ಹೇಳುತ್ತಿದ್ದರು. ಇಂಥ ಹಲವು ಪ್ರಸಂಗಗಳಿಗೆ ಕಾರಣರಾದವರು ತೋವಿನಕೆರೆಯ ಮಂಜಮ್ಮ.

"ತುಮಕೂರು ಜಿಲ್ಲೆಯ ಗೊಲ್ಲ ಸಮುದಾಯದ ಮಹಿಳೆಯರ ಕಷ್ಟ ಇತ್ತೀಚೆಗೆ ರಾಜ್ಯದ ಗಮನ ಸೆಳೆಯಿತು. ವಿವಿಧ ಗ್ರಾಮಗಳಿಗೆ ಕೃಷ್ಣ ಯಾದವನಂದ ಸ್ವಾಮೀಜಿ, ಚಿತ್ರದುರ್ಗದ ಮುರುಘಾ ಶರಣರು, ಹೊಸದುರ್ಗ ಭಗೀರಥ ಪೀಠದ ಪುರುಷೋತ್ತಮಾನಂದ ಪುರಿ ಸ್ವಾಮೀಜಿ ಭೇಟಿ ನೀಡಿ ಜಾಗೃತಿ ಮೂಡಿಸಲು ಪ್ರಯತ್ನಿಸಿದರು. ಈ ವೇಳೆ ಮುಂಚೂಣಿಯಲ್ಲಿ ನಿಂತು ಜನರನ್ನು ಸಂಘಟಿಸಿ, ಮುಟ್ಟಾಗಿದ್ದ ಮಹಿಳೆಯರಿಗೆ ನೀರೆರೆದವರು ಮಂಜಮ್ಮ."[೬೦]

"ಮಂಜಮ್ಮ ಅವರ ಅಕ್ಕನನ್ನು ಹೆರಿಗೆಯ ನಂತರ ಹಟ್ಟಿಯಿಂದ ಹೊರಗೆ ಕೂಡಿಸಲಾಗಿತ್ತು. ತೀವ್ರ ರಕ್ತಸ್ರಾವವಾದರೂ ಯಾರೂ ಗಮನಹರಿಸಲಿಲ್ಲ. ದೇಹಸ್ಥಿತಿ ವಿಕೋಪಕ್ಕೆ ಹೋಗಿ ಆಸ್ಪತ್ರೆಗೆ ಕರೆದೊಯ್ಯುವ ಹೊತ್ತಿಗೆ ಅವರು ಸತ್ತೇ ಹೋಗಿದ್ದರು."[೬೧] ತನ್ನ ಅಕ್ಕನ ಸ್ಥಿತಿ ಇನ್ಯಾರಿಗೂ ಬರಬಾರದು ಎನ್ನುವ ಮನಸ್ಥಿತಿಯಿಂದಾಗಿ ಮಂಜಮ್ಮ ಅಂದಿನಿಂದ ಇಂದಿನವರೆಗೆ ಕಾಡುಗೊಲ್ಲ ಸಮುದಾಯದಲ್ಲಿ ಜಾಗೃತಿಯನ್ನು ಮೂಡಿಸುತ್ತಿದ್ದಾರೆ. ಸದ್ದಿಲ್ಲದೇ, ಪ್ರಚಾರದ ಬೆನ್ನು ಹತ್ತದೆ ಎಲೆಮರೆಯಲ್ಲಿಯೇ ಸೇವೆ ಸಲ್ಲಿಸುತ್ತ ಇರುವವರು,

ರಾಜ್ಯ ಸರ್ಕಾರ ಗುರುತಿಸದಿದ್ದರೂ ಕೇಂದ್ರದ ಗಮನ ಸೆಳೆದವರು ಕೆಲವರು ಇದ್ದಾರೆ. ಯಾರು ಗುರುತಿಸದಿದ್ದರೂ ಸಮಾಜ ಸೇವೆಯಲ್ಲಿಯೇ ನೆಮ್ಮದಿ ಕಾಣುತ್ತಿರುವವರು ಹಲವರಿದ್ದಾರೆ. ಅಂಥ ಕೆಲ ಸಾಧಕರಲ್ಲಿ ಮಂಜಮ್ಮ ಕೂಡ ಒಬ್ಬರು.

ತುಮಕೂರು ಜಿಲ್ಲೆಯಲ್ಲಿ ಕೇಂದ್ರೀಕೃತವಾಗಿರುವ ಕಾಡುಗೊಲ್ಲ ಸಮುದಾಯ ಸಮುದಾಯ ಕಂದಾಚಾರದ ಗೂಡಿನಲ್ಲಿ ಇದ್ದರೂ, ತನ್ನದೇ ಆದ ಸಂಸ್ಕೃತಿಯನ್ನು ಹೊಂದಿದೆ. "ಇವರು ಪ್ರಕೃತಿ ಆರಾಧಕರು. ಇವರು ಬಿಲ್ಪತ್ರೆ, ಎಕ್ಕದ ಗಿಡಗಳನ್ನು ಪೂಜೆ ಮಾಡುತ್ತಾರೆ. ಗಿಡಮೂಲಿಕೆ ಗಿಡಗಳನ್ನು ಪೂಜಿಸಿ ಆನಂತರ ಗಿಡ ಕೀಳುತ್ತಾರೆ. ಇವರ ದೇವಸ್ಥಾನಗಳೇ ಧಾರ್ಮಿಕ ಕೇಂದ್ರಗಳಾಗಿವೆ ಎಂದು ವೀರಣ್ಣ ಅಭಿಪ್ರಾಯಪಟ್ಟಿದ್ದಾರೆ."[೬] ಹಿಂದುಳಿದ ಸಮುದಾಯಗಳ ಅಭಿವೃದ್ಧಿಗೆ ಶಿಕ್ಷಣವೇ ಮುಖ್ಯವಾದ್ದರಿಂದ ಸಮುದಾಯದ ಪ್ರತಿಯೊಬ್ಬರೂ ಶಿಕ್ಷಣವನ್ನು ಪಡೆಯಬೇಕು. ಗೊಲ್ಲರ ಹಟ್ಟಿಗಳು ಮೂಲ ಸೌಕರ್ಯಗಳಿಂದ ವಂಚಿತವಾಗಿರುವುದರಿಂದ ಸರ್ಕಾರದ ಮೂಲಭೂತ ಸೌಲಭ್ಯಗಳು ದೊರೆಯುವಂತೆ ಮಾಡಬೇಕಾಗಿದೆ. ಕಾಡುಗೊಲ್ಲ ಮಹಿಳೆಯರು ಹಲವಾರು ಸಾಂಸ್ಕೃತಿಕ ಮತ್ತು ಸಾಮಾಜಿಕ ನಿಷೇಧಗಳನ್ನು ಎದುರಿಸುತ್ತಿರುವುದರಿಂದ ಅವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದು ಪ್ರಮುಖ ಜವಾಬ್ದಾರಿಯಾಗಬೇಕಾಗಿದೆ.

### ೨.೩. ತತ್ವಪದಕಾರರು

ವೈದಿಕ ಧರ್ಮ ಮತ್ತು ಸಾಮಾಜಿಕ ಯಜಮಾನ್ಯವನ್ನು ಮಾನ್ಯ ಮಾಡದೆ ರೂಪುಗೊಂಡ ಪರಂಪರೆಯಲ್ಲಿ ಬೌದ್ಧರು, ಜೈನರು, ಅಜೀವಿಕರು, ನಾಥಪಂಥೀಯರು, ಸಿದ್ಧಪರಂಪರೆಗಳು, ಚಾರ್ವಾಕರು ಹಾಗೂ ತತ್ವಪದಕಾರರು ಸೇರುತ್ತಾರೆ. ನಿರ್ದಿಷ್ಟ ಭೌಗೋಳಿಕ ಮೇರೆಗಳಿಗೆ ತತ್ವಪದಕಾರರನ್ನು ಮಿತಿಗೊಳಿಸುವುದು ಅವರ ತಾತ್ವಿಕತೆಯ ಆಶಯಕ್ಕೆ ಹೊರತಾದುದು. "ಭಾಷೆ, ಜಾತಿ, ಧರ್ಮ, ಸಂಸ್ಕೃತಿಗಳ ಎಲ್ಲೆಕಟ್ಟುಗಳನ್ನು ಮೀರಿ ಮಾನವೀಯತೆಯೊಂದನ್ನೇ ಮಾನ್ಯ ಮಾಡುವ ಪರಂಪರೆಗೆ ಇಂತಹ ಮಿತಿಗಳು ಯೋಗ್ಯವಲ್ಲ."[೬೩] ಭಾರತೀಯ ಶ್ರವಣ ಪರಂಪರೆಯನ್ನು ಬುದ್ಧಪೂರ್ವಕಾಲದಿಂದಲೂ ಗುರುತಿಸಬಹುದು. ಬಹುಪಾಲು ಭಾರತೀಯ ಅವೈದಿಕ ಪರಂಪರೆಗಳ ಸಂಗಮ ಭೂಮಿ ಎಂದರೆ ಸಿದ್ಧ ಪರಂಪರೆ. ತತ್ವಪದಗಳು ಬಾಯಿಂದ ಬಾಯಿಗೆ ಹರಿದು ಬರುತ್ತದೆ. ಅವುಗಳನ್ನ ಬರೆದವರು ಯಾರು? ಹಾಡಿದವರು ಯಾರು? ಎಂದು ಗೊತ್ತಿರುವುದಿಲ್ಲ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂದರ್ಶನ ಮಾಡಿದ ತತ್ವಪದಕಾರರಾದ ಎಂ.ಸಿ.ನರಸಿಂಹ ಮೂರ್ತಿ ಅವರು ಶಿಶುನಾಳ ಶರೀಫರ ತತ್ವಪದಗಳನ್ನು ಹಾಡುತ್ತಾರೆ. ವೇಮನ್ ಪ್ರಕಾರ ತತ್ವ

ಎಂದರೆ "ಕಾಣಲಾರದ ತನ್ನ ಕರ್ಣ ಹಣೆ, ನೆತ್ತಿ, ಬೆನ್ನುಭಾಗ ತನ್ನನ್ನು ತಾನರಿದವನು ತತ್ವವೇನರಿದಾನು ಕೇಳು ವೇಮ"[೬೪] ಎಂದು ಹೇಳುತ್ತಾನೆ. ತನ್ನನ್ನು ತಾನು ಅರಿತುಕೊಳ್ಳದವನು ತತ್ವದ ಸಾರವನ್ನು ಹೇಗೆ ಅರಿತು ಕೊಳ್ಳುವುದಕ್ಕೆ ಸಾಧ್ಯವೆಂದು ಶರಣರಾಗಲಿ, ತತ್ವಪದಕಾರರಾಗಲಿ ಅವರು ತಮ್ಮ ಅನುಭವದ ಸಾರ ಮಾಲಿಕೆಯನ್ನು ಜಗತ್ತಿಗೆ ತನ್ನದೇ ಆದ ರೂಪದಲ್ಲಿ ಕೊಡುತ್ತಾ ಬಂದರು. ಕೆಲವರು ಹಾಡಿನ ರೂಪದಲ್ಲಿ, ಕೆಲವರು ಮಾತಿನ ರೂಪದಲ್ಲಿ ಕೊಡುತ್ತಾ ಬಂದರು. ಹೀಗೆ ಅವರವರ ಅನುಭವದ ಸಾರತತ್ವಗಳನ್ನು ಹೇಳಿಕೊಂಡು ಹೋಗುವ ರೀತಿಗಳಿದೆಯಲ್ಲ ಅದು ಸಾರತತ್ವ, ಸಾರತತ್ವಗಳ ಒಳಗೆ ತತ್ವ ಇದೆ. ತತ್ವದಲ್ಲಿ ತತ್ವ ಇಲ್ಲ. ಉತ್ತರ ಕರ್ನಾಟಕದಲ್ಲಿ ಕಡಕೊಳ ಮಡಿವಾಳೇಶ್ವರರು ೧೮ನೇ ಶತಮಾನದಲ್ಲಿ ಬರುತ್ತಾರೆ. ಇವರು ಸಮಾಜವನ್ನು ಪ್ರಬಲವಾಗಿ ತಿದ್ದುತ್ತಾರೆ. ಜಾತಿಧರ್ಮಗಳನ್ನು ವಿರೋಧ ಮಾಡುತ್ತಾರೆ. ಕ್ರಾಂತಿಕಾರಿ ತತ್ವಗಳನ್ನು ಹೇಳುತ್ತಾರೆ. ಉತ್ತರ ಕರ್ನಾಟಕದ ತತ್ವಪದಕಾರರಲ್ಲಿ ಕಡಕೋಳ ಮಡಿವಾಳಪ್ಪ ಅವರು, ಶಿಶುನಾಳ ಶರೀಫರು, ಜಲಾಲೀನ್ ಸಾಹೇಬರು ಇವರೆಲ್ಲರು ಕೂಡ ಪ್ರಮುಖರಾಗಿದ್ದಾರೆ. ತತ್ವಪದದ ಹರಿಕಾರರೇ ಶಿಶುನಾಳ ಶರೀಫರು. ತತ್ವಪದಗಳ ಸಂದೇಹ ಒಂದು ರೀತಿಯಲ್ಲಿಲ್ಲ. ತತ್ವಪದಕಾರರು ಹೆಣ್ಣು ಮಕ್ಕಳ ನಡೆ ನುಡಿ ಬಗ್ಗೆ, ಸಮಾಜದ ಬಗ್ಗೆ, ಗರ್ವ, ಹಬ್ಬ, ವಿಚಾರಗಳ ಬಗ್ಗೆ ಎಲ್ಲ ರೀತಿಯಲ್ಲೂ ಹೇಳಿಕೊಂಡು ಹೋಗುತ್ತಾರೆ.

ಹಿಂದೂ ಧರ್ಮದಲ್ಲಿರುವಂತ ಲೋಪದೋಷಗಳನ್ನು ತತ್ವಪದಕಾರರು ವಿಡಂಬನೆ ಮಾಡಿದ್ದಾರೆ. ತತ್ವಪದಕಾರರಿಗೆ ಗುರುವೇ ಮುಖ್ಯ. ಅವರಿಗೆ ಗುರುವಿಲ್ಲದೆ ಸಾಧನೆಯ ಚಕ್ರ ಪೂರ್ಣವಾಗುವುದಿಲ್ಲ. ನಟರಾಜ್ ಬೂದಾಳ್ ಅವರು ಮಧ್ಯಕಾಲೀನ ಕಾಲಘಟ್ಟದಲ್ಲಿನ ತುಮಕೂರು ಜಿಲ್ಲೆಯ ತತ್ವಪದಕಾರರನ್ನು ಗುರುತಿಸಿದ್ದಾರೆ.

ಶಂಕರಾನಂದ ಯೋಗಿ, ಹೊನ್ನಗಂಗ, ಸೋಮೆಕಟ್ಟೆ ಚೆನ್ನವೀರಸ್ವಾಮಿ, ಭಂ ಭಂ ಬಾಬಾ ಅವರು, ಹರಿಹರ ಗುರು, ಗುರುಗುಂಡ ಬ್ರಹ್ಮಯೋಗಿಗಳು, ಹಾಗಲವಾಡಿ ಮುದ್ದುವೀರ ಸ್ವಾಮಿಗಳು, ಶಂಕರ ದೇವ, ಎಡೆಯೂರು ಸಿದ್ಧಲಿಂಗ, ಗುಬ್ಬಿ ಚನ್ನಬಸವೇಶ, ಕೆಸ್ತೂರ ದೇವ, ಪುರದ ನಾಗಣ್ಣ ಮೊದಲಾದ ಮಧ್ಯಕಾಲೀನ ಕಾಲಘಟ್ಟದ ತುಮಕೂರು ಜಿಲ್ಲೆಯ ತತ್ವಪದಕಾರರನ್ನು ಕುರಿತು ನಟರಾಜ್ ಬೂದಾಳ್ ಅವರು ಚರ್ಚಿಸಿದ್ದಾರೆ. ಬಹುತೇಕ ತತ್ವಪದಕಾರರು ಗುರು ಪರಂಪರೆ ಹಿನ್ನೆಲೆ ಹೊಂದಿರುವವರಾಗಿದ್ದಾರೆ. ಕಾಣಸಿಗುವ ತತ್ವಪದಕಾರರಲ್ಲಿ ಬಹುತೇಕರು ಸಂಸಾರಿಗಳು. ಹುಣ್ಣಿಮೆ, ಅಮಾವಾಸ್ಯೆಗಳಲ್ಲಿ, ಜನನ–ಮರಣಗಳ ಸಂಬಂಧವಾಗಿ ಜನರಿಂದ ಇಚ್ಛೆಪಟ್ಟು ಆಹ್ವಾನಿಸಲ್ಪಟ್ಟವರ ಮನೆಗಳಿಗೆ ತೆರಳಿ ಆರಾಧನೆಯಲ್ಲಿ ತೊಡಗುವರು.

ತತ್ವಪದಕಾರರಿಗೆ ಈ ಜಿಲ್ಲೆಯ ಕೆಲವು ಸ್ಥಳಗಳು ಯಾತ್ರಾ ಸ್ಥಳಗಳಾಗಿವೆ. "ತಿಪಟೂರು ತಾಲ್ಲೂಕಿನ ಕೆರೆಕೋಡಿ ರಂಗಾಪುರ ಮಠ, ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಗೋಡೆಕೆರೆ ಮಠ,

ಕೊರಟಗೆರೆ ತಾಲ್ಲೂಕಿನ ಸಿದ್ಧರಬೆಟ್ಟ, ಶಿರಾ ತಾಲ್ಲೂಕಿನ ಗುರುಗುಂಡ ಮಠ, ಕೋಡಿಹಳ್ಳಿ ಆದಿ ಜಾಂಬವ ಪೀಠ, ಕ್ಯಾತ್ಸಂದ್ರದ ಸಿದ್ಧಗಂಗಮಠ, ಕುಣಿಗಲ್ ತಾಲ್ಲೂಕಿನ ಯಡಿಯೂರು ಸಿದ್ಧಲಿಂಗೇಶ್ವರ ದೇವಾಲಯ, ತುಮಕೂರಿನ ಸರಪಳಿ ಸನ್ಯಾಸಿ ಮಠ ಮುಂತಾದ ಮಠ, ದೇವಾಲಯ ತಾಣಗಳು ಆಕರ್ಷಣೆಯ ಕೇಂದ್ರಗಳಾಗಿವೆ."[೬೫] ವಿಶೇಷ ಸಂದರ್ಭಗಳಲ್ಲಿ ಈ ತಾಣಗಳಿಗೆ ಭೇಟಿ ಕೊಡುವ ತತ್ವಪದಕಾರರು, ತಮ್ಮ ನೆನಪಿನ ಭಂಡಾರದಲ್ಲಿನ ತತ್ವಪದಗಳನ್ನು ಆಸಕ್ತಿಯಿಂದ ಗುಂಪುಗೂಡಿ ಹಾಡುತ್ತಾರೆ.

ತತ್ವಪದಗಳು ಮುಂದಿಟ್ಟ ಜೀವನ ಮೀಮಾಂಸೆಯ ಪ್ರಮುಖ ನಿಲುವುಗಳನ್ನು ಹೀಗೆ ಗುರುತಿಸಬಹುದು.

"೧. ವರ್ಣಾಶ್ರಮ ವ್ಯವಸ್ಥೆಯ ನಿರಾಕರಣೆ.
೨. ಜಾತಿ ವ್ಯವಸ್ಥೆಯ ನಿರಾಕರಣೆ.
೩. ಯಜ್ಞಯಾಗ ವಿರೋಧ
೪. ವೇದ ಇತ್ಯಾದಿ ಶಬ್ದ ಪ್ರಮಾಣ ನಿರಾಕರಣೆ
೫. ಆತ್ಮ ಮತ್ತು ಬ್ರಹ್ಮವಾದಗಳ ನಿರಾಕರಣೆ
೬. ಭಿನ್ನಾಭಿನ್ನ (ದ್ವೈತಾದ್ವೈತ) ನಿರಾಕರಣೆ
೭. ಏಕಮೂಲವಾದದ ನಿರಾಕರಣೆ
೮. ಸಿದ್ಧ ಸತ್ಯದ ನಿರಾಕರಣೆ
೯. ಲಿಂಗ ತಾರತಮ್ಯದ ನಿರಾಕರಣೆ"[೬೬]

ಒಟ್ಟಾರೆಯಾಗಿ ಹೇಳುವುದಾದರೆ ಹನ್ನೆರಡನೆ ಶತಮಾನದ ಶರಣ ಚಳವಳಿ ನಂತರ, ತತ್ವಪದಕಾರರು ತಮ್ಮ ತತ್ವಗಳ ಸಾರಗಳ ಮೂಲಕ ಹಿಂದೂ ಧರ್ಮವನ್ನು ಹಾಗೂ ಭಾರತೀಯ ಸಮಾಜವನ್ನು ತಮ್ಮ ಅನುಭಾವಿಕ ನೆಲೆಯಲ್ಲಿ ವಿಡಂಬನೆ ಮಾಡಿದ್ದಾರೆ.

**೨.೪. ಸ್ಥಳನಾಮಗಳು**

ತುಮಕೂರು ಜಿಲ್ಲೆಯ ಸ್ಥಳನಾಮಗಳ ವಿಷಯ ಪ್ರಮುಖವಾಗಿದೆ. ಸ್ಥಳನಾಮಗಳನ್ನು ಕುರಿತು ಹಲವು ವಿಭಾಗಗಳಾಗಿ ವಿಂಗಡಿಸಬಹುದು. ಅಧ್ಯಯನ ವಿಷಯಕ್ಕೆ ಪೂರಕವಾಗಿ ತಳಸಮುದಾಯ ಹಾಗೂ ಬುಡಕಟ್ಟು ಸಮುದಾಯದ ಹಿನ್ನೆಲೆಯಿಂದ ಸ್ಥಳನಾಮಗಳನ್ನು ಗುರುತಿಸಲಾಗಿದೆ.

**೧. ತುಮಕೂರು**

ಕ್ರೀಡಾಪುರದ ಅರಸು ಗಂಗಮಂಡಲದ ಮಿತ್ರರಾಜರಾಗಿ ಸಾಮಂತ ಅರಸರೆನಿಸಿ ಕೊಂಡಿದ್ದರು. "ಕ್ರೀಡಾಪುರದ ನಾಡು ಗಂಗರ ಅಧೀನದಲ್ಲಿರುವುದನ್ನು ನೊಳಂಬರು

ಸಹಿಸುತ್ತಿರಲಿಲ್ಲ. ಆದ್ದರಿಂದಾಗಿ ಕ್ರೀಡಾಪುರದ ಅರಸರು ನೊಳಂಬ ಕಿರುಕೊಳವನ್ನು ತಡೆಯಲು ಕ್ರೀಡಾಪುರದ ಗಡಿಪ್ರದೇಶದಲ್ಲಿ ಕಾವಲುಗಾರರನ್ನು ನೇಮಿಸಿದ್ದರು. ಟಂಕಿಯನ್ನು ಬಾರಿಸುವ ಈ ಕಾವಲುಗಾರರು ಕ್ರೀಡಾಪುರ ಗಡಿಪ್ರದೇಶದ ದಿಣ್ಣೆಯ ಮೇಲೆಯೇ ವಾಸ ಮಾಡುತ್ತಿದ್ದರು."[೧೭] ಇದು ಒಂದು ಹಳ್ಳಿಯ ರೂಪವನ್ನು ಪಡೆಯಿತು. ಟಂಕಿಯನ್ನು ಬಾರಿಸುವ ಅಥವಾ ತಮಟೆ ನಗಾರಿಗಳನ್ನು ಬಾರಿಸುವವರು ಈ ಹಳ್ಳಿಯಲ್ಲಿ ವಾಸಿಸುತ್ತಿದ್ದರಿಂದಾಗಿ ಈ ಹಳ್ಳಿಗೆ ಟಂಕಿಯೂರು ಟುಂಕೂರು ಅಥವಾ ತುಮಕೂರು ಎಂಬ ಹೆಸರು ಬಂದಿತು.

### ವಡ್ಡರಹಳ್ಳಿ

"ವಡ್ಡರಹಳ್ಳಿ ಎನ್ನುವ ಗ್ರಾಮದ ಸ್ಥಳನಾಮದಲ್ಲಿ ವಡ್ಡರು ಮತ್ತು ಹಳ್ಳಿ ಎನ್ನುವ ಎರಡು ಘಟಕಗಳಿವೆ. 'ವಡ್ಡರ' ಎಂಬುದು ವಡ್ಡರು ಎಂಬ ಸಮುದಾಯವನ್ನು ಸೂಚಿಸುತ್ತದೆ."[೧೮] ವಡ್ಡರಹಳ್ಳಿ ಎಂಬ ಹೆಸರಿನ ಹಳ್ಳಿಯು ತುಮಕೂರು ಜಿಲ್ಲೆಯ ತುಮಕೂರು ತಾಲ್ಲೂಕು, ಕುಣಿಗಲ್ ತಾಲ್ಲೂಕು, ಕೊರಟಗೆರೆ ತಾಲ್ಲೂಕುಗಳಲ್ಲಿ ಕಂಡುಬರುತ್ತದೆ. ಈ ಹಳ್ಳಿಗಳಲ್ಲಿ ವಡ್ಡರು ಸಮುದಾಯ ವಾಸ ಮಾಡುತ್ತಿದ್ದರಿಂದಾಗಿ ವಡ್ಡರಹಳ್ಳಿ ಎಂದು ಹೆಸರು ಬಂದಿದೆ.

### ಕುರಂಕೋಟೆ

ಕುರಂಕೋಟೆ ಎನ್ನುವ ಗ್ರಾಮದ ಸ್ಥಳನಾಮದಲ್ಲಿ ಕುರಂ ಮತ್ತು ಕೋಟೆ ಎನ್ನುವ ಎರಡು ಘಟಕಗಳಿವೆ. ಕುರಂ ಎಂಬುದು ಕುರಂಗರಾಜನನ್ನು ಸೂಚಿಸುತ್ತದೆ. "೧೬ನೇಯ ಶತಮಾನದಲ್ಲಿ ಮಧುಗಿರಿ ಪಾಳೆಯ ಪಟ್ಟಿನ ಇಮ್ಮಡಿ ಚಿಕ್ಕಪ್ಪಗೌಡನ ಸಾಮಂತರಾಜ ಕುರಂಗ ರಾಜನಾಗಿದ್ದಾನೆ."[೧೯] ಕುರಂಗರಾಜ ಮಾದಿಗ ಸಮುದಾಯದ ಮಾದಿಗ ದಂಡೋರನ ಮಗ ಎಂಬುದಕ್ಕೆ ದಾಖಲೆಗಳು ದೊರೆತಿವೆ. ಕುರಂಗರಾಜ ತನ್ನ ನೆನಪಿಗಾಗಿ ಹಳ್ಳಿಯನ್ನು ಕಟ್ಟುತ್ತಾನೆ. ಆ ಹಳ್ಳಿಯೇ ಕುರಂಕೋಟೆ. ಈ ಗ್ರಾಮ ಕೊರಟಗೆರೆ ತಾಲ್ಲೂಕಿನಲ್ಲಿದೆ.

### ಹೊಲತಾಳು

ಮಧುಗಿರಿ ಪಾಳೆಯಗಾರನಾದ ಇಮ್ಮಡಿ ಚಿಕ್ಕಪ್ಪಗೌಡನ ಸಾಮಂತ ರಾಜ ಕೊರಟಗೆರೆ ಬಳಿಯ ಕುರಂಕೋಟೆಯ ಕುರಂಗರಾಯ ಎಂದು ಚರ್ಚಿಸಲಾಗಿದೆ. "ಕುರಂಗರಾಯನಿಗೆ ಒಬ್ಬ ಪ್ರೇಯಸಿ ಇದ್ದಳು. ಆಕೆಯನ್ನು ಸೈನಿಕರೊಂದಿಗೆ ಕುರಂಗರಾಯ ಕರೆತರುತ್ತಿದ್ದಾಗ, ಆಕೆಯು ಮಾಸಿಕ ಬಹಿಷ್ಠೆ(ಹೊಲೆ)ಯಾದಳು. ಆಗ ಆ ಪ್ರೇಯಸಿಯು 'ಹೊಲೆಯಾಗಿದ್ದೇನೆ ತಾಳು' ಎಂದು ಕುರಂಗರಾಯನಿಗೆ ಹೇಳುತ್ತಾಳೆ. ಆತ ಸೈನಿಕರನ್ನು ಅಲ್ಲಿಯೇ ಕಾವಲಿಟ್ಟು ಹೊರಟನು."[೨೦] ಅಲ್ಲಿಯೇ ಸೃಷ್ಟಿಯಾದ ಗ್ರಾಮದ ಸ್ಥಳನಾಮವು ಹೊಲೆತಾಳು–ಹೊಲತಾಳು ಎಂದು ಕಾಲಕ್ರಮೇಣವಾಗಿ ಕರೆಯಲ್ಪಟ್ಟಿದೆ. ಈ ಗ್ರಾಮ ಕೊರಟಗೆರೆ ತಾಲ್ಲೂಕಿನಲ್ಲಿದೆ.

**ಬ್ಯಾಡರ ಹಳ್ಳಿ**

ಬ್ಯಾಡರಹಳ್ಳಿ ಎನ್ನುವ ಗ್ರಾಮದ ಸ್ಥಳನಾಮದಲ್ಲಿ ಬ್ಯಾಡರ ಮತ್ತು ಹಳ್ಳಿ ಎನ್ನುವ ಎರಡು ಘಟಕಗಳಿವೆ. ಇಲ್ಲಿ ಬ್ಯಾಡರ ಎಂಬುದು ಬೇಡ ಸಮುದಾಯವನ್ನು ಸೂಚಿಸುತ್ತದೆ. "ಬೇಟೆಯ ಮೂಲ ವೃತ್ತಿಯ ಬೇಡರ ವಾಸಿಸುವಿಕೆಯಿಂದಾಗಿ ಈ ಹಳ್ಳಿಗೆ ಬ್ಯಾಡರಹಳ್ಳಿ ಎಂಬ ಗ್ರಾಮದ ಸ್ಥಳನಾಮವುಂಟಾಗಿದೆ."[೨೧] ಬೇಡ ಸಮುದಾಯದಿಂದ ಬಂದ ಸ್ಥಳನಾಮಗಳು ಮಧುಗಿರಿ, ಪಾವಗಡ, ಚಿಕ್ಕನಾಯಕನ ಹಳ್ಳಿ, ಗುಬ್ಬಿ ಹಾಗೂ ತುರುವೇಕೆರೆ ತಾಲ್ಲೂಕುಗಳಲ್ಲಿ ಕಂಡುಬರುತ್ತದೆ.

**ದೊಂಬರಹಳ್ಳಿ**

ದೊಂಬರಹಳ್ಳಿ ಎನ್ನುವ ಗ್ರಾಮದ ಸ್ಥಳನಾಮದಲ್ಲಿ ದೊಂಬರ ಮತ್ತು ಹಳ್ಳಿ ಎನ್ನುವ ಎರಡು ಘಟಕಗಳಿವೆ. "ಇಲ್ಲಿ ದೊಂಬರ ಎಂಬುದು ದೊಂಬರು ಎಂಬ ಸಮುದಾಯವನ್ನು ಸೂಚಿಸುತ್ತದೆ. ಇನ್ನು ಹಳ್ಳಿ ಎನ್ನುವುದು ಜನರ ಹಲವು ವಸತಿಗಳ ಗುಂಪಾದ ವಾಸಸ್ಥಳವನ್ನು ಸೂಚಿಸುತ್ತದೆ."[೨೨] ದೊಂಬರ ಸಮುದಾಯದ ಮೂಲದಿಂದಾದ ಹಳ್ಳಿಯೇ ದೊಂಬರಹಳ್ಳಿ ಎಂಬುದಾಗಿದೆ. ಈ ಗ್ರಾಮ ತುರುವೇಕೆರೆ ತಾಲ್ಲೂಕಿನಲ್ಲಿದೆ.

ಹೀಗೆ ಪ್ರಸ್ತುತ ಅಧ್ಯಾಯದಲ್ಲಿ ತಳಸಮುದಾಯಗಳ ಹಿನ್ನೆಲೆಯಿಂದ ಸ್ಥಳನಾಮಗಳನ್ನು ಗುರುತಿಸಲಾಗಿದೆ.

**೨.೫. ಶಾಸನಗಳು**

ಪ್ರಾಚೀನ ತುಮಕೂರು ಜಿಲ್ಲೆಯಲ್ಲಿ ಸಮುದಾಯಗಳ ಬದುಕನ್ನು ತಿಳಿಯಲು ಶಿಲಾಶಾಸನಗಳು ಅತ್ಯುತ್ತಮ ಆಕರಗಳಾಗಿವೆ. ಅವು ಕೊಡುವ ಬದುಕಿನ ವಿವರಗಳು ಮೇಲ್ವರ್ಗದ ಜಾತಿಯ ಜನರಿಗೆ ಸಂಬಂಧಪಟ್ಟಿವೆ. ಅವುಗಳಿಂದ ಅಸ್ಪೃಶ್ಯರ ಬದುಕನ್ನು ತಿಳಿಯುವುದು ಅಸಾಧ್ಯವಾಗಿದೆ. ಶಾಸನಗಳಿಗೆ ಸಂಬಂಧಪಟ್ಟಂತೆ ಚಿದಾನಂದಮೂರ್ತಿ ಅವರು ಅಧ್ಯಯನ ಮಾಡಿದ್ದಾರೆ. ಒಂದು ಶಾಸನದಲ್ಲಿ ಹೊಲೆಯನೊಬ್ಬ ದಾನ ಕೊಟ್ಟ ಸಂಗತಿಯಿದೆ. "ಮಾದಿಗ ಜಾತಿಯ ಒಬ್ಬ ವ್ಯಕ್ತಿ ಶ್ರೀಮಂತ ಮತ್ತು ಪುಲವಳ್ಳಿಯ ಗೌಡ ಅರಿವಾರ್ಮನ ತಮ್ಮ ನಾಣ್ಣೆಯ ಎಂಬಾತ ಹಲವು ಗೋಗಳನ್ನು ಕೊಟ್ಟಾಗ ಅವನ್ನು ತೆಗೆದುಕೊಂಡ ತಾಳಗುಂದದ ಬ್ರಾಹ್ಮಣರು ಅವನನ್ನು ಹರಸಿದ ವಿಷಯ ಬಂದಿದೆ."[೨೩] ಎರಡು ಶಾಸನಗಳಲ್ಲಿ ವೀರರಾದ ಹೊಲೆಯರ ಉಲ್ಲೇಖಗಳಿವೆ. "ರಣಮಂಡೆ ಅಂಗು ಎಂಬ ಹೆಸರಿನ ಹೊಲೆಯ ತನ್ನ ಯಜಮಾನ ಜುದ್ಧಮಲ್ಲನ ಪರವಾಗಿ ಹೋರಾಡಿ ಸತ್ತ ವಿಷಯ ದಕ್ಷಿಣ ಕನ್ನಡ ಜಿಲ್ಲೆಯ ಶಾಸನವೊಂದರಲ್ಲಿದೆ."[೨೪] ಪ್ರಾಚೀನ ಕರ್ನಾಟಕದ ಅಸ್ಪೃಶ್ಯರ ಬಗ್ಗೆ ತಿಳಿಯಲು ಮೇಲ್ಕಂಡ ಶಾಸನಗಳು

ಮುಖ್ಯವಾಗಿವೆ.

ತುಮಕೂರು ಜಿಲ್ಲೆಗೆ ಸಂಬಂಧಪಟ್ಟಂತೆ ಹೇಳುವುದಾದರೆ, ಯರದಕಟ್ಟೆಯ ವಿಜಯನಗರದ ಶಾಸನದಲ್ಲಿ "ಕೆಂಚಪ್ಪನಾಯಕನ ಮಗನಾದ ನಾಯಕನು ಯರದ ಕಟ್ಟೆಯ ಗ್ರಾಮವನ್ನು ತಮ್ಮ ರಾಜ ಮಹಾರಾಜ ಅಯ್ಯನವರಿಗೆ ಸ್ವರ್ಗಪ್ರಾಪ್ತಿಯಾಗಲೆಂದು ಯರದಕಟ್ಟೆಯ ಗ್ರಾಮವನ್ನು ಸರ್ವಮಾನ್ಯವಾಗಿ ಕೊಟ್ಟಂತೆ ತಿಳಿಸುತ್ತದೆ."[೨೫]

ಜೋಡಿದಾಸೇನಹಳ್ಳಿಯ ಒಂದು ಶಾಸನದಲ್ಲಿ "ಕಲ್ಯಾಣ ಮಂಟಪದಲ್ಲಿ ಒಂದು ಲಕ್ಷತೊಂಬತ್ತಾರು ಸಾವಿರ ಜಂಗಮರಿಗೆ ದಾಸೋಹವ ಮಾಡಿ ನಿತ್ಯವೂ ಪವಾಡ ನಡೆಸುತ್ತಿರುವ ಕಪ್ಪಡಿಯ ಸಂಗನ ಬಸವರಾಜೇಂದ್ರನ ಉಲ್ಲೇಖವಿದೆ. ಇವರ ಪ್ರಭಾವದಿಂದ ಇಮ್ಮಡಿ ಚಿಕ್ಕಪ್ಪ ಗೌಡನ ಮಗ ಹಿರೇಗೌಡನು ಜೋಡಿದಾಸಿನಾಯಕನ ಹಳ್ಳಿಯನ್ನು ಆ ಬಸವ ಕಲ್ಯಾಣಕ್ಕೆ ಪ್ರತಿಯಾಗಿ ಬೆಳೆಸಬೇಕೆಂದು ಕಲ್ಯಾಣಪುರವೆಂದು ಹೆಸರಿಟ್ಟು ಅನೇಕ ದಾನ ದತ್ತಿ ನೀಡಿದ ವಿವರವಿದೆ."[೨೬] ಮೇಲ್ಕಂಡ ಶಾಸನಗಳನ್ನು ಗಮನಿಸಿದಾಗಿ ಪ್ರಭುತ್ವ ಹಾಗೂ ಮೇಲ್ವರ್ಗಗಳಿಗೆ ಸಂಬಂಧಪಟ್ಟ ಶಾಸನಗಳು ರಚನೆಯಾಗಿರುವುದು ಕಂಡುಬರುತ್ತದೆ. ತಳಸಮುದಾಯಗಳಿಗೆ ಸಂಬಂಧಿಸಿದಂತೆ ಶಾಸನಗಳು ದೊರೆಯುವುದಿಲ್ಲ.

ಒಟ್ಟಾರೆಯಾಗಿ ಹೇಳುವುದಾದರೆ ತುಮಕೂರು ಜಿಲ್ಲೆಯು ತನ್ನದೇ ಆದ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಯನ್ನು ಹೊಂದಿದೆ. ಜನಪದ ಕಾವ್ಯಗಳು, ಶಾಸನಗಳು, ತತ್ವಪದಗಳು ತಳಸಮುದಾಯಗಳ ಚರಿತ್ರೆ ರಚನೆಯಲ್ಲಿ ಪ್ರಮುಖವಾದ ಪಾತ್ರವನ್ನು ವಹಿಸುತ್ತವೆ.

**ಕೊನೆ ಟಿಪ್ಪಣಿಗಳು**

೧. **ಕರ್ನಾಟಕದ ಗಡಿ ತಂಟೆಗಳು,** ನವಯುಗ, ವಾರಪತ್ರಿಕೆ, ೧೯.೧೦.೧೯೬೧

೨. ನಾಗರತ್ನಮ್ಮ ಎಸ್., **ತುಮಕೂರು ಜಿಲ್ಲೆಯಲ್ಲಿ ಸ್ವಾತಂತ್ರ್ಯ ಚಳುವಳಿ,** ದೇಸಿ ಪುಸ್ತಕ, ಬೆಂಗಳೂರು, ೨೦೦೯, ಪು.೭

೩. Mysore state Gazetteer, Tumkur District, 1969, p-1

೪. ಅದೇ, ಪು.೧

೫. ನಾಗರಾಜ ಓ., **ತುಮಕೂರು ಜಿಲ್ಲೆಯ ಗ್ರಾಮದೇವತೆಗಳು,** ಸಿರಾ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೭, ಪು.೯

೬. ಅದೇ, ಪು.೧೪

೭. **ಜಿಲ್ಲಾ ಮಾನವ ಅಭಿವೃದ್ಧಿ ವರದಿ, ತುಮಕೂರು,** ಅಂತರ್ಜಾಲ, ಪು.೨೪೪

೮. ಯೋಗೀಶ್ವರಪ್ಪ ಡಿ.ಎನ್., **ಕಲ್ಪಶೋಧ,** ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨, ಪು.೩

೯. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿಗಳವರ ಕಛೇರಿ, **ತುಮಕೂರು ಜಿಲ್ಲೆ, ಆರ್ಥಿಕ–ಸಾಮಾಜಿಕ ಅವಲೋಕನ,** ತುಮಕೂರು, ೨೦೦೯–೨೦೧೦, ಪು.೨

೧೦. ಯೋಗಿಶ್ವರಪ್ಪ ಡಿ.ಎನ್., **ಕಲ್ಪಶೋಧ,** ಪ್ರಗತಿ ಗ್ರಾಫಿಕ್ಸ್, ಬೆಂಗಳೂರು, ೨೦೧೨, ಪು.೪

೧೧. ಅದೇ, ಪು.೫

೧೨. ರಹಮತ್ ತರೀಕೆರೆ, **ಕರ್ನಾಟಕ ನಾಥಪಂಥ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೫೧

೧೩. ಅದೇ, ಪು.೫೩

೧೪. ಸೋಮು ಭಾಸ್ಕರಾಚಾರ್ (ಪ್ರ.ಸಂ) ಹೊನ್ನಗಾನಹಳ್ಳಿ ಕರಿಯಣ್ಣ (ಸಂ)., **ತುಮಕೂರು ಸಿರಿ, (ಸ್ಮರಣ ಸಂಚಿಕೆ),** ೨೦೧೫, ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು, ಪು.೨೬

೧೫. ಅದೇ, ಪು.೨೯

೧೬. ವಿಜಯ ಕುಮಾರ್ ಎಂ.ಎಚ್., **ಕರ್ನಾಟಕದಲ್ಲಿ ಮರುಳಸಿದ್ಧರ ನೆಲೆಗಳು ಮತ್ತು ಸ್ಮಾರಕಗಳು : ಚಾರಿತ್ರಿಕ ಅಧ್ಯಯನ,** ೨೦೦೮, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೧೯

೧೭. ಅದೇ, ಪು.೯೩

೧೮. ಅದೇ, ಪು.೧೯೯

೧೯. ಯೋಗೀಶ್ವರಪ್ಪ ಡಿ.ಎನ್., **ಕಲ್ಪಶೋಧ,** ಪ್ರಗತಿ ಗ್ರಾಫಿಕ್ಸ್, ೨೦೧೨, ಬೆಂಗಳೂರು, ಪು.೫

೨೦. ಅದೇ, ಪು.೧೪

೨೧. ದಲಿತ ರಾಜನ ಕರಂಕೋಟೆ, ೨೦ ಜುಲೈ ೨೦೧೨, ಪ್ರಜಾವಾಣಿ, ತುಮಕೂರು

೨೨. ಅದೇ, ಪು.

೨೩. ಅದೇ, ಪು.

೨೪. ಅದೇ, ಪು.

೨೫. ಅದೇ, ಪು.

೨೬. ಗುಡಿಹಳ್ಳಿ ನಾಗರಾಜ, ಪ್ರಜಾವಾಣಿ ಅಪರೂಪದ ರಾಜ ಕುರಂಗರಾಯ, ೧೫ ಮಾರ್ಚ್, ೨೦೧೭

೨೭. ದೊಡ್ಡ ತಿಮ್ಮಯ್ಯ, ಕುರಂಕೋಟೆ

೨೮. ದಲಿತ ರಾಜನ ಕುರಂಕೋಟೆ, ೨೦ ಜುಲೈ ೨೦೧೨, ಪ್ರಜಾವಾಣಿ, ತುಮಕೂರು

೨೯. ಚೆನ್ನಸ್ವಾಮಿ ಸೋಸಲೆ ಎನ್., **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩, ಪು.೧೧–೧೨

೩೦. ಚಿಕ್ಕಣ್ಣ ಯಣ್ಣೆಕಟ್ಟೆ (ಲೇ), **ತಳಸಮುದಾಯದ ಸ್ವಾತಂತ್ರ್ಯ ಹೋರಾಟಗಾರರು,** ಇಂದ್ರಕುಮಾರ್ (ಸಂ)., ಸ್ವಾತಂತ್ರ್ಯ ಚೌಕ ಸ್ವಾತಂತ್ರ್ಯ ಹೋರಾಟಗಾರ ಟಿ.ಆರ್.ರೇವಣ್ಣ ಅವರ ಅಭಿನಂದನ ಗ್ರಂಥ, ಭಾರತೀಯ ಜನ ಕಲಾ ಸಮಿತಿ, ತುಮಕೂರು, ೨೦೧೩, ಪು.೧೪೫

೩೧. ಶ್ರೀನಿವಾಸ ಎಲ್., **ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿ ಅವರ ರಚನಾತ್ಮಕ ಕಾರ್ಯಕ್ರಮಗಳು,** ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩, ಪು.೫೬

೩೨. ವೀಣಾಕುಮಾರಿ ಡಿ.ಎಂ., **ಶಿಕ್ಷಣತಜ್ಞ ಡಾ.ಹೆಚ್.ಎಂ.ಗಂಗಾಧರಯ್ಯ ಅವರ ಜೀವನ ಮತ್ತು ಸಾಧನೆ,** ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೩೩. ಶ್ರೀನಿವಾಸ ಎಲ್., **ತುಮಕೂರು ಜಿಲ್ಲೆಯಲ್ಲಿ ಗಾಂಧೀಜಿ ಅವರ ರಚನಾತ್ಮಕ ಕಾರ್ಯಕ್ರಮಗಳು,** ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೩, ಪು.೫೭

೩೪. ಅದೇ, ಪು.೫೭

೩೫. ಅದೇ, ಪು.೫೮

೩೬. ಅದೇ, ಪು.೩೪

೩೭. **ಬಾಬಾಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು,** ೨೦೧೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೮

೩೮. ಅದೇ, ಪು.೯

೩೯. ಚಿದಾನಂದಮೂರ್ತಿ ಎಂ., ೨೦೧೧, **ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ,** ಸಪ್ನ ಬುಕ್‌ಹೌಸ್, ಬೆಂಗಳೂರು ಪು.೧೧

೪೦ ಅದೇ, ಪು.೧೧

೪೧. ಅದೇ, ಪು.೧೧

೪೨. ಶರ್ಮ ಆರ್.ಎಸ್., ೨೦೦೯, **ಪ್ರಾಚೀನ ಭಾರತದಲ್ಲಿ ಶೂದ್ರರು,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು.೭೧

೪೩. ದೇವರಾಜ ಓ., ೨೦೧೩, **ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ದಲಿತರು,** ಪಲ್ಲವ ಪ್ರಕಾಶನ, ಚನ್ನಪಟ್ಟಣ, ಪು.೩೨

೪೪. ಅದೇ, ಪು.೩೩

೪೫. ಚಿನ್ನಸ್ವಾಮಿ ಸೋಸಲೆ ಎನ್., ೨೦೧೨, **ದಲಿತರ ಬದುಕು-ಮೆಲುಕು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೪

೪೬. ವಿಜಯ್ ಪೂಣಚ್ಚ ತಂಬಂಡ, ೨೦೦೪, **ಪಳಮೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩

೪೭. ಮೀರಾಸಾಬಿಹಳ್ಳಿ ಶಿವಣ್ಣ, ಶಂಕರನಾರಾಯಣ ತೀ.ನಂ.(ಸಂ), ೧೯೯೮, **ಜುಂಜಪ್ಪನ ಕಾವ್ಯ: ಒಂದು ನೋಟ,** ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು.೬೮

೪೮. ಮೂಡ್ಲಪ್ಪ, ದೊಡ್ಡ ಅಗ್ರಹಾರ, ಗೊಲ್ಲರ ಹಟ್ಟಿ, ಕಾಡುಗೊಲ್ಲ ಸಮುದಾಯ, ವಯಸ್ಸು ೫

೪೯. ಮೀರಾಸಾಬಿಹಳ್ಳಿ ಶಿವಣ್ಣ, ಶಂಕರನಾರಾಯಣ ತೀ.ನಂ.(ಸಂ), ೧೯೯೮, **ಜುಂಜಪ್ಪನ ಕಾವ್ಯ: ಒಂದು ನೋಟ,** ಕರ್ನಾಟಕ ಜನಪದ ಮಹಾಕಾವ್ಯಗಳು, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ, ಬೆಂಗಳೂರು, ಪು.೮೦

೫೦. ಪರಮಶಿವಯ್ಯ ಜೀ.ಶಂ., ೨೦೧೬, **ದಕ್ಷಿಣ ಕರ್ನಾಟಕ ಜನಪದ ಕಾವ್ಯ ಪ್ರಕಾರಗಳು,** ಅಭಿನವ ಪ್ರಕಾಶನ, ಬೆಂಗಳೂರು, ಪು.೨೭೭

೫೧. ಚಲುವರಾಜು(ಸಂ), ೧೯೯೭, **ಜುಂಜಪ್ಪ ಬುಡಕಟ್ಟು ಮಹಾಕಾವ್ಯ ಮಾಲೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ

೫೨. ಅಜ್ಜಯ್ಯ ಹೆಚ್., ಅಂಜನಪ್ಪ ಬಿ.ಹೆಚ್.(ಲೇ), ೨೦೧೩, **ಕಾಡುಗೊಲ್ಲ ಸಮುದಾಯ– ಪೌಷ್ಠಿಕತೆ ಮತ್ತು ಆರೋಗ್ಯ, ಶೋಧ,** ಪು.೧೨

೫೩. ಗುರುಲಿಂಗಯ್ಯ ಎಂ., ನಾಗಪ್ಪ ವಿ., ೨೦೦೮, **ಕಾಡುಗೊಲ್ಲ, ಅಲೆಮಾರಿ ಸಮುದಾಯ ಗಳ ಅಧ್ಯಯನ ಮಾಲೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು.೧೪೫.

೫೪. ಅದೇ, ಪು.೭೧

೫೫. ಕೃಷ್ಣಮೂರ್ತಿ ಹನೂರು, ಜುಲೈ ೨೭, ೨೦೧೫, **ಅಭಿವೃದ್ಧಿಗೆ ಬೇಕು ಅಂತಃಕರಣ,** ಪ್ರಜಾವಾಣಿ.

೫೬. ವಕ್ತೃಗಳು, ಶಂಭೋನಹಳ್ಳಿ ಗೊಲ್ಲರಹಟ್ಟಿ.

೫೭. ವೀರಣ್ಣ, ಬಿಸಾಡಿಹಟ್ಟಿ.

೫೮. **ಗೊಲ್ಲ ಮಹಿಳೆಯರ ಬದುಕಿಗೆ ಶಕ್ತಿ ಕೊಟ್ಟ ಗಟ್ಟಿಗಿತ್ತಿ,** ಅಕ್ಟೋಬರ್ ೨೭, ೨೦೧೫, ಪ್ರಜಾವಾಣಿ.

೫೯. ಅದೇ, ಪು.

೬೦. ಅದೇ, ಪು.

೬೧. ಅದೇ, ಪು.

೬೨. ವೀರಣ್ಣ, ಬಿಸಾಡಿಹಟ್ಟಿ.

೬೩. ನಟರಾಜ್ ಬೂದಾಳ್, ೨೦೧೧, **ತುಮಕೂರು ಮತ್ತು ಚಿತ್ರದುರ್ಗ ಜಿಲ್ಲೆಯ ತತ್ವಪದಕಾರರು,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು, ಪು.೪

೬೪. ನರಸಿಂಹಮೂರ್ತಿ ಎಂ.ಸಿ., **ತತ್ವಪದಕಾರರು,** ಮಿಡಿಗೇಶಿ.

೬೫. ನಾಗರಾಜು ಓ., ೨೦೧೫, **ಅರಿವಿನ/ಲಯದೊಳಗೆ,** ಶಶಾಂಕ ಪ್ರಕಾಶನ, ತುಮಕೂರು, ಪು.೩೫

೬೬. ನಟರಾಜ ಬೂದಾಳು ಎಸ್.(ಲೇ.), ೨೦೧೭, ರಮಾಕುಮಾರಿ ಬಾ.ಹ.(ಪ್ರಸಂ.), **ನೆಲಗಡಲೆ,** ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು, ಪು.೧೦

೬೭. ಶ್ರೀಪಾದ ಭಟ್, ಪುಟ್ಟರಾಜು ಎಲ್.(ಲೇ.), ೨೦೧೧, **ತುಮಕೂರು ಜಿಲ್ಲೆಯ ಸ್ಥಳನಾಮಗಳು,** ತುಮಕೂರು ವಿಶ್ವವಿದ್ಯಾನಿಲಯ, ತುಮಕೂರು, ಪು.೨೫-೨೬.

೬೮. ಅದೇ, ಪು.೩೭

೬೯. ಅದೇ, ಪು.೬೪

೭೦. ಅದೇ, ಪು.೬೮

೭೧. ಅದೇ, ಪು.೮೪

೭೨. ಅದೇ, ಪು.೧೫೪

೭೩. ಚಿದಾನಂದಮೂರ್ತಿ ಎಂ., ೨೦೧೧, **ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ,** ಸ್ವಪ್ನ ಬುಕ್ ಹೌಸ್, ಬೆಂಗಳೂರು, ಪು.೩೫

೭೪. ಅದೇ, ಪು.೩೫

೭೫. ನಂದೀಶ್ವರ ಎನ್., ೨೦೦೮, **ಸಿರಾ ತಾಲ್ಲೂಕಿನ ಸ್ಮಾರಕಗಳು ಹಾಗೂ ಶಾಸನಗಳು,** ಪೂರ್ಣಚಂದ್ರ ತೇಜಸ್ವಿ ಪ್ರಕಾಶನ, ಸಿರಾ, ಪು.೨೭೧

೭೬. ಪರಮಶಿವಮೂರ್ತಿ ಡಿ.ವಿ.(ಲೇ.), **ತುಮಕೂರು ಜಿಲ್ಲಾ ಶಾಸನ ಸಮೀಕ್ಷೆ,** ೨೦೦೨, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೫೮.

# ಅಧ್ಯಾಯ ಮೂರು

## ಭಾರತೀಯ ಸಾಮಾಜಿಕ ವ್ಯವಸ್ಥೆ

೩.೧. ಅಸ್ಪೃಶ್ಯತೆಯ ಮೂಲ
೩.೨. ತಳಸಮುದಾಯಗಳ ಮೇಲಾಗುತ್ತಿರುವ ದೌರ್ಜನ್ಯಗಳು
೩.೩. ತಳಸಮುದಾಯದ ಮಹಿಳೆ

## ಅಧ್ಯಾಯ: ಮೂರು

# ಭಾರತೀಯ ಸಾಮಾಜಿಕ ವ್ಯವಸ್ಥೆ

ಭಾರತೀಯ ಸಮಾಜ ನಿಂತಿರುವುದು ಜಾತಿಯ ಆಧಾರದಲ್ಲಿ; ಜಾತಿಯನ್ನು ಹೊರತುಪಡಿಸಿ ಭಾರತೀಯ ಸಮಾಜವನ್ನು ನೋಡುವುದಕ್ಕೆ ಸಾಧ್ಯವೇ ಇಲ್ಲ. ಇದು ಸಾಮಾಜಿಕ ವ್ಯವಸ್ಥೆಗೆ ಅಡಿಪಾಯವಷ್ಟೇ ಅಲ್ಲ, ಸಾಮಾಜಿಕ ಸಂಸ್ಥೆಯಾಗಿ ಪ್ರಬಲವಾಗಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ಮುಂದುವರಿಯುತ್ತಿದೆ. ಜಾತಿ ಎಂದರೆ ಆಳುವ ವರ್ಗಗಳ ಶ್ರಮ ಶೋಷಣೆಗೆ ನಿರ್ಮಿಸಿಕೊಂಡ ಕೆಟ್ಟ ವ್ಯವಸ್ಥೆ ಎನ್ನಬಹುದು. ಅದು ಭಾರತೀಯ ಸಮಾಜದ ಒಂದು ಕಟು ವಾಸ್ತವ. ಅದರ ಸಂಕೀರ್ಣತೆ ಎಷ್ಟೆಂದರೆ ಅದರ ಅಸ್ತಿತ್ವವನ್ನು ಅಲ್ಲಗಳೆಯುವಾಗಲೂ ಅದರೊಳಗೇ ಇರುವ ಸಾಧ್ಯತೆ ಇದೆ. ಲುಯಿ ಡ್ಯುಮೊಂಟ್ ತನ್ನ ಹೊಮೊ ಹೈರಾರ್ಕಸ್ (ಮಾನವ ಶ್ರೇಣಿ) ಎಂಬ ಕೃತಿಯಲ್ಲಿ ಜಾತಿಯನ್ನು ಕುರಿತು ಈ ಕೆಳಗಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಜಾತಿಗಳೊಳಗಿನ ಮೇಲು-ಕೀಳು ಅಂತಸ್ತುಗಳ ತತ್ವವು ಜಾತಿ ವ್ಯವಸ್ಥೆಯ ತಿರಳೂ ಹೃದಯವೂ ಆಗಿದೆ. ಅದಿಲ್ಲದಿದ್ದರೆ ಜಾತಿ ವ್ಯವಸ್ಥೆಯೇ ಇರಲಾರದು"[೧] ಜಾತಿ ವ್ಯವಸ್ಥೆಯೊಳಗಿನ ಶ್ರೇಣಿಕರಣವು ಅಧಿಕಾರವನ್ನಾಗಲೀ ಐಶ್ವರ್ಯವನ್ನಾಗಲೀ, ಹೊಂದಿಕೊಂಡಿಲ್ಲ ಎಂಬುದನ್ನು ತಿಳಿಯಬಹುದಾಗಿದೆ.

ಸಮಾಜದಲ್ಲಿ ಜಾತಿ ನಿರ್ಮೂಲನದ ಪ್ರಯತ್ನವು ಹಲವು ರೀತಿಗಳಲ್ಲಿ ನಡೆಯುತ್ತಿದ್ದರೂ ಜಾತಿಯು ಹೆಚ್ಚು ಹೆಚ್ಚು ಅಸಹ್ಯಕರ ರೀತಿಯಲ್ಲಿ ತಲೆಯೆತ್ತುತ್ತಿದೆ. ಸಂಘಟಿತಗೊಳ್ಳುತ್ತಿದೆ. ಮತ್ತು ಬೇರೂರುತ್ತಿದೆ. ಸಮಾಜದಲ್ಲಿ ಸದಾ ಜಾಗೃತವಾಗಿರುವ ಮತ್ತು ತಿಳಿದು ತಿಳಿಯದಂತೆ ಬಲಗೊಂಡಿರುವ ಜಾತಿ ಪ್ರಜ್ಞೆಯು ಕೌಟುಂಬಿಕ ನೆಲೆಗಳಿಗೆ ಸೀಮಿತಗೊಳ್ಳದೆ ರಾಜಕೀಯ ರಂಗವನ್ನೂ ವ್ಯಾಪಿಸಿದೆ. ಇಂದಿನ ಭಾರತದ ಚರಿತ್ರೆಗೆ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ವೇದಿಕೆ ನಿರ್ಮಿಸಿದವರು ಹಾಗೂ ಭಾರತದ ನಿಜವಾದ ಕಪ್ಪು ಚರಿತ್ರೆಗೆ ಮುನ್ನುಡಿ ಬರೆದವರು ಡಾ.ಬಿ.ಆರ್. ಅಂಬೇಡ್ಕರ್. "ಅಸ್ಪೃಶ್ಯತೆಯು ಅಸ್ಪೃಶ್ಯರಿಗೆ ಶಾಶ್ವತವಾಗಿ ಅಂಟಿದ ಶಾಪ.

ಅವರನ್ನು ಮುಟ್ಟಿದರೆ ಹಿಂದೂಗಳು ಶುಚಿಗೊಳಿಸುವ ಕ್ರಿಯಾ ವಿಧಿಗಳ ಮೂಲಕ ಶುದ್ಧವಾಗಬಹುದು. ಆದರೆ ಅಸ್ಪೃಶ್ಯರನ್ನು ಶುದ್ಧಗೊಳಿಸುವಂತಹದು ಯಾವುದು ಇಲ್ಲ."[೨] ಎಂದು ಅವರು ಹೇಳಿದ ಮಾತು ಭಾರತದ ಸಾಮಾಜಿಕ ಸಂರಚನೆಗೆ ಹಿಡಿದ ಕನ್ನಡಿಯಾಗಿದೆ. ಭಾರತದ ಜಾತಿ ವ್ಯವಸ್ಥೆಯ ಕಠೋರ ಸತ್ಯಗಳನ್ನು ಅತ್ಯಂತ ನಿಷ್ಠುರವಾಗಿ ಜಗತ್ತಿನ ಮುಂದೆ ಬಿಡಿಸಿಟ್ಟವರು ಡಾ.ಬಿ.ಆರ್.ಅಂಬೇಡ್ಕರ್ ಜಾತಿ ವ್ಯವಸ್ಥೆ ಬಗ್ಗೆ ಅವರ ಆಯ್ದು ಅಭಿಪ್ರಾಯಗಳನ್ನು ಗಮನಿಸಬೇಕು.

"ಜಾತಿಯಿಂದ ಹಿಂದೂಗಳ ನೀತಿ ಶೋಚನೀಯ ಅವಸ್ಥೆಗೆ ಮುಟ್ಟಿದೆ. ಜಾತಿ ಸಾರ್ವಜನಿಕ ಭಾವನೆಯನ್ನು ನಾಶಗೊಳಿಸಿದೆ; ಹೃದಯ ವೈಶಾಲ್ಯ ಹಾಳು ಮಾಡಿದೆ, ಸಾರ್ವಜನಿಕ ಅಭಿಪ್ರಾಯಗಳಿಗೆ ಅವಕಾಶವಿಲ್ಲದಂತೆ ಮಾಡಿದೆ. ಹಿಂದೂವಿನ ಸಮಾಜ ಹಾಗೂ ಹೊಣೆಗಾರಿಕೆ ಅವರ ಜಾತಿಗೆ ಸೀಮಿತ. ಅವರ ನಿಷ್ಠೆ ಜಾತಿಗೆ ಪರಿಮಿತವಾಗಿದೆ. ಸದ್ಗುಣ ಹಾಗೂ ನೀತಿ ಎರಡು ಜಾತೀಯತೆಯ ಮುಷ್ಠಿಯಲ್ಲಿ ಸಿಕ್ಕಿಕೊಂಡಿವೆ. ಸಹಾನು ಭೂತಿ ಯಾರಿಗೆ ಅವಶ್ಯವೋ ಅವರಿಗೆ ಅದು ಸಿಕ್ಕುತ್ತಿಲ್ಲ.

ಸಹಾನುಭೂತಿ ತಮ್ಮ ಜಾತಿ ಅವರಿಗೆ ಮಾತ್ರ ಉಂಟು, ಇತರರಿಗೆ ಇಲ್ಲ. ಮುಂದಾ ಳೆಂದು ಒಪ್ಪಿಕೊಳ್ಳಬೇಕಾದರೆ ಅವರು ತಮ್ಮ ಜಾತಿಯವನೇ ಆಗಿರತಕ್ಕದ್ದು. ಮುಂದಾಳು ಬ್ರಾಹ್ಮಣರಾಗಿದ್ದರೆ ಮಾತ್ರ ಬ್ರಾಹ್ಮಣರು ಅವರ ಅನುಯಾಯಿಯಾಗುತ್ತಾರೆ. ಕ್ಷತ್ರಿಯರು ಮುಂದಾಳಾದರೆ ಮಾತ್ರ ಕ್ಷತ್ರಿಯರು ಅವರ ಅನುಯಾಯಿಯಾಗುತ್ತಾರೆ. ಇತರ ಜಾತಿಗಳಿಗೂ ಈ ಮಾತು ಹೀಗೆಯೇ ಅನ್ವಯಿಸುತ್ತದೆ. ಒಬ್ಬ ಮನುಷ್ಯನ ಜಾತಿ ಯಾವುದೇ ಇರಲಿ, ಅವರ ಯೋಗ್ಯತೆಯನ್ನು ಮನ್ನಿಸಬೇಕೆಂಬ ಬುದ್ಧಿ ಅಥವಾ ಹಾಗೆ ಮಾಡುವ ಧೈರ್ಯ ಹಿಂದೂವಿಗೆ ಇಲ್ಲ. ತಮ್ಮ ಜಾತಿಯವರಾದರೆ ಮಾತ್ರ ಅವರನ್ನು ಮನ್ನಿಸುತ್ತಾರೆ. ಅನಾಗರಿಕ ಜನರ ಗುಂಪಿನ ನೀತಿ ಎಷ್ಟು ಸಂಕುಚಿತವೋ ಅಷ್ಟು ಸಂಕುಚಿತವಾಗಿದೆ ಜಾತಿಯ ನೀತಿ. ಹೀಗೆ ತಮ್ಮ ಜಾತಿಯ ಹಿತವನ್ನೇ ನೋಡಿಕೊಳ್ಳುತ್ತ ಹಿಂದೂಗಳು ದೇಶಕ್ಕೆ ದ್ರೋಹ ಬಗೆದಿಲ್ಲವೆ? ಶ್ರಮ ವಿಭಾಗವು ಪ್ರತಿಯೊಂದು ಸುಧಾರಿತ ಸಮಾಜದ ಅವಶ್ಯ ಲಕ್ಷಣ ವಾಗಿರುವಾಗ ಜಾತಿ ಪದ್ಧತಿಯಿದ್ದರೇನೂ ದೋಷವಿರುವುದಿಲ್ಲವೆಂದೂ ಕೆಲವರು ವಾದಿಸುತ್ತಾರೆ. ಆದರೆ ಜಾತಿ ಪದ್ಧತಿ ಕೇವಲ ಶ್ರಮ ವಿಭಾಗವಾಗಿರದೆ, ಶ್ರಮಜೀವಿಗಳ ವಿಭಾಗವೂ ಆಗಿದೆ. ಸುಧಾರಿತ ಸಮಾಜಕ್ಕೆ ಶ್ರಮ ವಿಭಾಗ ಅವಶ್ಯವೆಂಬುದು ನಿರ್ವಿವಾದ. ಆದರೆ ಶ್ರಮ ವಿಭಾಗದಿಂದ ಶ್ರಮಿಕವರ್ಗಗಳೂ ಒಂದಕ್ಕೊಂದು ಸೇರದಂತೆ ಪ್ರತ್ಯೇಕವಾಗಿ ವಿಭಾಗವಾಗುವುದು ಯಾವ ಸುಧಾರಿತ ಸಮಾಜದಲ್ಲಿಯೂ ಕಾಣದು. ಜಾತಿ ಪದ್ಧತಿ ಶ್ರಮಿಕರ ವಿಭಾಗ ಮಾತ್ರವಲ್ಲ

ಅದರಲ್ಲಿ ವಿಭಾಗಗೊಂಡ ವರ್ಗಗಳು ಮೇಲುವರ್ಗ, ಕೆಳವರ್ಗ, ಅದಕ್ಕೂ ಕೆಳಗಿನ ವರ್ಗ ಹೀಗೆ ಒಂದು ನೀಚೋಚ್ಚ ಶ್ರೇಣಿಯನ್ನು ಹೊಂದಿದೆ. ಈ ಶ್ರಮ ವಿಭಾಗ ಸಹಜವಾದುದಲ್ಲ. ವ್ಯಕ್ತಿಗಳ ಸಾಮರ್ಥ್ಯ ಅಥವಾ ಯೋಗ್ಯತೆಯನ್ನು ಅದು ಆಧರಿಸಿಲ್ಲ."[೩]

ಜಾತಿಯನ್ನು ಒಂದು ವ್ಯವಸ್ಥೆಯಾಗಿ, ಮನಸ್ಥಿತಿಯಾಗಿ ಗ್ರಹಿಸಿದ ರಾಮ ಮನೋಹರ ಲೋಹಿಯಾ ಅವರ ಮುಖ್ಯ ಗ್ರಹಿಕೆಗಳು ಈ ಕೆಳಗಿನಂತಿವೆ. "ಜಾತಿ ಪದ್ಧತಿಯಿಂದಾಗಿ ದೀರ್ಘಕಾಲ ಭಾರತ ಮೂರ್ಛಾವಸ್ಥೆಯಲ್ಲಿದೆ. ಕಾರಣ ಜಾತಿ ಪದ್ಧತಿ ಯಥಾಸ್ಥಿತಿವಾದವನ್ನು, ಸಾಮಾಜಿಕ ಜಡತೆಯನ್ನು ಪೋಷಿಸುತ್ತದೆ. ಬದಲಾವಣೆಯನ್ನು ವಿರೋಧಿಸುತ್ತದೆ. ಕೆಲವರಿಗೆ ಜಾತಿ ಪದ್ಧತಿ ಯಾವುದೇ ನಿಯಮಿತ ಕಂತುಗಳಿಲ್ಲದ ಇನ್‌ಷೂರೆನ್ಸ್ ಆಗಿಬಿಟ್ಟಿದೆ. ಜಾತಿ ವ್ಯವಸ್ಥೆ ಎಂದರೆ ಕೆಲವೇ ಮೇಲುಜಾತಿಗಳು ಹಾಗೂ ಕೋಟಿಗಟ್ಟಲೆ ಕೆಳಜಾತಿಗಳ ನಡುವಣ ಅಂತರ. ಮೇಲುಜಾತಿಗಳು ಭಾಷೆ, ವೇಷ, ನಡವಳಿಕೆಗಳ ಮೂಲಕ ಕೆಳಜಾತಿಗಳಲ್ಲಿ ಕೀಳರಿಮೆ ಬಿತ್ತಿ ಅವರ ಮೇಲೆ ಧಾರ್ಮಿಕ, ರಾಜಕೀಯ, ಆರ್ಥಿಕ ಆಳ್ವಿಕೆ ನಡೆಸುತ್ತಿವೆ. ಜೊತೆಗೆ ಕೆಳಜಾತಿಗಳ ಹೀನಸ್ಥಿತಿಯನ್ನು ಸಮರ್ಥಿಸುವ ಪುರಾಣಗಳು ಹಾಗೂ ಕಟ್ಟು ಕತೆಗಳನ್ನೂ ಹರಡಲಾಗಿದೆ.

ಭಾರತ ವಿದೇಶಿ ಸೈನ್ಯಗಳ ಕೈಯಲ್ಲಿ ಸೋಲನ್ನು ಅನುಭವಿಸಿದ್ದಕ್ಕೆ ಜಾತಿಯೇ ಮುಖ್ಯ ಕಾರಣ. ಸಾಮಾನ್ಯರು ನಿರ್ಜೀವವಾಗಿರುವುದು, ಉಳ್ಳವರು ವಂಚಕರಾಗಿರುವುದು ಕೂಡ ಜಾತಿಯಿಂದ. ಬಹುಕಾಲದ ಸೈದ್ಧಾಂತಿಕ ಗುಲಾಮಗಿರಿಯಿಂದಾಗಿ ಕೆಳ ಜಾತಿಗಳು ರಾಜಕೀಯವಾಗಿ ಜಡವಾಗಿವೆ. ಜಾತಿಯ ಕ್ರಮ ಯಾವ ವಿಷಾದವೂ ಇಲ್ಲದೆ ಸುತ್ತುತ್ತಿರುತ್ತದೆ. ಕೋಟಿಗಟ್ಟಲೆ ಕೆಳಜಾತಿಗಳನ್ನು ಅರೆಯುತ್ತಿರುತ್ತದೆ. ಜಾತಿಯು ದೇಶವನ್ನು ನಿತ್ರಾಣಗೊಳಿಸಿದೆ ಹಾಗೂ ಅದರಿಂದ ಸಮಾಜದ ಒಟ್ಟು ಮೌಲ್ಯಮಾಪನವೇ ಕೆಟ್ಟು ಹೋಗಿದೆ. ಹೀಗಾಗಿ ಭಾರತದ ಪ್ರತಿ ಹತ್ತರಲ್ಲಿ ಒಂಬತ್ತು ಜನ ಮೌನವಾಗಿದ್ದಾರೆ. ಭಾರತದಲ್ಲಿ ನಡೆ-ನುಡಿಗಳ ಅಂತರ ಸೃಷ್ಟಿಯಾಗಲು ಜಾತಿ ಪದ್ಧತಿ ಮೂಲ ಕಾರಣ. ಜಾತಿ ಪದ್ಧತಿಯನ್ನು ಪೋಷಿಸುವ ಭಾರತದ ಹಳ್ಳಿ ಭೂಮಿಯ ಮೇಲಿನ ಅತಿ ಕೊಳಕು ಪ್ರದೇಶವಾಗಿ ಉಳಿದಿದೆ. ಚಮ್ಮಾರರ ಹಟ್ಟಿಗಳು ಭಯಾನಕವಾದ ಕಾನ್ಸೆಂಟ್ರೇಶನ್ ಕ್ಯಾಂಪುಗಳಂತಿವೆ. ಇತ್ತ ನಗರದಲ್ಲಿ ಸಾರ್ವಜನಿಕ ಹಾಗೂ ಖಾಸಗಿ ವಲಯಗಳು ಹಳೆಯ ಜಾತಿ ಪದ್ಧತಿಯ ಎರಕದಲ್ಲೇ ಇವೆ.

ವರ್ಗ ಎಂದರೆ ಚಲನೆಯ ಸಾಧ್ಯತೆಯುಳ್ಳ ಜಾತಿ: ಜಾತಿ ಎಂದರೆ ಚಲನೆಯಿಲ್ಲದ ವರ್ಗ ಎಂದ ಲೋಹಿಯಾ ಭಾರತದಲ್ಲಿ ವರ್ಗವು ಜಾತಿಯಾಗಿ ಹೆಪ್ಪುಗಟ್ಟುವುದನ್ನು ಗುರುತಿಸಿದರು. ಜಾತಿಗೂ-ವರ್ಗಕ್ಕೂ ಇರುವ ಮುಖ್ಯ ವ್ಯತ್ಯಾಸವೆಂದರೆ, ಅಂತಸ್ತಿನಲ್ಲಾಗಲೀ,

ಆದಾಯದಲ್ಲಾಗಲೀ ಮೇಲಕ್ಕೇರಲು ಇಡೀ ಜಾತಿಯೊಂದಕ್ಕೆ ಚಲನೆ ಅಸಾಧ್ಯವಾದ ಸ್ಥಿತಿ. ಶೂದ್ರರ, ದಲಿತರ ಹಾಗೂ ಸ್ತ್ರೀಯರ ಚೈತನ್ಯವನ್ನು ಹುರುಪುಗೊಳಿಸದಿದ್ದರೆ ಈ ದೇಶಕ್ಕೆ ಹೊಸ ಜೀವ ತುಂಬಲಾಗದು. ಜಾತಿಯ ಸಂಕೇತಗಳನ್ನು ನಾಶ ಮಾಡಬೇಕು."[೪]

ರಾಷ್ಟ್ರಪತಿ ಬಾಬು ರಾಜೇಂದ್ರ ಪ್ರಸಾದರು ಕಾಶಿಯಲ್ಲಿ ಬ್ರಾಹ್ಮಣರ ಕಾಲುಗಳನ್ನು ತೊಳೆದ ವಿಚಾರವನ್ನು ವಿರೋಧಿಸಿ "ಬ್ರಾಹ್ಮಣರ ಕಾಲುಗಳನ್ನು ಸಾರ್ವಜನಿಕವಾಗಿ ತೊಳೆಯುವ ಕೈಗಳು ಶೂದ್ರರನ್ನು ದಲಿತರನ್ನೂ ಒದೆಯಬಲ್ಲ ಕಾಲುಗಳ ಜೊತೆಗೇ ಇರುತ್ತವೆ"[೫] ಎಂದು ರಾಮ ಮನೋಹರ ಲೋಹಿಯಾ ಹೇಳಿದ್ದರು. ಲೋಹಿಯ ಅವರ ವಾದಕ್ಕೂ, ಚಿನ್ನಸ್ವಾಮಿ ಸೋಸಲೆ ಅವರ ವಾದಕ್ಕೂ ಸಾಮ್ಯತೆ ಇರುವುದನ್ನು ಗುರುತಿಸ ಬಹುದು. ಇವರ ಪ್ರಕಾರ "ಜಾತಿಗೆ ಚಲನೆ ಇಲ್ಲ, ವರ್ಗಕ್ಕೆ ಚಲನೆ ಇದೆ."[೬] ವರ್ಗದ ಚಲನೆ ಎಂದರೆ ಬಡವ ಶ್ರೀಮಂತನಾಗಬಹುದು. ಅವಿದ್ಯಾವಂತ ವಿದ್ಯಾವಂತನಾಗಬಹುದು, ಜಮೀನ್ದಾರ ಭೂಹೀನನಾಗಬಹುದು, ಭೂ ಹೀನ ಜಮೀನ್ದಾರನಾಗಬಹುದು. ಆದರೆ ಇವರು ಬದಲಾಗುವುದು ವರ್ಗದಿಂದ ಮಾತ್ರ ಜಾತಿಯಿಂದಲ್ಲ.

ಲೋಹಿಯಾ ಮತ್ತು ಅಂಬೇಡ್ಕರ್ ಅವರು ಸಾಮಾಜಿಕವಾಗಿ ಇಬ್ಬರು ಭಿನ್ನಭಿನ್ನ ನೆಲೆಯಿಂದ ಬಂದವರು. ಆಧುನಿಕ ಯುಗದಲ್ಲೂ ಚಾಲ್ತಿಯಲ್ಲಿರುವ ಜಾತಿ ಪದ್ಧತಿಯ ಕ್ರೂರ ವ್ಯವಸ್ಥೆಗೆ ಬಲಿಯಾದವರು ಅಂಬೇಡ್ಕರ್. ಜಾತಿ ಪದ್ಧತಿಯ ಅವಮಾನ, ಅಪಮಾನ, ಯಾವುದೇ ರೀತಿಯ ಮಾನಸಿಕ ಯಾತನೆಯ ಅನುಭವ ಲೋಹಿಯಾ ಅವರಿಗಿರಲಿಲ್ಲ. ಜಾತಿಗಳು ಹಾಗೂ ಜಾತಿ ಪದ್ಧತಿ ಇವುಗಳ ನಡುವೆ ಲೋಹಿಯಾ ವ್ಯತ್ಯಾಸವನ್ನು ಪರಿಗಣಿ ಸಲಿಲ್ಲ. ಆದರೆ ಇವುಗಳ ನಡುವಣ ವ್ಯತ್ಯಾಸ ಅಂಬೇಡ್ಕರ್ ಅವರ ವಿಶ್ಲೇಷಣೆಯ ಮೂಲದಲ್ಲಿತ್ತು. ಜಾತಿಗಳು ಹಾಗೂ ಜಾತಿ ಪದ್ಧತಿಗಳು ಹೇಗೆ ಹುಟ್ಟಿದವು ಎಂಬ ಬಗ್ಗೆ ಕೂಡ ಅಂಬೇಡ್ಕರ್ ಹಾಗೂ ಲೋಹಿಯಾ ಅವರ ವಿಚಾರಗಳಲ್ಲಿ ಭಿನ್ನತೆ ಇತ್ತು.

ಜಾತಿ ವ್ಯವಸ್ಥೆಯನ್ನು ಒಪ್ಪಿದ್ದ ಮತ್ತು ನಂಬಿದ್ದ ಗಾಂಧೀಜಿ ಅವರು, ಅದರ ಜತೆ ಯಲ್ಲಿಯೇ ಅಸ್ಪೃಶ್ಯತೆಯ ನಿರ್ಮೂಲನೆ ಆಗಬೇಕೆಂದು ಬಯಸಿದ್ದರು. ಜಾತಿ ಬಗ್ಗೆ ಅವರು ವ್ಯಕ್ತಪಡಿಸಿದ್ದ ಅಭಿಪ್ರಾಯಗಳು ಹೀಗಿವೆ.

"ಜಾತಿ ಪದ್ಧತಿಯನ್ನು ಉಳಿಸಿಕೊಳ್ಳುವುದರಿಂದ ಭಾರತ ನಾಶವಾಗಲಿದೆ. ಜಾತಿ ಪದ್ಧತಿ ಹಿಂದೂ ಧರ್ಮವನ್ನು ಉಳಿಸಿದೆ. ಜಾತಿ ಎನ್ನುವುದು ಹಾನಿಕಾರಕ ಸಂಸ್ಥೆ ಎನ್ನುವುದನ್ನು ನಾನು ಒಪ್ಪುವುದಿಲ್ಲ ಮೂಲದಲ್ಲಿ ಜಾತಿ ಎನ್ನುವುದು ಹಲವಾರು ನಂಬಿಕೆಗಳನ್ನು

ಇದುವರೆಗೆ ಅಧ್ಯಯನ ಮಾಡಿದ ಕೃತಿಗಳಲ್ಲಿ ನಾಲ್ಕು ವರ್ಣಗಳಿದ್ದವು ಎಂದು ಉಲ್ಲೇಖ ಮಾಡಿರುವುದನ್ನು ಗಮನಿಸಬಹುದಾಗಿದೆ. ಇದಕ್ಕೆ ಭಿನ್ನವಾದ ನಿಲುವನ್ನು ಚಿನ್ನಸ್ವಾಮಿ ಸೋಸಲೆ ಅವರು 'ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು' ಕೃತಿಯಲ್ಲಿ ಚರ್ಚಿಸಿದ್ದಾರೆ. ಅವರ ಪ್ರಕಾರ "ಅಂಬೇಡ್ಕರ್ ಅವರು ಪ್ರಾರಂಭದಲ್ಲಿ ಇಂಡೋ-ಆರ್ಯನ್ ಸಮಾಜದಲ್ಲಿ ಕೇವಲ ಮೂರು ವರ್ಣಗಳು ಇದ್ದವೆಂದು ವಾದಿಸುತ್ತಾರೆ. ಶೂದ್ರರು ಪ್ರತ್ಯೇಕ ವರ್ಣವಾಗಿರದೆ ಕ್ಷತ್ರಿಯ ವರ್ಣದ ಒಂದು ಭಾಗವಾಗಿದ್ದರು."[೮] ಬ್ರಾಹ್ಮಣರ ದೀಕ್ಷೆಯ ಮೂಲಕ ಕ್ಷತ್ರಿಯ ವರ್ಣ ರೂಪುಗೊಳ್ಳುತ್ತಿತ್ತು. ಇದು ಶೂದ್ರ ವರ್ಣದ ಒಂದು ಭಾಗ ಎಂಬುದು ಇವರ ಅಭಿಪ್ರಾಯವಾಗಿದೆ. ದೀಕ್ಷೆ ಅಥವಾ ಜನಿವಾರವನ್ನು ಕಳೆದುಕೊಂಡ ಶೂದ್ರ ಸಮುದಾಯವು ಹೇಗೆ ಸಾಮಾಜಿಕವಾಗಿ ನಾಲ್ಕನೆಯ ವರ್ಣವೆಂದು ಹಿಂಬಡ್ತಿಗೆ ತಳ್ಳಲ್ಪಟ್ಟಿತು ಎಂಬುದನ್ನು ಮೇಲ್ಕಂಡ ಹೇಳಿಕೆಯಿಂದ ಗ್ರಹಿಸಬಹುದಾಗಿದೆ.

"ಹುಟ್ಟು ಆಕಸ್ಮಿಕವಾದರೂ ಭಾರತದಲ್ಲಿರುವ ಜಾತಿ ಪದ್ಧತಿಯಿಂದಾಗಿ ಹುಟ್ಟಿನಿಂದಲೇ ಅಂಬೇಡ್ಕರ್ ಅನೇಕ ಅವಮಾನಗಳನ್ನು ಅನುಭವಿಸಬೇಕಾಯಿತು. ಹುಟ್ಟು ಶ್ರೇಷ್ಠವಲ್ಲ ಎಂದರೂ ಈ ದೇಶದಲ್ಲಿ ಹುಟ್ಟೇ ಶ್ರೇಷ್ಠವಾದುದು ಎನ್ನುವುದಕ್ಕೆ ಇವತ್ತಿನ ಅನೇಕ ಸಂಗತಿಗಳು ಸಾಬೀತುಪಡಿಸುತ್ತಲಿವೆ. ಲೋಹಿಯಾ ಅವರಂತೆ ಸಹಜವಾಗಿ ವಿದ್ಯಾಭ್ಯಾಸ ಮಾಡುವುದು ಅಂಬೇಡ್ಕರ್ ಅವರಿಗೆ ಸಾಧ್ಯವಾಗಲಿಲ್ಲ. ಶಾಲೆಯಲ್ಲಿ ಹೊರಗೆ ಕೂಡಬೇಕು; ಕ್ಷೌರಿಕ ಕೂದಲು ಕತ್ತರಿಸುತ್ತಿರಲಿಲ್ಲ. ಸಾರ್ವಜನಿಕ ಕೆರೆ, ಬಾವಿಗಳಲ್ಲಿ ನೀರು ಕುಡಿಯಲು ಬಿಡುತ್ತಿರಲಿಲ್ಲ. ಈ ಎಲ್ಲ ಅವಮಾನ, ಯಾತನೆಗಳ ನಡುವೆಯೂ ಅಂಬೇಡ್ಕರ್ ಓದು ನಡೆದಿತ್ತು. ಅಂಬೇಡ್ಕರ್ ಮತ್ತು ಲೋಹಿಯಾ ನಾಡಿನ ಇಬ್ಬರು ಮಹಾನ್ ನಾಯಕರು ಹಾಗೂ ಶ್ರೇಷ್ಠ ಚಿಂತಕರು. ಇವರಿಬ್ಬರೂ ಬದುಕಿನುದ್ದಕ್ಕೂ ನಂಬಿದ ತತ್ವ ಸಿದ್ಧಾಂತಗಳ ಉಳಿವಿಗಾಗಿ ನವಸಮಾಜದ ನಿರ್ಮಾಣಕ್ಕಾಗಿ ದುಡಿದವರಾಗಿದ್ದಾರೆ.

ಶತಶತಮಾನಗಳಿಂದ ತಳಸಮುದಾಯಗಳನ್ನು ಹೀನಾಯವಾಗಿ ಕಂಡಿದ್ದ ವೈದಿಕ ಧರ್ಮ ಮತ್ತು ವೈದಿಕ ವಾದಿಗಳ ವಿರುದ್ಧ ಅಂಬೇಡ್ಕರ್ ಅವರ ಮಾತು ಮುಂದುವರೆಯಿತು. "ಹಂದಿ ನಾಯಿಗಳಿಗಿಂತ ತಳಸಮುದಾಯಗಳನ್ನು ಕಡೆಯಾಗಿ ಕಾಣಲಾಗಿದೆ. ಅವರಿಗೂ ನಾಗರಿಕ ಹಕ್ಕುಗಳು ಸಿಗಬೇಕು ಎಂದು ಡಾ.ಬಿ.ಆರ್.ಅಂಬೇಡ್ಕರ್ ಅವರು ವಾದಿಸುತ್ತಾ ಮಾನವತೆಗಾಗಿ ಮಿಡಿಯುವುದು ಕಠೋರವಾದವೇ? ಎಂದು ತಿಲಕರನ್ನು ಗಮನದಲ್ಲಿಕೊಂಡು ಅಂಬೇಡ್ಕರ್ ಅವರು ಹೀಗೆ ಹೇಳಿದರು. 'ತಿಲಕರು ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು' ಎಂಬ ಘೋಷಣೆ ನೀಡಿ ಸ್ವಾತಂತ್ರ್ಯ ಆಂದೋಲನದ ಧೀಮಂತ ನಾಯಕರೆನಿಸಿದ್ದರು. ಆದರೆ

ಅವರೇನಾದರೂ ಅಸ್ಪೃಶ್ಯರಾಗಿ ಹುಟ್ಟಿದ್ದರೆ ಈ ಘೋಷಣೆಗಿಂತ ಮುಂಚೆ ಅಸ್ಪೃಶ್ಯತೆ ನಿರ್ಮೂಲನೆಯೇ ನನ್ನ ಜನ್ಮ ಸಿದ್ಧ ಹಕ್ಕು ಎಂದು ಹೇಳುತ್ತಿದ್ದರು"[೯] ಅಂಬೇಡ್ಕರ್ ಅವರ ಮಾತುಗಳಲ್ಲಿ ಸರಳವಾದ ವಿಚಾರವಿದ್ದರೂ ಕಠೋರವಾದ ಸತ್ಯವಿದ್ದುದನ್ನು ತಿಳಿಯಬಹುದಾಗಿದೆ.

ಚಲನೆಯಾಗದ ಜಾತಿ ವ್ಯವಸ್ಥೆ ಕುರಿತು ಚಿನ್ನಸ್ವಾಮಿ ಸೋಸಲೆ ಅವರು ಉದಾಹರಣೆಯ ಮೂಲಕ ಈ ಕೆಳಗಿನಂತೆ ವಿಶ್ಲೇಷಣೆ ಮಾಡಿದ್ದಾರೆ. "ಗ್ರಾಮೀಣ ಪ್ರದೇಶ ದಲ್ಲಿ ಕುಡಿಯುವ ನೀರಿನ ಪ್ರಮುಖ ಮೂಲ ಹಗ್ಗ ಹಾಗೂ ರಾಟೆಯ ಸಹಾಯದಿಂದ ನೀರನ್ನು ಬಿಂದಿಗೆಯ ಮೂಲಕ ಹೊರತೆಗೆಯುವ ಚಕ್ರ ಬಾವಿಗಳು. ಈ ತೆರೆದ ಬಾವಿಗೆ ಕಸ-ಎಲೆ-ಹುಲ್ಲು ಇತರೆ ವಸ್ತುಗಳು ಬಿದ್ದಿರುವುದು ಸಾಮಾನ್ಯವೇ. ಕುಡಿಯುವ ನೀರನ್ನು ಬಾವಿಯಿಂದ ಹೊರತೆಗೆಯಲು ಬರುವವರು ರಾಟೆಯ ಮೂಲಕ ಹಗ್ಗದ ಸಹಾಯದಿಂದ ಕೊಡವನ್ನು ಬಾವಿ ಒಳಗಡೆ ಬಿಟ್ಟು ಖಾಲಿ ಕೊಡವನ್ನು ಕಸ-ಕಡ್ಡಿ ಬಿದ್ದಿರುವ ನೀರಿನ ಮೇಲ್ಭಾಗಕ್ಕೆ ಕುಕ್ಕಿದಾಗ ಕಸಕಡ್ಡಿಗಳು ಬಾವಿಯ ಅಂಚಿನ ಸುತ್ತ ಸೇರುತ್ತವೆ. ಆಗ ಶುದ್ಧವಾದ ನೀರನ್ನು ಕೊಡದಲ್ಲಿ ತುಂಬಿ ಹೊರತೆಗೆಯಲಾಗುತ್ತದೆ. ತುಂಬಿದ ಕೊಡ ನೀರನ್ನು ಬಾವಿಯಿಂದ ಹೊರ ತೆಗೆಯುವಾಗ ಬಲಪ್ರಯೋಗವಾಗುವುದರಿಂದ ಬಾವಿಯಲ್ಲಿರುವ ಕಸ-ಕಡ್ಡಿಗಳು ಬಾವಿಯ ಅಂಚಿನಲ್ಲಿದ್ದು ನಂತರ ನಿಧಾನವಾಗಿ ಬಾವಿಯನ್ನೆಲ್ಲ ಆಕ್ರಮಿಸಿಕೊಳ್ಳುತ್ತವೆ. ಇದು ಸಹಜ ಪ್ರಕ್ರಿಯೆ ಎನ್ನುವುದಾದರೆ ಭಾರತದಲ್ಲಿ ಜಾತಿ-ವರ್ಗಗಳ ಚಲನೆಯೂ ಸಹ ಸಹಜವಾದದ್ದೆ ಆಗಿದೆ."[೧೦] ಅಸ್ಪೃಶ್ಯತೆಯ ಆಚರಣೆ ಅಮಾನವೀಯವಾದದ್ದು, ಜಾತಿ ವ್ಯವಸ್ಥೆಯನ್ನು ನಿರ್ಮೂಲನೆ ಮಾಡಬೇಕು ಎಂದು ಸಾರಿದ ಬುದ್ಧ, ಬಸವ, ಅಂಬೇಡ್ಕರ್, ಮಹಾತ್ಮ ಫುಲೆ, ಪೆರಿಯಾರ್ ಅವರ ಸಾಧನೆಗಳು ಸಹ ಕೊಡವನ್ನು ನೀರಿನಲ್ಲಿ ಕುಲುಕಿ ಬಾವಿಯ ಅಂಚಿಗೆ ಕಸವನ್ನು ತಳ್ಳಿದಂತಾಗುತ್ತದೆ. ನಂತರ ಬಾವಿಯನ್ನೆಲ್ಲ ಆಕ್ರಮಿಸಿಕೊಳ್ಳುವ ಕಸ ಭಾರತದ ಅಲಿಖಿತ ಸಂವಿಧಾನದ ಕರಾಳ ರೂಪವನ್ನು ಪ್ರತಿಬಿಂಬಿಸುತ್ತದೆ.

ಡಾ.ಬಿ.ಆರ್.ಅಂಬೇಡ್ಕರ್ ಅವರು ಗಣರಾಜ್ಯದಲ್ಲಿ ಅಸ್ಪೃಶ್ಯನ ಸ್ಥಾನವನ್ನು ಕುರಿತು ಚರ್ಚಿಸುತ್ತಾರೆ. ಅವರ ಪ್ರಕಾರ ಗಣರಾಜ್ಯವೆಂದರೆ "ಸ್ಪೃಶ್ಯರ ಸ್ಪೃಶ್ಯರಿಂದ ಮತ್ತು ಸ್ಪೃಶ್ಯರಿಗಾಗಿ ಇರುವ ಗಣರಾಜ್ಯ, ಅಸ್ಪೃಶ್ಯರ ಮೇಲೆ ಹಿಂದೂಗಳ ಸಾಮ್ರಾಜ್ಯವೇ ಗಣರಾಜ್ಯ"[೧೧] ಅಸ್ಪೃಶ್ಯರನ್ನು ಶೋಷಿಸಲು ಹಿಂದೂಗಳು ರಚಿಸಿಕೊಂಡಿರುವ ಒಂದು ವಸಾಹತುಶಾಹಿ ಕ್ರಮ. ಇದೊಂದು ವಿಷವರ್ತುಲ. ಕಾರಣವೆಂದರೆ ವಯಸ್ಸು ಮತ್ತು ಅರ್ಹತೆಗಳೇನೇ ಇದ್ದರೂ ಎಲ್ಲ ಅಸ್ಪೃಶ್ಯರೂ ಎಲ್ಲ ಸ್ಪೃಶ್ಯರಿಗಿಂತಲೂ ಕೀಳಾದವರು. ವಯಸ್ಸಾದ ಅಸ್ಪೃಶ್ಯನಿಗಿಂತಲೂ ಒಬ್ಬ ಸ್ಪೃಶ್ಯ ಯುವಕ ಮೇಲಿನವನು ಮತ್ತು ಒಬ್ಬ ವಿದ್ಯಾವಂತ ಅಸ್ಪೃಶ್ಯನು ಅನಕ್ಷರಸ್ಥ

ಸ್ಪೃಶ್ಯನಿಗಿಂತಲೂ ಕೆಳಗೆ ನಿಲ್ಲಬೇಕು. ಒಮ್ಮೆ ಸ್ಪೃಶ್ಯನಾದರೆ ಯಾವಾಗಲೂ ಸ್ಪೃಶ್ಯನೇ, ಒಮ್ಮೆ ಅಸ್ಪೃಶ್ಯನಾದರೆ ಯಾವಾಗಲೂ ಅಸ್ಪೃಶ್ಯನೇ, ಒಮ್ಮೆ ಬ್ರಾಹ್ಮಣನಾದರೆ ಯಾವಾಗಲೂ ಬ್ರಾಹ್ಮಣ. ಒಮ್ಮೆ ಜಾಡಮಾಲಿಯಾದರೆ ಯಾವಾಗಲೂ ಜಾಡಮಾಲಿ; ಇದರಡಿಯಲ್ಲಿ ಉಚ್ಚ ಜನ್ಮ ತಾಳಿದವರು ಉಚ್ಚರಾಗಿಯೇ ಉಳಿಯುತ್ತಾರೆ. ನೀಚರಾಗಿ ಜನ್ಮ ತಾಳಿದವರು ನೀಚರಾಗಿಯೇ ಉಳಿಯುತ್ತಾರೆ. ಇದು ಸಮಾಜದ ವಾಸ್ತವ ಚಿತ್ರಣವಾಗಿದೆ.

ತಳಸಮುದಾಯಗಳ ಜೀವನ ಪದ್ಧತಿ, ಆಚಾರ, ವಿಚಾರ, ವೇಷಭೂಷಣ, ವಾಸ, ಕಸುಬು ಇವುಗಳೆಲ್ಲ ಹೇಗಿರಬೇಕೆಂದು ಭಾರತೀಯ ಸಮಾಜದ ಸವರ್ಣೀಯರು ಕರಾರುವಕ್ಕಾಗಿ ನಿಗಧಿಪಡಿಸಿದ್ದಾರೆ. ಅವುಗಳ ಅಧ್ಯಯನದಿಂದ ವಸಾಹತು ಕಾಲಘಟ್ಟದಲ್ಲಿ ತಳಸಮುದಾಯಗಳ ಜೀವನಶೈಲಿಯ ಪರಿಚಯವಾಗುತ್ತದೆ.

೧. ಹಿಂದೂಗಳ ವಾಸಸ್ಥಾನಗಳಿಂದ ದೂರವಾಗಿ ಪ್ರತ್ಯೇಕ ಜಾಗದಲ್ಲಿ ಅಸ್ಪೃಶ್ಯರು ವಾಸಿಸಬೇಕು. ಈ ನಿಯಮ ಮುರಿಯುವುದಾಗಲೀ, ಅದರಿಂದ ತಪ್ಪಿಸಿಕೊಳ್ಳುವುದಾಗಲೀ ಅಸ್ಪೃಶ್ಯರಲ್ಲಿ ಒಂದು ಅಪರಾಧವೆನಿಸುತ್ತದೆ.

೨. ಅಸ್ಪೃಶ್ಯರ ವಾಸ ಪ್ರದೇಶವು ಹಳ್ಳಿಯ ದಕ್ಷಿಣ ದಿಕ್ಕಿನಲ್ಲಿರಬೇಕು. ಏಕೆಂದರೆ ನಾಲ್ಕು ದಿಕ್ಕುಗಳಲ್ಲಿ ದಕ್ಷಿಣವು ಅತ್ಯಂತ ಅಮಂಗಳವಾದುದು. ಈ ನಿಯಮದ ಉಲ್ಲಂಘನೆಯು ಅಪರಾಧವೆನಿಸಿಕೊಳ್ಳುತ್ತದೆ.

೩. ಹತ್ತಿರ ಬರುವುದರಿಂದ ಅಥವಾ ನೆರಳು ಬೀಳುವುದರಿಂದ ಉಂಟಾಗುವ ಮಾಲಿನ್ಯ ವನ್ನು ಅಸ್ಪೃಶ್ಯನು ಉಂಟುಮಾಡಬಾರದು.

೪. ಅಸ್ಪೃಶ್ಯರ ಗುಂಪಿಗೆ ಸೇರಿದವನೊಬ್ಬ ಭೂಮಿ, ಧನ ಇತ್ಯಾದಿ ರೂಪದ ಸಂಪತ್ತನ್ನು ಪಡೆದುಕೊಳ್ಳುವುದು ಒಂದು ಅಪರಾಧ.

೫. ಅಸ್ಪೃಶ್ಯರ ಗುಂಪಿಗೆ ಸೇರಿದವನೊಬ್ಬ ಹಂಚಿನ ಹೊದಿಕೆ ಇರುವಂಥ ಮನೆಯನ್ನು ಕಟ್ಟಿಕೊಳ್ಳುವುದು ಒಂದು ಅಪರಾಧ.

೬. ಅಸ್ಪೃಶ್ಯರ ಗುಂಪಿಗೆ ಸೇರಿದವನು ಶುಭ್ರವಾದ ವಸ್ತ್ರಗಳನ್ನು ತೊಡುವುದು, ಪಾದರಕ್ಷೆಗಳನ್ನು ಹಾಕಿಕೊಳ್ಳುವುದು, ಗಡಿಯಾರ ಅಥವಾ ಯಾವುದೇ ಚಿನ್ನದ ಆಭರಣಗಳನ್ನು ಹಾಕಿಕೊಳ್ಳುವುದು ಅಪರಾಧ.

೭. ಅಸ್ಪೃಶ್ಯರ ಗುಂಪಿಗೆ ಸೇರಿದವನು ತನ್ನ ಮಕ್ಕಳಿಗೆ ಸೊಗಸಾದ ಹೆಸರುಗಳನ್ನಿಡುವುದು ಅಪರಾಧ. ಅವನಿಡುವ ಹೆಸರುಗಳು ತಿರಸ್ಕಾರ ಸೂಚಕಗಳಾಗಿರಬೇಕು.

೮. ಅಸ್ಪೃಶ್ಯರ ಗುಂಪಿಗೆ ಸೇರಿದವನು ಒಂದು ಹಳ್ಳಿಯಲ್ಲಿ ಕುದುರೆ ಮೇಲೆ ಕುಳಿತು ಹಾದು ಹೋಗುವುದು ಅಥವಾ ಪಲ್ಲಕ್ಕಿಯಲ್ಲಿ ಕುಳಿತು ತೆರಳುವುದು ಅಪರಾಧ.

೯. ಒಬ್ಬ ಹಿಂದುವಿನ ಸಮ್ಮುಖದಲ್ಲಿ ಕುರ್ಚಿಯ ಮೇಲೆ ಕೂರುವುದು ಅಸ್ಪೃಶ್ಯರ ಗುಂಪಿಗೆ ಸೇರಿದವನು ಮಾಡಬಹುದಾದ ಅಪರಾಧ.

೧೦. ಅಸ್ಪೃಶ್ಯರ ಗುಂಪಿಗೆ ಸೇರಿದವನು ಅಸ್ಪೃಶ್ಯರ ಮೆರವಣಿಗೆಯೊಂದನ್ನು ಹಳ್ಳಿಯ ಮುಖಾಂತರ ಕೊಂಡುಹೋಗುವುದು ಅಪರಾಧ."[೧೨]

ಮೇಲಿನ ಎಲ್ಲಾ ನಿಯಮಗಳು ತಳಸಮುದಾಯಗಳು ಅನುಸರಿಸಬೇಕಾದ ವಾಸಸ್ಥಾನ ಹಾಗೂ ನಡವಳಿಕೆಗಳನ್ನು ಸೂಚಿಸಿದರೆ, ಅವನು ನಿರ್ವಹಿಸಬೇಕಾದ ಕರ್ತವ್ಯಗಳನ್ನು ಕುರಿತು ಭಾರತೀಯ ಸವರ್ಣೀಯ ಸಮಾಜ ಈ ಕೆಳಗಿನ ಕಟ್ಟುಪಾಡುಗಳನ್ನು ವಿಧಿಸಿವೆ.

"೧. ಅಸ್ಪೃಶ್ಯರ ಗುಂಪಿಗೆ ಸೇರಿದವನು ಸವರ್ಣೀಯ ಸಮಾಜದ ಹಿಂದೂವೊಬ್ಬರ ಮನೆಯ ಎಲ್ಲಾ ಘಟನೆಗಳ ಬಗೆಗೂ ಸಂದೇಶವನ್ನು ಹೊತ್ತು ಆ ಹಿಂದೂವಿನ ನೆಂಟರಿಷ್ಟರಿಗೆ ಅದನ್ನು ಮುಟ್ಟಿಸಬೇಕು. ಘಟನೆಯು ಮರಣಕ್ಕೆ ಸಂಬಂಧಿಸಿರಬಹುದು, ಮದುವೆಗೆ ಸಂಬಂಧಿಸಿರಬಹುದು.

೨. ಸವರ್ಣೀಯ ಸಮಾಜದವರ ಮನೆಯಲ್ಲಿ ವಿವಾಹವು ಜರುಗುವಂತಿದ್ದರೆ ಅವನ ಮನೆಯಲ್ಲಿ ಸೌದೆ ಒಡೆಯುವುದು ಮತ್ತು ಸಣ್ಣಪುಟ್ಟ ಚಾಕರಿಗಳನ್ನು ಹೇಳಿದಂತೆ ಮಾಡುವುದು ಅಸ್ಪೃಶ್ಯರ ಕೆಲಸ.

೩. ದಣಿಯ ಹುಡುಗಿಯೊಬ್ಬಳು ಮದುವೆಯಾಗಿ ತವರುಮನೆಯಿಂದ ಗಂಡನ ಮನೆಯಿರುವ ಹಳ್ಳಿಗೆ ಹೊರಡುವಾಗ ಅಸ್ಪೃಶ್ಯನು ಅವಳೊಡನೆ ಹೋಗಬೇಕು.

೪. ಕಾಮನ ಹಬ್ಬ, ದಸರಾ ಇತ್ಯಾದಿ ಸಾಮೂಹಿಕ ಉತ್ಸವಗಳನ್ನು ಆಚರಿಸುವುದರಲ್ಲಿ ಇಡೀ ಗ್ರಾಮ ಸಮುದಾಯವು ನಿರತವಾಗಿದ್ದಾಗ ಅಸ್ಪೃಶ್ಯರು ಈ ಉತ್ಸವಕ್ಕೆ ಪೂರಕವಾದ ಎಲ್ಲ ಕೀಳು ಕೆಲಸಗಳನ್ನು ಮಾಡಬೇಕು.

೫. ಕೆಲವು ಉತ್ಸವ ಸಂದರ್ಭದಲ್ಲಿ ಅಶ್ಲೀಲ ಮೋಜಿಗೆ ಗುರಿಯಾಗಲು ತಮ್ಮ ಹೆಂಗಸರನ್ನು ಅಸ್ಪೃಶ್ಯರು ಗ್ರಾಮ ಸಮುದಾಯದ ಸದಸ್ಯರಿಗೆ ಒಪ್ಪಿಸಬೇಕು. ಈ ಮೌಖಿಕ ಸಂವಿಧಾನಾತ್ಮಕ ಕಟ್ಟುಪಾಡುಗಳನ್ನು ಉಲ್ಲಂಘಿಸಿದರೆ ಸವರ್ಣೀಯರಿಂದ ದಲಿತರಿಗೆ ಸಿಗುವ ಬಹುಮಾನ ಬಹಿಷ್ಕಾರ, ಕಂಡು ಕೇಳರಿಯದ ದೌರ್ಜನ್ಯ."[೧೩] ಇವು ದಾಖಲಾಗದ ಸಾಮಾನ್ಯ ಕೃತ್ಯಗಳಾಗಿರುತ್ತವೆ.

ಡಾ.ಬಿ.ಆರ್.ಅಂಬೇಡ್ಕರ್ ಅವರು ರಾಜ್ಯದಲ್ಲಿ ಇನ್ನೂ ಬೇರೂರಿ ನಿಂತಿರುವ ಆದರೆ ಅವುಗಳನ್ನು ಸರಿಪಡಿಸಲು ಸರ್ಕಾರವು ಯಾವುದೇ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳದಿರುವಂತಹ, ಕೆಲವು ಅನ್ಯಾಯಯುಕ್ತವಾದ ಪದ್ಧತಿಗಳನ್ನು ಕುರಿತು ಈ ಕೆಳಗಿನಂತೆ ಉಲ್ಲೇಖಿಸುತ್ತಾರೆ.

೧. ತಾವು ತೊಡುವ ಬಟ್ಟೆಗಳ ಆಯ್ಕೆಯಲ್ಲಿ ಹರಿಜನರಿಗೆ ಸ್ವಾತಂತ್ರ್ಯವಿಲ್ಲ. ಅವರ ಉಡುಗೆ-ತೊಡುಗೆಗಳು ಪರಂಪರಾಗತವಾದ ಸ್ವರೂಪದಲ್ಲೇ ಇರಬೇಕು. ಅವರ ವೈಯಕ್ತಿಕ ಆಸೆ ಮತ್ತು ಅಭಿರುಚಿಗಳಿಗೆ ಬಟ್ಟೆಗಳ ಆಯ್ಕೆಯಲ್ಲಿ ಯಾವ ಸ್ಥಾನವೂ ಇಲ್ಲ.

೨. ಮದುವೆಯ ಔತಣಗಳಲ್ಲಿ ಯಾವ ಆಹಾರ ಪದಾರ್ಥಗಳನ್ನು ಉಣಬಡಿಸಬೇಕೆಂದು ಅವರು ಆಯ್ಕೆ ಮಾಡಿಕೊಳ್ಳುವಂತಿಲ್ಲ. ಹಣ ಕೊಡಲು ಸಿದ್ಧರಿದ್ದರೂ ಅವರು ಬೆಲೆಬಾಳುವ ಪದಾರ್ಥಗಳನ್ನು ಬಳಸುವಂತಿಲ್ಲ.

೩. ಕುದುರೆಯನ್ನೇರಿ ಒಂದು ಹಳ್ಳಿಯ ಮೂಲಕ ಅವರು ಹಾದು ಹೋಗುವಂತಿಲ್ಲ.

೪. ಸಾರ್ವಜನಿಕ ವಾಹನಗಳಲ್ಲಿ ಅವರಿಗೆ ಅವಕಾಶ ಮಾಡಿಕೊಡಲಾಗುತ್ತಿಲ್ಲ.

೫. ಧಾರ್ಮಿಕ ಹಬ್ಬದ ಸಂದರ್ಭಗಳಲ್ಲಿ ನಿಗದಿತವಾದ ಮಾರ್ಗಗಳನ್ನು ಬಿಟ್ಟು ಅವರು ತಮ್ಮ ದೇವತಾ ಮೂರ್ತಿಗಳನ್ನು ಮೆರವಣಿಗೆಗಳಲ್ಲಿ ಕೊಂಡೊಯ್ಯುವಂತಿಲ್ಲ.

೬. ಬಾವಿ ಮತ್ತು ದೇವಸ್ಥಾನಗಳಿಗೆ ಅವರಿಗೆ ಪ್ರವೇಶವಿಲ್ಲ."[೧೪]

ಮೇಲ್ಕಂಡ ಅಲಿಖಿತ ಪದ್ಧತಿಗಳನ್ನು ಗಮನಿಸಿದಾಗ ವಸಾಹತು ಪೂರ್ವ ಮತ್ತು ವಸಾಹತೋತ್ತರ ಕಾಲಘಟ್ಟದ ತಳಸಮುದಾಯಗಳ ಬದುಕಿನ ಚಿತ್ರಣ ಅನಾವರಣವಾಗುತ್ತದೆ. ಕುಡಿಯುವುದಕ್ಕೆ ನೀರು ಕೇಳಿದರು ಕೂಡ. ಮೊದಲು ಕೇಳುವುದು ಯಾವ ಜಾತಿ? ಎಂದು ಭಾರತೀಯ ಸಮಾಜದಲ್ಲಿ ಜಾತಿ ಎನ್ನುವುದು ಹೆಜ್ಜೆ ಹೆಜ್ಜೆಗೂ ಕೂಡ ಜಾಗೃತವಾಗಿರುತ್ತದೆ.

"ಹರಿಜನರೆಂದು ಕರೆಯಲ್ಪಡುವ ಅಸ್ಪೃಶ್ಯರೆಂದು ಪರಿಗಣಿಸಲ್ಪಟ್ಟ ಜನರು ತಲಾಂತರಗಳಿಂದ ಯಾತನಾಮಯ ಜೀವನವನ್ನು ನಡೆಸುತ್ತಿರುವುದು ನಮ್ಮ ನಾಡಿನ ಎಲ್ಲೆಡೆಗಳಲ್ಲೂ ಬೆಳೆದುಬಂದಿದೆ. ಆದರೆ ವರ್ಣಾಶ್ರಮ ಧರ್ಮದಂತೆ ಆ ಜನರು ಅದೇ ರೀತಿಯ ಕಷ್ಟ ಪರಂಪರೆಗಳಲ್ಲಿ ತೊಳಲಾಡುವುದು ಸ್ವಾಭಾವಿಕವೆಂದೂ, ಇತರರ ಸೇವೆ ಮಾಡಲೋಸುಗವೇ ಅವರ ಹುಟ್ಟಿನ ಕಾರಣವೆಂದೂ ಊರ ಕೇರಿಯ ಹೊರಗಡೆ ಜನ ವಸತಿ ಇಲ್ಲದ ಕಡೆಗಳಲ್ಲೇ. ಚಿಕ್ಕ ಗುಡಿಸಲುಗಳಲ್ಲಿವರು ವಾಸಿಸಬೇಕಾದುದೂ ಸೃಷ್ಟಿ ನಿಯಮ, ದೈವ ಸಂಕಲ್ಪ ಎಂಬ ಅಭಿಪ್ರಾಯವನ್ನು ಹೊಂದಿರುವ ಜನರ ಸಂಖ್ಯೆಗೆ ಇಂದಿಗೂ ಕೊರತೆ ಇಲ್ಲ. ಈ ಆಧುನಿಕ

ದಿನಗಳಲ್ಲಿ ಅಸ್ಪೃಶ್ಯತೆ ಎನ್ನುವುದು ಹೇಯವಾಗಿದೆ. ಹೊಲಸನ್ನು ತಿಂದು ಮನಬಂದಂತೆ ಅಲೆದಾಡುವ ನಾಯಿಯು ತನ್ನ ಧಣಿಯ ಬಳಿಯಲ್ಲಿ ಮನೆಯೊಳಗಡೆ ಅಲೆಯುವುದು ವಾಸ್ತವವಾಗಿದೆ. ಆದರೆ ಮನುಷ್ಯನಾಗಿ ಜನ್ಮವೆತ್ತಿ ಸೇವೆಯೇ ತನ್ನ ಜೀವನದ ಹಿರಿಯ ಗುರಿಯಾಗಿಟ್ಟುಕೊಂಡು, ನೈತಿಕ ವಿಚಾರಗಳಲ್ಲಿ ಎಳ್ಳಷ್ಟು ಹಿಂದುಳಿಯದ ವ್ಯಕ್ತಿಯು ಮೇಲ್ಜಾತಿಯವರೆನ್ನಿಸಿಕೊಳ್ಳುವ ಜನರಂತೆಯೇ ಆತ್ಮವಿದ್ದವನೂ, ನಿಷ್ಕಳಂಕನೂ ಆಗಿದ್ದರೂ ಆತನು ಅಸ್ಪೃಶ್ಯನಾದರೆ ದುರಂತ ಜೀವನವನ್ನು ನಡೆಸಬೇಕಾಗುವುದು ಸ್ಪಷ್ಟವಾಗಿ ಕಾಣುತ್ತಿದೆ. ಇಂಥ ಜೀವನವು ಮನುಷ್ಯನಾದವನಿಗೆ ಯಾತನಾಮಯವು, ರಾಷ್ಟ್ರದ ಸಮಗ್ರ ಅಭ್ಯುದಯಕ್ಕೆ ಇದೊಂದು ಅಭಿಶಾಪವು ಆಗಿದೆ."[೧೫] ಎಂದು ಶಿವರಾಮ ಶೆಟ್ಟಿ ಅವರು ಅಭಿಪ್ರಾಯ ಪಡುತ್ತಾರೆ. ಈ ಹೇಳಿಕೆಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ತಳಸಮುದಾಯಗಳ ಬದುಕಿನ ಚಿತ್ರಣವನ್ನು ನಿರೂಪಿಸುತ್ತವೆ.

ವಸಾಹತೋತ್ತರ ಕಾಲಘಟ್ಟದಲ್ಲಿ ಒಮ್ಮೆ ಅಸ್ಪೃಶ್ಯನಾದರೆ ಯಾವಾಗಲೂ ಅಸ್ಪೃಶ್ಯನೇ ಎಂಬುದಕ್ಕೆ ಉದಾಹರಣೆಗಳ ಸಹಿತ ಕೆಳಕಂಡಂತೆ ವಿವರಿಸಲಾಗಿದೆ. ಲೋಕಸಭೆಯ ಕಾಂಗ್ರೆಸ್ ನಾಯಕ ಮಲ್ಲಿಕಾರ್ಜುನ ಖರ್ಗೆ ಅವರು ತಳಸಮುದಾಯಗಳು ಎದುರಿಸುತ್ತಿರುವ ಸ್ಥಿತಿಯನ್ನು ಕುರಿತು "ನಾನು ಚಹಾ ಮಾರಿ ಮೇಲೆ ಬಂದವ ಎಂದು ಪ್ರಧಾನಿ ನರೇಂದ್ರ ಮೋದಿ ಯಾವಾಗಲೂ ಹೇಳುತ್ತಿರುತ್ತಾರೆ. ಈ ಮಾತನ್ನು ಕೇಳಿ ಕೇಳಿ ನನಗೂ ಬೇಸರ ಬಂತು. ನಾನು ಒಮ್ಮೆ ಹೇಳಿಯೇ ಬಿಟ್ಟೆ ನೀವು ಚಹಾ ಮಾರಿ ಮೇಲೆ ಬಂದಿರಿ: ಆದರೆ, ನಾನು ಚಹಾದ ಅಂಗಡಿ ಇಟ್ಟರೂ ಯಾರೂ ಬರುವುದಿಲ್ಲ. ಚಹಾ ಕುಡಿಯುವುದೂ ಇಲ್ಲ."[೧೬]

ತಳಸಮುದಾಯಕ್ಕೆ ಸೇರಿದ ಕಾರಣಕ್ಕೆ ಬಾಲ್ಯದಲ್ಲಿ ಎದುರಿಸಿದ ಅವಮಾನಗಳನ್ನು ಕೆಪಿಸಿಸಿ ಅಧ್ಯಕ್ಷ ಡಾ.ಜಿ.ಪರಮೇಶ್ವರ್ ಅವರು ಈ ರೀತಿ ಹೇಳುತ್ತಾರೆ. "ಶಾಲೆಗೆ ಹೋಗುತ್ತಿದ್ದಾಗ ಬೇರೆ ಮನೆಗಳಲ್ಲಿ ನನಗೆ ಕುಡಿಯುವುದಕ್ಕೆ ಲೋಟದಲ್ಲಿ ನೀರನ್ನು ಕೊಡುತ್ತಿರಲಿಲ್ಲ. ಮೇಲಿನಿಂದ ನೀರು ಸುರಿಸುತ್ತಿದ್ದರು. ಅದನ್ನು ಕುಡಿಯಬೇಕಿತ್ತು..., ಕ್ಷೌರದ ಅಂಗಡಿಯವರು ನನ್ನ ಸಮುದಾಯದವರಿಗೆ ಕ್ಷೌರ ಮಾಡುತ್ತಿರಲಿಲ್ಲ. ವಿಧಾನ ಪರಿಷತ್ ಸದಸ್ಯರಾಗಿದ್ದ ತಂದೆ ಅವರೇ ನನಗೆ ಕ್ಷೌರ ಮಾಡುತ್ತಿದ್ದರು."[೧೭] ಇಂದಿಗೂ ಬಹಳಷ್ಟು ಹಳ್ಳಿಗಳಲ್ಲಿ ತಳಸಮುದಾಯಗಳಿಗೆ ಕ್ಷೌರ ನಿರಾಕರಣೆ ಮಾಡುತ್ತಿರುವುದನ್ನು ದಿನ ಪತ್ರಿಕೆಗಳಲ್ಲಿ ಗಮನಿಸಬಹುದು.

"ಬಿಹಾರದ ಮಾಜಿ ಮುಖ್ಯಮಂತ್ರಿ ಜಿತನ್‌ರಾಂ ಮಾಂಝಿ ಅವರು ಸಮಾಜವಾದಿ ನಾಯಕ ರಾಮ ಮನೋಹರ ಲೋಹಿಯಾ ಮೂರ್ತಿಗೆ ಮಾಲಾರ್ಪಣೆ ಮಾಡಿದ ಕೆಲ ಹೊತ್ತಿನಲ್ಲಿಯೇ ಕೆಲವರು ಮೂರ್ತಿಯನ್ನು ಸ್ವಚ್ಛಗೊಳಿಸಿದರು; ನಂತರ ತಾವು ತಂದಿದ್ದ ಹೂವಿನ ಹಾರವನ್ನು ಮೂರ್ತಿಗೆ ಹಾಕಿದರು"[೧೮] ಇದೇ ಭಾರತೀಯ ಸಮಾಜ.

ಅಸ್ಪೃಶ್ಯರನ್ನು ಉತ್ತಮಗೊಳಿಸಿದರೆ ಅಸ್ಪೃಶ್ಯತೆ ಇಲ್ಲವಾಗುತ್ತದೆ. ಸ್ಪೃಶ್ಯನಿಗೆ ನಾವೇನೂ ಮಾಡಬೇಕಾದ ಅಗತ್ಯವಿಲ್ಲ. ಅವರು ಮಾನಸಿಕವಾಗಿ ನಡತೆಯ ದೃಷ್ಟಿಯಿಂದ ಮತ್ತು ನೈತಿಕವಾಗಿ ಸರಿಯಾಗಿಯೇ ಇದ್ದಾನೆ. ಅವನು ಪರಿಪೂರ್ಣ, ಅವನಲ್ಲೇನೂ ನ್ಯೂನತೆ ಇಲ್ಲ ಎಂದು ಭಾವಿಸುವುದು ಸಾಮಾನ್ಯವಾಗಿದೆ. ಇದು ಸರಿ ಇರಲಿ, ಇಲ್ಲದಿರಲಿ ಹಿಂದೂಗಳಂತೂ ಇದನ್ನು ಒಪ್ಪಿಕೊಳ್ಳುತ್ತಾರೆ. ಪ್ರತಿಯೊಬ್ಬ ಹಿಂದೂವೂ ಒಂದು ಜಾತಿಯಲ್ಲಿ ಹುಟ್ಟಿದ್ದಾರೆ. ಆ ಜಾತಿಯು ಅವರ ಧಾರ್ಮಿಕ, ಸಾಮಾಜಿಕ, ಆರ್ಥಿಕ ಮತ್ತು ಕೌಟುಂಬಿಕ ಜೀವನವನ್ನು ತೊಟ್ಟಿಲಿನಿಂದ ಸ್ಮಶಾನದ ಗುಂಡಿಯವರೆಗೆ ನಿರ್ಧರಿಸುತ್ತದೆ. ಪಾಶ್ಚಿಮಾತ್ಯ ದೇಶಗಳಲ್ಲಿ ಸಮಾಜದ ವಿವಿಧ ಸ್ತರಗಳನ್ನು ನಿರ್ಧರಿಸುವುದರಲ್ಲಿ ಪ್ರಮುಖವಾದ ಅಂಶಗಳೆಂದರೆ ಸಂಪತ್ತು, ವಿದ್ಯಾಭ್ಯಾಸ ಮತ್ತು ಉದ್ಯೋಗ; ಇವು ಅಲ್ಲಿ ಅಸ್ತಿತ್ವದಲ್ಲಿವೆ. ಅಲ್ಲದೆ ಉದಾರ ಭಾವನೆಗಳಿಂದ ಕೂಡಿವೆ. ಪ್ರಾಧ್ಯಾಪಕ ಹಾಗೂ ಹಿರಿಯ ನಟರೂ ಆದ ಲೋಹಿತಾಶ್ವ ಅವರು ಜಾತಿಯನ್ನು ಕುರಿತು ಈ ಕೆಳಗಿನಂತೆ ಹೇಳಿಕೆ ನೀಡಿದ್ದಾರೆ. "ಪ್ರತಿಭೆಯ ಎದುರು ಜಾತಿಗೆ ಬೆಲೆ ಇರದು ಎಂದು ಮಾತನಾಡುವವರು ನಮ್ಮ ನಡುವೆ ಇದ್ದಾರೆ. ಆದರೆ ಈ ಹೇಳಿಕೆಗೆ ವಿರುದ್ಧವಾಗಿ ನಾನು ಇನ್ನೊಂದು ಹೇಳಿಕೆ ನೀಡಬಲ್ಲೆ. ಜಾತಿ ಕೆಲಸ ಮಾಡುತ್ತಿರುವುದರಿಂದ ಪ್ರತಿಭೆ ನಿಸ್ಸಂಶಯವಾಗಿ ಗೌಣವಾಗುತ್ತದೆ."[೧೯] ಇಲ್ಲಿ ಜಾತಿ ಕಾಣು ವುದಿಲ್ಲ, ಆದರೆ ಅದು ಎಲ್ಲವನ್ನು ನಿಯಂತ್ರಿಸುತ್ತದೆ ಎಂಬುದನ್ನು ಗಮನಿಸಬಹುದು.

ಭಾರತೀಯ ಸಮಾಜದಂತೆ ತುಮಕೂರು ಜಿಲ್ಲೆಯ ಸಮಾಜ ಯಾವ ರೀತಿಯಿಂದಲೂ ಹೊರತಾಗಿಲ್ಲದಿರುವುದನ್ನು ಗಮನಿಸಬಹುದು. ಅಂಬೇಡ್ಕರ್ ಅವರು ತಮ್ಮ ಬರಹಗಳು ಮತ್ತು ಭಾಷಣಗಳು ಕೃತಿಯಲ್ಲಿ ಅಸ್ಪೃಶ್ಯರ ಸ್ಥಿತಿಗತಿಗಳನ್ನು ಕುರಿತು ಅವಲೋಕಿಸುತ್ತಾರೆ. ಅಂಬೇಡ್ಕರ್ ಅವರ ಸಮಕಾಲೀನ ಸಂದರ್ಭದಲ್ಲಿ ಇದ್ದ ಹಾಗೆ ಇಂದಿಗೂ ಅಸ್ಪೃಶ್ಯರ ಮನೆಗಳು ಸವರ್ಣೀಯ ಸಮುದಾಯಗಳ ವಾಸಸ್ಥಾನದಿಂದ ದೂರವಾಗಿ ಪ್ರತ್ಯೇಕ ಜಾಗ ದಲ್ಲಿವೆ. ಅವರು ಅಲ್ಲಿಯೇ ವಾಸಿಸಬೇಕು. ಸರ್ಕಾರ ಆಶ್ರಯ ಯೋಜನೆಗಳಡಿ ವಸತಿ ಇಲ್ಲದವರಿಗೆ, ವಿವಿಧ ಜಾತಿಗೆ ಸೇರಿದವರಿಗೆ ಮನೆಗಳನ್ನು ಕಟ್ಟಿಸಿಕೊಟ್ಟಿದೆ. ಅಂತಹ ಸ್ಥಳಗಳಲ್ಲಿ

ಮಾತ್ರ ಅಸ್ಪೃಶ್ಯರ ಮತ್ತು ಸ್ಪೃಶ್ಯರ ಮನೆಗಳು ಒಂದೇ ಭಾಗದಲ್ಲಿ ಕಂಡುಬರುತ್ತವೆ. ಆದರೆ ಅಸ್ಪೃಶ್ಯರ ಮನೆಗಳನ್ನು ಪ್ರವೇಶಿಸುವಂತಿಲ್ಲ. ಅವರು ಹೊಸಿಲಿನಿಂದ ಹೊರಗೆ ಇರಬೇಕು. ಸವರ್ಣೀಯರನ್ನು ಸ್ಪರ್ಶಿಸುವಂತಿಲ್ಲ ಹಳ್ಳಿಗಳಲ್ಲಿ ಸವರ್ಣೀಯರ ಮನೆಗಳಲ್ಲಿ ಮತ್ತು ಜಮೀನುಗಳಲ್ಲಿ ತಳಸಮುದಾಯಗಳು ಕೂಲಿ ಕೆಲಸ ಮಾಡಲು ಹೋದರೆ, ಈ ಸಮುದಾಯಗಳು ಊಟ ಮಾಡಿದ ತಟ್ಟೆ, ಕಾಫಿ ಕುಡಿದ ಲೋಟವನ್ನು ಅವರೇ ತೊಳೆದು ಯಾವುದಾದರೂ ಒಂದು ಸ್ಥಳದಲ್ಲಿಟ್ಟು ಬರಬೇಕು. ಮತ್ತೆ ಎಂದಾದರೂ ಅವರು ಸವರ್ಣೀಯರ ಮನೆಗಳಿಗೆ ಕೆಲಸಕ್ಕೆ ಹೊದರೆ ಅದೇ ತಟ್ಟೆ ಮತ್ತು ಲೋಟವನ್ನು ಅವರು ಉಪಯೋಗಿಸಬೇಕು. ಅವರು ಸವರ್ಣೀಯರ ಮನೆಗಳಲ್ಲಿನ ಮದುವೆ, ತಿಥಿ ಮುಂತಾದ ಸಮಾರಂಭಗಳಿಗೆ ಹೋದರೆ ಅಲ್ಲಿ ಯಾರೂ ಸಹ ಅವರ ಸಮಾನಕ್ಕೆ ಇವರನ್ನು ನಡೆಸಿಕೊಳ್ಳುವುದಿಲ್ಲ. ಇಂತಹ ಸಮಾರಂಭಗಳಲ್ಲಿ ತಳಸಮುದಾಯಗಳನ್ನ ತಮಟೆ, ಡೋಲು ಬಡಿಯಲು ಅಥವಾ ಚಪ್ಪರ ಹಾಕಲು, ದೀಪವನ್ನು ಹಿಡಿಯಲು ಇವೇ ಮುಂತಾದ ಕೆಲಸಗಳಿಗೆ ನೇಮಿಸಿ ಕೊಂಡಿರುತ್ತಾರೆ. ತಮ್ಮ ಕೆಲಸವೆಲ್ಲ ಮುಗಿದ ಮೇಲೆ ಪಂಕ್ತಿಯಲ್ಲಿ ಕೂರಿಸಿ ಊಟ ಹಾಕದೆ, ದೂರದಲ್ಲಿ ನೆಲದಲ್ಲಿ ಕೂರಿಸಿ ಊಟ ಹಾಕುತ್ತಾರೆ. ಇತ್ತೀಚಿನ ದಿನಗಳಲ್ಲಿ ಅವಿದ್ಯಾವಂತರಿಗಿಂತ ವಿದ್ಯಾವಂತರಲ್ಲಿಯೇ ಇಂತಹ ಮಡಿ, ಮೈಲಿಗೆ ಮತ್ತು ಮೌಢ್ಯಗಳು ಹೆಚ್ಚಾಗುತ್ತಿವೆ. ಈ ಮೆಲ್ಕಂಡ ಎಲ್ಲಾ ಅಂಶಗಳು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದತಹುಗಳಾಗಿವೆ. ಈ ಸಮಾಜ ವ್ಯವಸ್ಥೆಯಲ್ಲಿ ಸಮಾನತೆಯೆಂಬುದು ಕೇವಲ ಮರೀಚಿಕೆಯಾಗಿದೆ.

"ಭಾರತದಲ್ಲಿ ಅತ್ಯಂತ ನಿಷ್ಕೃಷ್ಟಾವಸ್ಥೆಯಲ್ಲಿರುವ ಸಮಾಜವೆಂದರೆ ಅಸ್ಪೃಶ್ಯರೆಂದು ದೂರೀಕೃತರಾದ ತಳಸಮುದಾಯಗಳು. ಇವರನ್ನು ನಾಗರಿಕ ಯುಗದಲ್ಲಿ ಪರಿಶಿಷ್ಟ ಜನಾಂಗದವರೆಂದೋ, ಹಿಂದುಳಿದ ವರ್ಗದವರೆಂದೋ ಎತ್ತರಿಸುವ ಪ್ರಯತ್ನ ನಡೆಯುತ್ತಿರುವುದು ಪ್ರಶಂಸನೀಯವಾಗಿದೆ. ಹಾಗೆಯೇ ತಳಸಮುದಾಯಗಳ ಕೇರಿಯಲ್ಲಿ ಮನೆ ಕಟ್ಟಿ ವಾಸಿಸುವವರಿಗೆ, ತಳಸಮುದಾಯಗಳನ್ನು ವಿವಾಹವಾಗುವ ಇತರರಿಗೆ ಸರಕಾರ ಸಹಾಯಧನವನ್ನು ಕೊಟ್ಟು, ಅಸ್ಪೃಶ್ಯತೆಯನ್ನೂ, ಜಾತೀಯತೆಯನ್ನೂ ದೂರಗೊಳಿಸಲು ಪ್ರಯತ್ನಿಸುತ್ತದೆ. ಯಾರಾದರೂ ಇಂತಹ ಮನೋಕಾಂಕ್ಷೆಯುಳ್ಳವರಿದ್ದರೆ, ಪ್ರೋತ್ಸಾಹಿಸುತ್ತದೆ."[೨೦] ಸರ್ಕಾರ ತಳಸಮುದಾಯಗಳನ್ನು ಮೇಲೆತ್ತಲು ಕಾನೂನುಗಳನ್ನು ತಂದರೂ ಸಹ ಲಿಖಿತ ಸಂವಿಧಾನಕ್ಕಿಂತ ಅಲಿಖಿತ ಸಂವಿಧಾನವೇ ಅಸ್ತಿತ್ವದಲ್ಲಿರುತ್ತದೆ. ಉದಾಹರಣೆಗೆ ಜಾತಿಯ ಹೆಸರಿನಲ್ಲಿ ನಡೆಯುತ್ತಿರುವಂತಹ ಮರ್ಯಾದೆ ಹತ್ಯೆಗಳನ್ನು ಗಮನಿಸಬಹುದು.

## ದೇವಾಲಯ ಪ್ರವೇಶ

ತುಮಕೂರು ಜಿಲ್ಲೆಯ ತಿಪಟೂರು ತಾಲ್ಲೂಕಿನ ಬಿಸಲೆಹಳ್ಳಿ ತಳಸಮುದಾಯಗಳಲ್ಲಿ ಬಹುತೇಕರು ವಿದ್ಯಾವಂತರು, ಸರ್ಕಾರಿ ಉದ್ಯೋಗಿಗಳಾಗಿರುವ ಬಗ್ಗೆ 'ಪ್ರಜಾವಾಣಿ'ಯಲ್ಲಿ ಈ ಹಿಂದೆ ಲೇಖನ ಪ್ರಕಟವಾಗಿತ್ತು. ವೈದ್ಯರು, ಎಂಜಿನಿಯರ್, ತಹಶೀಲ್ದಾರ್, ಪ್ರೊಫೆಸರ್, ಶಿಕ್ಷಕರಾಗಿ ಅಷ್ಟೇ ಅಲ್ಲದೆ ಆರ್.ಬಿ.ಐ. ಸೇರಿದಂತೆ ಹಲವು ಬ್ಯಾಂಕ್‌ಗಳಲ್ಲಿ ಗ್ರಾಮದ ವಿದ್ಯಾವಂತ ತಳಸಮುದಾಯಗಳು ಉದ್ಯೋಗ ಪಡೆದಿರುವ ಹೆಚ್ಚುಗಾರಿಕೆ ಈ ಊರಿಗಿದೆ. ದಲಿತ ವಿಮೋಚನೆಗೆ ಸಾಕ್ಷಿಯಾದ ಇಂತಹ ಊರಿನಲ್ಲಿ ಅಲ್ಲಿನ ದೇವಾಲಯಗಳಿಗೆ ತಳ ಸಮುದಾಯದವರಿಗೆ ಪ್ರವೇಶ ಇರಲಿಲ್ಲ. ಆದರೆ ಸರ್ಕಾರದ ಆರ್ಥಿಕ ನೆರವಿನೊಂದಿಗೆ ಗ್ರಾಮದಲ್ಲಿ ಇತ್ತೀಚೆಗೆ ನಿರ್ಮಿಸಿದ್ದ ಆಂಜನೇಯ ದೇವಾಲಯ ಪ್ರವೇಶ ಮಹೋತ್ಸವ ಸಂದರ್ಭದಲ್ಲಿ ತಮ್ಮನ್ನು ಸಂಪೂರ್ಣ ನಿರ್ಲಕ್ಷಿಸಲಾಗಿದೆ ಎಂದು ತಳಸಮುದಾಯದವರು ಅಸಮಾಧಾನಗೊಂಡಿದ್ದರು ಮತ್ತು ತಾಲ್ಲೂಕು ಆಡಳಿತಕ್ಕೆ ದೂರು ಸಲ್ಲಿಸಿದ್ದರು.

"ಉಪವಿಭಾಗಾಧಿಕಾರಿ ನೇತೃತ್ವದಲ್ಲಿ ನಡೆದಿದ್ದ ಸಭೆಯಲ್ಲಿ ಎಲ್ಲ ಸಮುದಾಯದವರನ್ನು ಸೇರಿಸಿ ದೇಗುಲ ಪ್ರಾರಂಭೋತ್ಸವ ಸಮಾರಂಭ ನಡೆಸಲು ನಿರ್ಧರಿಸಲಾಗಿತ್ತು. ಆಹ್ವಾನ ಪತ್ರಿಕೆಯಲ್ಲಿ ಕೆಲವು ದಲಿತ ಮುಖಂಡರ ಹೆಸರು ಸೇರಿಸಲಾಗಿತ್ತು. ಆಂಜನೇಯಸ್ವಾಮಿ ದೇಗುಲ ಪ್ರವೇಶ ಮಹೋತ್ಸವ ಸಂದರ್ಭದಲ್ಲಿ ಮುಂಜಾಗ್ರತಾ ಕ್ರಮವಾಗಿ ಪೊಲೀಸ್ ಪಡೆ ನಿಯೋಜಿಸಲಾಗಿತ್ತು. ತಳಸಮುದಾಯದವರು ನಿರಾಯಾಸವಾಗಿ ದೇಗುಲ ಪ್ರವೇಶಿಸಿ ಪೂಜೆ ಸಲ್ಲಿಸಿದರು. ಗ್ರಾಮದ ಸಿದ್ಧಲಿಂಗೇಶ್ವರ ಗದ್ದುಗೆ, ಕೊಲ್ಲಾಪುರದಮ್ಮ ದೇಗುಲಕ್ಕೂ ಇದೇ ಮೊದಲ ಬಾರಿಗೆ ಪ್ರವೇಶಿಸಿದರು.[೨೧] ಈ ತರಹದ ಸಮಸ್ಯೆ ಒಂದು ಹಳ್ಳಿಯದ್ದಲ್ಲ. ತಳಸಮುದಾಯಗಳು ವಾಸಿಸುವ ಜಿಲ್ಲೆಯ ಪ್ರತಿ ಹಳ್ಳಿಯಲ್ಲೂ ಇದೆ. ತಳಸಮುದಾಯಗಳು ಬೆರಳೆಣಿಕೆಯಷ್ಟು ಮುಜರಾಯಿ ದೇವಾಲಯಗಳನ್ನು ಹೊರತುಪಡಿಸಿದರೆ ಯಾವ ದೇವಾಲಯಗಳನ್ನು ಪ್ರವೇಶಿಸುವಂತಿಲ್ಲ.

ತುಮಕೂರು ತಾಲ್ಲೂಕಿನ ಮಲ್ಲಸಂದ್ರ ಸಮೀಪದ ಕೊತ್ತಿಹಳ್ಳಿಯಲ್ಲಿ ಗ್ರಾಮ ದೇವತೆ ಕುಚ್ಚಂಗಿಯಮ್ಮ ಜಾತ್ರೆ ಸಂದರ್ಭದಲ್ಲಿ ತಳಸಮುದಾಯದ ಕೆಲವರು ತಾವೇ ದೇವರಿಗೆ ಪೂಜೆ ಸಲ್ಲಿಸಲು ಮುಂದಾಗಿದ್ದಕ್ಕೆ ಜಾತ್ರೆಯನ್ನೇ ನಿಲ್ಲಿಸಿದ್ದು ಪ್ರಜಾವಾಣಿ ಪತ್ರಿಕೆಯಲ್ಲಿ ವರದಿಯಾಗಿತ್ತು. "ನಾವು ಪೂಜೆ ಸಲ್ಲಿಸಲು ಹೋದಾಗ ಅರ್ಚಕ ಚಿಕ್ಕಣ್ಣ ದೇವಸ್ಥಾನದಿಂದ ಹೊರನಡೆದರು. ಇದನ್ನು ನಾವು ಪ್ರಶ್ನಿಸಿದೆವು. ಆಗ ಅಲ್ಲಿದ್ದ ಉಳಿದ ಸಮುದಾಯದ ಜನರೂ ಹೊರಟು ಹೋದರು. ಸ್ವಲ್ಪ ಹೊತ್ತಿನ ಬಳಿಕ ದೇವಸ್ಥಾನಕ್ಕೆ ಹಾಕಿದ್ದ ವಿದ್ಯುತ್

ದೀಪಗಳು, ಧ್ವನಿವರ್ಧಕಗಳನ್ನು ತೆಗೆದರು. ಬಳಿಕ ಜಾತ್ರೆ ನಡೆಯಲಿಲ್ಲ"[೨೨] ಎಂದು ತಳಸಮುದಾಯದ ನಿವಾಸಿಗಳು ಗ್ರಾಮಕ್ಕೆ ಭೇಟಿ ನೀಡಿದ ತಹಶೀಲ್ದಾರ್ ನೇತೃತ್ವದ ಅಧಿಕಾರಿಗಳ ತಂಡಕ್ಕೆ ವಿವರಿಸಿದರು.

"ಪ್ರತಿ ವರ್ಷದಂತೆ ಈ ವರ್ಷ ಹೊರಗಡೆ ನಿಂತು ಪೂಜೆ ಸಲ್ಲಿಸುವುದಿಲ್ಲ. ನಾವೇ ಪೂಜೆ ಮಾಡುತ್ತೇವೆ. ನಮ್ಮ ಓಣಿಯಲ್ಲೂ ಉತ್ಸವ ಮೂರ್ತಿ ಸಾಗಬೇಕು. ಮೆರವಣಿಗೆ, ಪೂಜೆಗೆ ತಗಲುವ ವೆಚ್ಚವನ್ನೂ ಭರಿಸುತ್ತೇವೆ ಎಂದು ಜಾತ್ರೆಗೆ ಮುನ್ನ ಡಿವೈಎಸ್ಪಿ ನಾಗರಾಜ್ ಅವರ ಸಮ್ಮುಖದಲ್ಲಿ ನಡೆದ ಶಾಂತಿ ಸಭೆಯಲ್ಲಿ ಹೇಳಿದ್ದೆವು. ಇದಕ್ಕೆ ಗ್ರಾಮದ ಇತರ ಸಮುದಾಯದವರೂ ಒಪ್ಪಿದ್ದರು. ಸಹಕಾರ ನೀಡುವುದಾಗಿ ಸಹಿಯನ್ನೂ ಹಾಕಿದ್ದರು."[೨೩] ಎಂದು ತಳಸಮುದಾಯದವರು ಹೇಳುತ್ತಿದ್ದರು. ದೇವಸ್ಥಾನಗಳು ಜಾತಿಯ ಕೇಂದ್ರಗಳಾಗಿವೆ. ಉತ್ಸವದ ಸಂದರ್ಭದಲ್ಲಿ ದೇವರುಗಳನ್ನು ತಳಸಮುದಾಯಗಳ ಕೇರಿಗೆ ಕರೆತರುವುದಿಲ್ಲ. ದೇವರಿಗೆ ಆರತಿ ಆಚರಣೆ ಮಾಡಿದರೆ ಮೊದಲು ಸವರ್ಣೀಯರ ಆರತಿಗಳು ಹೋಗಿ ಪೂಜೆ ಸಲ್ಲಿಸಿದ ನಂತರ, ತಳಸಮುದಾಯಗಳ ಆರತಿಗಳು ಪ್ರತ್ಯೇಕವಾಗಿ ಹೋಗಬೇಕು, ಪೂಜೆ ಸಲ್ಲಿಸಬೇಕು. ತಳಸಮುದಾಯಗಳು ಯಾವ ದೇವಸ್ಥಾನವನ್ನು ಪ್ರವೇಶಿಸುವಂತಿಲ್ಲ. ದೇವಾಲಯದ ಹೊರಗೆ ನಿಂತು ಪೂಜೆ ಸಲ್ಲಿಸಬೇಕು. ತಳಸಮುದಾಯಗಳು ದೇವಾಲಯವನ್ನು ಪ್ರವೇಶಿಸಿದರೆ, ತಳಸಮುದಾಯಗಳಿಗೆ ಕೆಟ್ಟದ್ದು ಉಂಟಾಗುತ್ತದೆ ಎಂಬ ನಂಬಿಕೆಗಳನ್ನು ಅವರಲ್ಲಿ ಬಿತ್ತಲಾಗಿದೆ.

ಚಾತುರ್ವರ್ಣಕ್ಕೆ ಸೇರಿದ ಸವರ್ಣೀಯರು ಮತ್ತು ಅದರಿಂದ ಹೊರತಾದ ಅವರ್ಣೀಯರ ನಡುವಿನ ವಿಭಜನೆ ಮಾತ್ರ ಸ್ವಲ್ಪವೂ ಮಾಸದೇ ಇಂದಿಗೂ ಅಭೇದ್ಯವಾಗಿದೆ. ಆ ಪ್ರಭೇದ ಸವರ್ಣೀಯರನ್ನು ಮತ್ತು ತಳಸಮುದಾಯಗಳನ್ನು ಇಂದಿಗೂ ಸ್ಪಷ್ಟವಾಗಿ ಬೇರ್ಪಡಿಸುತ್ತದೆ. ಪ್ರಕೃತಿಯಲ್ಲಿ ಹೇಗೆ ಬದಲಾವಣೆಗಳು ಆಗುತ್ತಿವೆಯೋ, ಮಾನವ ಸಮಾಜದ ವಿವಿಧ ಭಾಗಗಳಲ್ಲಿ ಬದಲಾವಣೆಗಳು ಆಗುತ್ತಿರುವಂತೆ, ಜಾತಿ ವ್ಯವಸ್ಥೆಯಲ್ಲೂ ಬದಲಾವಣೆ/ಪರಿವರ್ತನೆ ಆಗಲೇಬೇಕು. ೧೭, ೧೬, ೧೮ ಹಾಗೂ ೨೦ನೇ ಶತಮಾನಗಳಲ್ಲಿದ್ದ ಜಾತಿಯತೆಯ ಬಿಗಿಮುಷ್ಠಿ ಈಗಿಲ್ಲ, ಬದಲಾಗಿದೆ. ಆದರೆ ನಾಶವಾಗಿಲ್ಲ.

ಬಾಡಿಗೆ ಮನೆಗೂ ಜಾತಿ ಇರುವುದನ್ನು ಎರಡು ಪ್ರಮುಖ ಘಟನೆಗಳ ಮೂಲಕ ಅಧ್ಯಯನ ಮಾಡಬಹುದು. ವಿಜಯ ಕುಮಾರ್ ಕೆ.ಟಿ. ಅವರು ತಮ್ಮ ಜೀವನದಲ್ಲಾದ ಘಟನೆಗಳನ್ನು ಕುರಿತು ವಿವರಿಸುತ್ತಾರೆ. "ನಾವು ಜಾತಿಯಲ್ಲಿ ಪರಿಶಿಷ್ಟರಾಗಿದ್ದು, ತುಮಕೂರಿನಲ್ಲಿ ನಮ್ಮ ತಂದೆ ತಾಯಿ ವಾಸವಾಗಿದ್ದಾರೆ. ನಮ್ಮ ಮನೆಯೊಂದು ಖಾಲಿ ಬಿದ್ದು ತಿಂಗಳುಗಳೇ

ಕಳೆದಿತ್ತು. ಮನೆ ಹುಡುಕಿಕೊಂಡು ಬಂದವರು ಗೋಡೆಯ ಮೇಲೆ ನೇತಾಡುತ್ತಿದ್ದ 'ಗುಬ್ಬಿ ಚನ್ನಬಸವೇಶ್ವರ ಸ್ವಾಮಿ' ಫೋಟೋ ನೋಡಿ ಏನೋ ಲೆಕ್ಕ ಹಾಕಿ ಒಪ್ಪಿಕೊಂಡು ಹೋದರು. ಅದೇ ಭಾನುವಾರ ರಜೆ ನಿಮಿತ್ತ ನಾನು ಊರಿಗೆ ಹೋಗಿದ್ದವನು ಸ್ನೇಹಿತರು ಕೊಟ್ಟಿದ್ದ ಅಂಬೇಡ್ಕರ್ ಭಾವಚಿತ್ರವನ್ನು ಮನೆಯಲ್ಲಿ ತೂಗು ಹಾಕಿ ಬಂದಿದ್ದೆ. ಮರುದಿನ ಬಾಡಿಗೆದಾರರು ತನ್ನ ಕುಟುಂಬ ವರ್ಗದವರಿಗೆ ಬಾಡಿಗೆ ಮನೆ ತೋರಿಸಲು ಬಂದಿದ್ದಾರೆ. ಈ ವೇಳೆ ಅಂಬೇಡ್ಕರ್ ಭಾವಚಿತ್ರವನ್ನು ನೋಡಿ ಗಾಬರಿಯಾಗಿದ್ದಾರೆ. ಕುಡಿಯಲು ಎತ್ತಿದ ನೀರಿನ ತಂಬಿಗೆಯನ್ನು ಕೆಳಗಿಳಿಸಿದ್ದಾರೆ. ಒಂದು ಕ್ಷಣ ವಿಚಲಿತರಾಗಿ ಅಲ್ಲಿಂದ ಪಲಾಯನ ಮಾಡಿದ್ದಾರೆ."[೨೪]

ಇದೇ ರೀತಿಯ ಇನ್ನೊಂದು ಉದಾಹರಣೆ ನೀಡುವುದಾದರೆ "ನಾನು ಬೆಂಗಳೂರಿನಲ್ಲಿ ವಾಸ ಮಾಡಲು ಮನೆ ಹುಡುಕುವಾಗ ಜಾತಿ ಪೆಡಂಭೂತ ಕಾಡಿದ ರೀತಿ ಹೇಳಲು ಅಸಾಧ್ಯವಾದದ್ದು. ಬಾಡಿಗೆ ಮನೆ ಎಲ್ಲೂ ಸಿಗಲಿಲ್ಲ. ಕೊನೆಗೆ ನನ್ನ ಸ್ನೇಹಿತ(ಅವನು ಪರಿಶಿಷ್ಟ) ತಾವು ಗೌಡರೆಂದು ಸುಳ್ಳು ಹೇಳಿ ಮನೆ ಕೊಡಿಸಿದ್ದ. ಆದರೆ ಇದು ನನಗೆ ತಿಳಿದಿರಲಿಲ್ಲ. ಮನೆಯ ಗೋಡೆಗೆ ಅಂಬೇಡ್ಕರ್ ಫೋಟೋ ಹಾಕುವಾಗ ಅದನ್ನು ತಡೆಯುತ್ತಿದ್ದ. ಕೊನೆಗೆ ಅವನಿಗೆ ಬೈದು ಫೋಟೋ ಹಾಕಿದೆ. ಅಷ್ಟರಲ್ಲಿ ಮನೆಯೊಳಗೆ ಪ್ರವೇಶಿಸಿದ ಮನೆಯ ಮಾಲೀಕರು ಫೋಟೋ ನೋಡಿ ನಾನು ದಲಿತನೆಂದು ಕ್ಷಣಾರ್ಧದಲ್ಲಿ ಅವರಿಗೆ ತಿಳಿದು ಬಿಟ್ಟಿತು. ನಂತರ ನನ್ನ ಮನೆಯಿಂದ ಹೊರಹಾಕಲು ಅನೇಕ ಸಂಚು ಹೂಡಿದ್ದರು. ಇದ್ದಕ್ಕಿದ್ದ ಹಾಗೆ ಮನೆ ಬಾಡಿಗೆ ಹೆಚ್ಚಿಸಿದರು. ಅನೇಕ ನಿಯಮಗಳನ್ನು ಹಾಕಿದರು. ಇದರ ಹಿಂದಿನ ಸತ್ಯ ಏನೆಂದು ಗೊತ್ತಾದ ಮೇಲೆ ಬಹಳ ಬೇಸರವಾಗಿತ್ತು. ಬೆಂಗಳೂರು ಎಂಬ ಮಾಯ ನಗರಿಯಲ್ಲೂ ಜಾತಿ ತಾಂಡವವಾಡುತ್ತಿರುವುದು ನೋವನ್ನು ತಂದಿತ್ತು."[೨೫] ಮನುಷ್ಯ ಸತ್ತರೂ ಅವನ ಜಾತಿ ಸಾಯುವುದಿಲ್ಲ. ಈ ಸಮಸ್ಯೆ ವಿಜಯಕುಮಾರ್ ಅವರೊಬ್ಬರ ಸಮಸ್ಯೆ ಅಲ್ಲ. ಇಡೀ ತಳಸಮುದಾಯದ ಬದುಕಿನ ಪ್ರಶ್ನೆಯಾಗಿದೆ. ವ್ಯಕ್ತಿ ತಳಸಮುದಾಯದವರು ಎಂದು ಗೊತ್ತಾದರೆ ಹಳ್ಳಿಗಳಲ್ಲೇ ಆಗಲಿ, ನಗರಗಳಲ್ಲೇ ಆಗಲಿ ಬಾಡಿಗೆ ಮನೆ ಸಿಗುವುದಿಲ್ಲ. ಬಹಳಷ್ಟು ಸಂದರ್ಭದಲ್ಲಿ ಜಾತಿಯನ್ನು ಮರೆಮಾಚಿ ಬಾಡಿಗೆ ಮನೆಯಲ್ಲಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಕೊಳ್ಳಲಾಗಿದೆ.

### ೩.೧. ಅಸ್ಪೃಶ್ಯತೆಯ ಮೂಲ

ಅಸ್ಪೃಶ್ಯತೆ ಮತ್ತು ಜಾತಿಗಳ ಸೃಷ್ಟಿಯ ಕುರಿತು ಅನೇಕ ವಿದ್ವಾಂಸರು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಇವೆಲ್ಲವನ್ನು ಕ್ರೋಢೀಕರಿಸಿದರೆ ಇಲ್ಲಿ ಒಟ್ಟು ಆರು ಬಗೆಗಳು ಕಾಣುತ್ತವೆ. ಅವು "ಜನಾಂಗ ಭೇದ, ವೃತ್ತಿ ಭೇದ, ಆಹಾರ ಭೇದ, ಶರೀರದ ವರ್ಣಭೇದ, ವರ್ಣಸಂಕರ

ಭೇದ ಮತ್ತು ಧರ್ಮಗಳ ಉಗಮ."[೨೬] ಇವುಗಳ ಬಗ್ಗೆ ಸಾವುಕಾರ ಎಸ್.ಕಾಂಬಳೆ ಅವರು 'ಅಸ್ಪೃಶ್ಯತೆ ಸೃಷ್ಟಿಯ ಕಾರಣ ಅರಸುತ್ತಾ' ಎಂಬ ಲೇಖನದಲ್ಲಿ ಚರ್ಚಿಸಿದ್ದಾರೆ. ಅಸ್ಪೃಶ್ಯತೆಯ ಉಗಮಕ್ಕೆ ಗೋವಿನ ಮಾಂಸವನ್ನು ತಿನ್ನುವುದು ಯಾವ ರೀತಿಯಲ್ಲಾದರೂ ಸಂಬಂಧಿಸಿದೆಯೆ? ಅಥವಾ ಅಸ್ಪೃಶ್ಯರ ಆರ್ಥಿಕ ಜೀವನದಲ್ಲಿ ಇದೊಂದು ಸಾಮಾನ್ಯ ಪ್ರಸಂಗವೊ? ಗೋವಿನ ಮಾಂಸವನ್ನು ತಿನ್ನುತ್ತಿದ್ದುದರಿಂದ ಬಿಡಿ ಜನರನ್ನು ಅಸ್ಪಶ್ಯರನ್ನಾಗಿ ನಡೆಸಿಕೊಳ್ಳಲಾಯಿತೆಂದು ಹೇಳಬಹುದೊ? ಮೊದಲಾದ ವಿಷಯಗಳನ್ನು ಕುರಿತು ಡಾ.ಬಿ.ಆರ್.ಅಂಬೇಡ್ಕರ್ ಅವರು ಚರ್ಚಿಸುತ್ತಾರೆ.

ಸಾಮಾನ್ಯವಾಗಿ ಅಸ್ಪೃಶ್ಯ ಪಂಗಡದವರೆಂದು ವಿಂಗಡಿಸಲಾಗುವವರಲ್ಲಿ ಪ್ರಧಾನವಾಗಿ ಕಾಣಬರುವ ಆಹಾರಾಂಶವು ಸತ್ತ ಗೋವುಗಳ ಮಾಂಸವೆಂದು ಜನಗಣತಿಯ ದಾಖಲೆಗಳು ತೋರಿಸುತ್ತವೆ. ಎಷ್ಟೇ ಕನಿಷ್ಠ ಮಟ್ಟಕ್ಕೆ ಸೇರಿದವರಾಗಿರಲಿ ವೈದಿಕ ಪಂಗಡದಲ್ಲಿ ಯಾರೂ ಗೋವಿನ ಮಾಂಸವನ್ನು ಮುಟ್ಟುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಯಾವ ಪಂಗಡವೇ ಇರಲಿ, ಅದು ತಳಸಮುದಾಯದವರ ಪಂಗಡವಾಗಿದ್ದಲ್ಲಿ ಅವರು ಸತ್ತ ಗೋವಿನೊಡನೆ ಎಂತಹದ್ದಾದರೂ ಒಂದು ಸಂಬಂಧವಿಲ್ಲದವರು ಯಾರೂ ಇಲ್ಲ. ಅವರಲ್ಲಿ ಕೆಲವರು ಅದರ ಮಾಂಸವನ್ನು ತಿನ್ನುತ್ತಾರೆ. ಕೆಲವರು ಅದರ ಚರ್ಮವನ್ನು ಸುಲಿಯುತ್ತಾರೆ. ಮತ್ತೆ ಕೆಲವರು ಅದರ ಚರ್ಮ ಮತ್ತು ಮೂಳೆಗಳಿಂದ ಏನಾದರೊಂದು ಪದಾರ್ಥವನ್ನು ತಯಾರಿಸುತ್ತಾರೆ. ಅಸ್ಪೃಶ್ಯತೆಯ ಉಗಮಕ್ಕೆ ಗೋವಿನ ಮಾಂಸವನ್ನು ತಿನ್ನುವುದು ಪ್ರಧಾನ ಕಾರಣವಾಗಿದ್ದಿತೇ ಇಲ್ಲವೆ ಎಂಬುದರ ಬಗ್ಗೆ ಊಹಾಪೋಹದಲ್ಲಿ ತೊಡಗುವುದು ಅವಶ್ಯಕವಲ್ಲ. ಈ ಹೊಸ ಸಿದ್ಧಾಂತಕ್ಕೆ ವೈದಿಕರ ಶಾಸ್ತ್ರಗ್ರಂಥಗಳಲ್ಲಿಯೇ ಸಾಕಷ್ಟು ಆಧಾರಗಳು ದೊರೆಯುತ್ತವೆ. ಅಂತ್ಯಜರ ಗುಂಪಿನಲ್ಲಿ ಯಾವ ಯಾವ ಸಮುದಾಯದವರು ಸೇರಿದ್ದಾರೆ ಮತ್ತು ಅವರನ್ನೇಕೆ ಹಾಗೆ ವಿಂಗಡಿಸಲಾಗಿದೆ ಎಂಬುದನ್ನು ನಿರ್ದೇಶಿಸುವ ಒಂದು ಶ್ಲೋಕವು ವೇದವ್ಯಾಸ ಸ್ಮೃತಿಯಲ್ಲಿರುವುದನ್ನು ಅಂಬೇಡ್ಕರ್ ಅವರು ತಮ್ಮ ಸಂಪುಟದಲ್ಲಿ ಉಲ್ಲೇಖ ಮಾಡಿದ್ದಾರೆ. ಅದು ಈ ಕೆಳಕಂಡಂತಿದೆ.

"೧. ೧೨–೧೩: ಚರ್ಮಕಾರ(ಮೋಚಿ), ಭಟ(ಸೈನಿಕ, ಭಿಲ್ಲ, ರಜಕ(ಅಗಸ), ಪುಷ್ಕರ, ನಟ, ವ್ರಾತ, ಮೇದ, ಚಂಡಾಲ, ದಾಸ, ಶ್ವಪಚ, ಮ್ತು ಕೋಲಿಕ –ಇವರನ್ನು ಹಾಗೂ ಗೋವಿನ ಮಾಂಸವನ್ನು ತಿನ್ನುವವರನ್ನು ಅಂತ್ಯಜರೆಂದು ಕರೆಯಲಾಗಿದೆ."[೨೭] ಈ ವಿಷಯವನ್ನು ಕುರಿತಂತೆ ಅಸ್ಪೃಶ್ಯತೆಗೆ ಕಾರಣವನ್ನು ವೇದವ್ಯಾಸರು ನೀಡಹೊರಟಿದ್ದಾರೆ. ಮೇಲಿನ ಶ್ಲೋಕದಲ್ಲಿ 'ಗೋವಿನ ಮಾಂಸವನ್ನು ತಿನ್ನುವವರು' ಎಂಬ ಭಾಗವು ಪ್ರಮುಖವಾದದ್ದು. ಅಸ್ಪೃಶ್ಯತೆಯ ಉಗಮವು ಗೋವಿನ ಮಾಂಸವನ್ನು ತಿನ್ನುವುದರಲ್ಲಿದೆಯೆಂಬುದನ್ನು ಸ್ಮೃತಿಕಾರರು ಅರಿತಿದ್ದರೆಂಬುದನ್ನದು ತೋರಿಸುತ್ತದೆ.

ಅಸ್ಪೃಶ್ಯತೆಗೆ ಗೋಮಾಂಸ ಭಕ್ಷಣೆಯು ಕಾರಣವಾಗಿದ್ದಿತೆನ್ನುವ ಸಿದ್ಧಾಂತವು ಅನೇಕ ಪ್ರಶ್ನೆಗಳಿಗೆ ಎಡೆ ಮಾಡಿಕೊಡುತ್ತದೆ. ಗೋವಿನ ಮಾಂಸ ತಿನ್ನುವುದರ ಬಗ್ಗೆ ಹಿಂದುಗಳಿಗಿರುವ ಅಸಹ್ಯತೆಗೆ ಕಾರಣವೇನು? ಹಿಂದುಗಳು ಯಾವಾಗಲೂ ಗೋಮಾಂಸ ಭಕ್ಷಣೆಯನ್ನು ವಿರೋಧಿಸುತ್ತಿದ್ದರೆ? ಇಲ್ಲವಾದಲ್ಲಿ ಅವರೇಕೆ ಅದರ ವಿರುದ್ಧ ಅಷ್ಟು ಅಸಹ್ಯ ಭಾವನೆಯನ್ನು ಬೆಳೆಸಿಕೊಂಡರು? ಅಸ್ಪೃಶ್ಯರು ಮೊದಲಿನಿಂದಲೂ ಹಸುವಿನ ಮಾಂಸವನ್ನು ತಿನ್ನುವವರೇ ಆಗಿದ್ದರೆ? ಹಿಂದೂಗಳು ಅದನ್ನು ತಿನ್ನುವುದನ್ನು ಕೈಬಿಟ್ಟಾಗ ಅವರೇಕೆ ಅದನ್ನು ತೊರೆಯಲಿಲ್ಲ? ಅಸ್ಪೃಶ್ಯರು ಯಾವಾಗಲೂ ಅಸ್ಪೃಶ್ಯರಾಗಿಯೇ ಇದ್ದರೆ? ಯಾವುದೋ ಒಂದು ಕಾಲದಲ್ಲಿ ಅಸ್ಪೃಶ್ಯರು ಹಸುವಿನ ಮಾಂಸವನ್ನು ತಿಂದಾಗ್ಯೂ ಅಸ್ಪೃಶ್ಯರಾಗಿರಲಿಲ್ಲವಾದರೆ ನಂತರದ ಕಾಲದಲ್ಲಿ ಅದನ್ನು ತಿನ್ನುವುದರಿಂದ ಅವರೇಕೆ ಅಸ್ಪೃಶ್ಯರಾದರು? ಹಿಂದುಗಳು ಮೊದಲಿಗೆ ಹಸುವಿನ ಮಾಂಸವನ್ನು ತಿನ್ನುತ್ತಿದ್ದರೆಂದಾದರೆ ಅವರು ಅದನ್ನು ಕೈಬಿಟ್ಟದ್ದು ಯಾವಾಗ? ಹಸುವಿನ ಮಾಂಸವನ್ನು ತಿನ್ನುವುದರ ವಿರುದ್ಧ ಅಸಹ್ಯತೆಯ ಪರಿಣಾಮ ಅಸ್ಪೃಶ್ಯತೆ ಎನ್ನುವುದಾದರೆ ಹಿಂದೂಗಳು ಅದನ್ನು ತಿನ್ನುವುದನ್ನು ಕೈಬಿಟ್ಟ ಎಷ್ಟು ಕಾಲದ ನಂತರ ಅಸ್ಪೃಶ್ಯತೆಯು ಅಸ್ತಿತ್ವಕ್ಕೆ ಬಂದಿತು? ಮೊದಲಾದ ವಿಷಯಗಳನ್ನು ಕುರಿತು ಡಾ.ಬಿ.ಆರ್.ಅಂಬೇಡ್ಕರ್ ಅವರು ವಿಸ್ತೃತವಾಗಿ ಚರ್ಚಿಸಿದ್ದಾರೆ.

ಋಗ್ವೇದದಲ್ಲಿರುವ ಎರಡು ದಾಖಲೆಗಳ ಸರಣಿಗಳನ್ನು ಇದರ ಪರವಾಗಿರುವುದಾಗಿ ನಂಬಲಾಗಿದೆ. ಅವುಗಳ ಪೈಕಿ ಒಂದರಲ್ಲಿ ಹಸುವನ್ನು "ಅಘ್ನ್ಯಾ" ಎಂದು ಕರೆಯಲಾಗಿದೆ. ಅದು ಋಗ್ವೇದದ ೧–೧೬೪–೨೭, ೪.೧–೬೫.೮೨–೮, ೭–೬೯–೭೧ ಮತ್ತು ೧೦–೮೭ ಇಲ್ಲಿ ಕಾಣಸಿಗುತ್ತದೆ. 'ಅಘ್ನ್ಯಾ' ಎಂದರೆ 'ಕೊಲ್ಲಲು ಅರ್ಹವಲ್ಲದ್ದು'(ಕೊಲ್ಲಬಾರದ ಪ್ರಾಣಿ) ಎಂದರ್ಥ."[೨೮] ಹಸುವನ್ನು ಕೊಲ್ಲುವುದರ ವಿರುದ್ಧ ಇದೊಂದು ನಿಷೇಧಾಜ್ಞೆಯೆಂದು ಇದನ್ನನುಸರಿಸಿ ವಾದ ಮಾಡಲಾಗಿದೆ.

ಹಸುವನ್ನು ಪವಿತ್ರವೆಂದು ಪರಿಗಣಿಸಿದ್ದರಿಂದಲೇ ಅದನ್ನು ಕೊಲ್ಲಲಾಗುತ್ತಿತ್ತು. ಮಾನ್ಯ ಕಾಣೆ ಅವರು ಗಮನಿಸಿರುವುದನ್ನು ಅಂಬೇಡ್ಕರ್ ಅವರು ಉಲ್ಲೇಖ ಮಾಡಿದ್ದಾರೆ. "ವೈದಿಕ ಕಾಲದಲ್ಲಿ ಹಸುವು ಪವಿತ್ರವೆಂದೆಣಿಸಲಾಗಿರಲಿಲ್ಲವೆಂದಲ್ಲ; ಅದರ ಪವಿತ್ರತೆಯಿಂದಾಗಿಯೇ ಹಸುವಿನ ಮಾಂಸವನ್ನು ತಿನ್ನಬೇಕೆಂದು ವಾಜಸನೇಯಿ ಸಂಹಿತೆಯಲ್ಲಿ ವಿಧಿಸಲಾಗಿರುವುದು."[೨೯] ಋಗ್ವೇದದ ಕಾಲದ ಆರ್ಯರು ಆಹಾರ ನಿಮಿತ್ತವಾಗಿ ಹಸುಗಳನ್ನು ಕೊಲ್ಲುತ್ತಿದ್ದರೆಂಬುದು ಹಾಗೂ ಹಸುವಿನ ಮಾಂಸವನ್ನು ತಿನ್ನುತ್ತಿದ್ದರೆಂಬುದು ಋಗ್ವೇದದಿಂದಲೇ ಹೆಚ್ಚು ಸಾಬೀತಾಗುತ್ತದೆ. ಮೇಲ್ಕಂಡ ಎಲ್ಲಾ ಆಧಾರಗಳ ಮೂಲಕ ಬ್ರಾಹ್ಮಣರು ಮತ್ತು ಬ್ರಾಹ್ಮಣೇತರರಿಬ್ಬರೂ ಮಾಂಸವನ್ನು

ಮಾತ್ರವಲ್ಲ, ಗೋಮಾಂಸವನ್ನು ಸಹ ತಿನ್ನುತ್ತಿದ್ದ ಕಾಲವೊಂದು ಹಿಂದೆ ಇದ್ದಿತೆಂಬುದನ್ನು ತಿಳಿಯಬಹುದಾಗಿದೆ.

ಬ್ರಾಹ್ಮಣರು ಸಸ್ಯಹಾರಿಗಳಾಗಲು ಕಾರಣ ಏನು ಎಂಬುದನ್ನು ಡಾ.ಬಿ.ಆರ್ ಅಂಬೇಡ್ಕರ್ ಅವರು ಈ ರೀತಿ ವಿಶ್ಲೇಷಿಸಿದ್ದಾರೆ. ಜನಸಾಮಾನ್ಯರಲ್ಲಿ ಬೌದ್ಧರು ಪ್ರಮುಖವಾದ ಸ್ಥಾನವನ್ನು, ಯಜ್ಞಕ್ಕಾಗಿ ಗೋಹತ್ಯೆ ಮಾಡುವುದನ್ನು ವಿರೋಧಿಸುವುದರ ಮೂಲಕ ಪಡೆದುಕೊಂಡಿದ್ದರು. ಆದರೆ ಬ್ರಾಹ್ಮಣರು ತಮ್ಮ ಉದ್ದೇಶವನ್ನು ಈಡೇರಿಸಿಕೊಳ್ಳಲು ವಿನಾಶಕಾರಿ ದಾಳಿಕಾರನ ತಂತ್ರವನ್ನು ಹೂಡಬೇಕಾಗಿತ್ತು. ಈ ತಂತ್ರ ಅತಿಯನ್ನು ಅತಿಯಿಂದಲೆ ವಿರೋಧಿಸುವುದಾಗಿತ್ತು. ಎಡಪಂಥಿಯರನ್ನು ತುಳಿದು ಎಲ್ಲ ಬಲಪಂಥಿಯರೂ ಇದೇ ತಂತ್ರ ಬಳಸುತ್ತಾರೆ. ಬೌದ್ಧರನ್ನು ಹಿಮ್ಮೆಟ್ಟಿಸುವುದೆಂದರೆ, ಅವರಿಗಿಂತ ಒಂದು ಹೆಜ್ಜೆ ಮುಂದೆ ಹೋಗಿ, ಸಸ್ಯಾಹಾರಿಗಳಾಗುವುದೇ ಆಗಿತ್ತು.

"ಬ್ರಾಹ್ಮಣರು ಗೋಪೂಜೆ ಮಾಡಲು ಪ್ರಾರಂಭಿಸಿ ಸಸ್ಯಾಹಾರಿಗಳಾಗಿ, ಗೋಮಾಂಸ ತ್ಯಜಿಸಿದ್ದು, ಬೌದ್ಧರನ್ನು ಸೋಲಿಸಲಿಕ್ಕೆ. ಇನ್ನೊಂದು ನಂಬಲರ್ಹವಾದ ಕಾರಣವಿದೆ. ಅದು ಗೋವಧೆ ಒಂದು ಮಹಾಪಾಪವೆಂದು ಪರಿಗಣಿಸಲಾದ ದಿನ. ಗೋಹತ್ಯೆಯನ್ನು ಅಪರಾಧವೆಂದು ಅಶೋಕ ವಿಧಿಸಲಿಲ್ಲ. ಅನೇಕ ಜನ, ಆತ ಗೋಹತ್ಯೆ ನಿಷೇಧಿಸುತ್ತಾನೆ ಎಂಬ ನಿರೀಕ್ಷೆ ಇಟ್ಟುಕೊಂಡಿದ್ದರು. ಪ್ರೊ. ವಿನ್ಸೆಂಟ್ ಸ್ಮಿತ್ ಇದನ್ನು ಆಶ್ಚರ್ಯಕರ ಎಂದು ಭಾವಿಸುತ್ತಾರೆ. ಬೌದ್ಧ ಮತ ಪ್ರಾಣಿ ಬಲಿ ಕೊಡುವುದನ್ನು ಸಾಮಾನ್ಯವಾಗಿ ವಿರೋಧಿಸಿತು. ಆ ಮತಕ್ಕೆ ಹಸುವಿನ ಬಗ್ಗೆ ಮಮತೆ ಇರಲಿಲ್ಲ. ಆದ್ದರಿಂದ ಅಶೋಕ ಹಸುವಿನ ರಕ್ಷಣೆಗಾಗಿಯೇ ಕಾನೂನೊಂದನ್ನು ಮಾಡುವ ವಿಶೇಷ ಕಾರಣವೇನಿರಲಿಲ್ಲ. ಇನ್ನೂ ಹೆಚ್ಚಿನ ಆಶ್ಚರ್ಯಕರ ಸಂಗತಿ ಎಂದರೆ ಗೋಹತ್ಯೆಯನ್ನು ಮಹಾಪಾತಕವೆಂದು ಮಾಡಿದವರು, ಹಿಂದೂ ಮತದ ವೀರಾಗ್ರಣಿಗಳಾದ ಗುಪ್ತರು."[೨೦] ಈ ರೀತಿಯಾಗಿ ಬ್ರಾಹ್ಮಣರು ಸಸ್ಯಾಹಾರಿಗಳಾದರು. ಬ್ರಾಹ್ಮಣ ಮತ ಮತ್ತು ಬೌದ್ಧ ಮತದ ನಡುವಣ ಹೋರಾಟದಲ್ಲಿ ಗೋಪೂಜೆಯು ಬಳಕೆಗೆ ಬಂದಿತು. ಅದು ಬ್ರಾಹ್ಮಣರು ತಾವು ಕಳೆದುಕೊಂಡ ಸ್ಥಾನವನ್ನು ಮರಳಿ ಪಡೆಯಲು ಒಂದು ಸಾಧನವಾಗಿತ್ತು.

ಬ್ರಾಹ್ಮಣೇತರರು ಹಸುವಿನ ಮಾಂಸವನ್ನು ತಿನ್ನುವುದು ಕೈಬಿಟ್ಟದ್ದಕ್ಕೆ ಡಾ. ಬಿ.ಆರ್. ಅಂಬೇಡ್ಕರ್ ಅವರು ಕೊಡುವ ಕಾರಣ ಈ ಕೆಳಕಂಡಂತಿದೆ. "ಬ್ರಾಹ್ಮಣರನ್ನು ಅನುಕರಿಸುವ ಅವರ ಇಚ್ಛೆಯಿಂದಾಗಿ ಬ್ರಾಹ್ಮಣೇತರರು ಗೋಮಾಂಸ ಭಕ್ಷಣೆಯನ್ನು ಕೈಬಿಟ್ಟರು. ಇದೊಂದು ನವೀನವಾದ ಸಿದ್ಧಾಂತವಿರಬಹುದು; ಆದರೆ ಅದು ಅಸಾಧ್ಯವೆನಿಸುವ ಸಿದ್ಧಾಂತವಲ್ಲ. ಗಾಬ್ರಿಯೆಲ್ ತಾರ್ದೆ ಎಂಬ ಫ್ರೆಂಚ್ ಲೇಖಕ ವಿವರಿಸಿರುವಂತೆ ಸಮಾಜವೊಂದರಲ್ಲಿ ಸಂಸ್ಕೃತಿಯು ಹರಡುವುದು

ಉಚ್ಚವರ್ಗಗಳ ರೀತಿ ನೀತಿ ಮತ್ತು ನಡವಳಿಕೆಗಳನ್ನು ಕೆಳಗಿನ ವರ್ಗಗಳವರು ಅನುಕರಣೆ ಮಾಡುವ ಮೂಲಕ. ಈ ಅನುಕರಣೆಯು ಎಷ್ಟು ನಿಯತವಾಗಿ ಆವರ್ತವಾಗುತ್ತದೆಂದರೆ ನೈಸರ್ಗಿಕ ನಿಯಮದಷ್ಟೇ ಯಾಂತ್ರಿಕವಾಗಿರುತ್ತದೆ. ಗಾಬ್ರಿಯೆಲ್ ತಾರ್ದೆಯು ಅನುಕರಣೆಯ ನಿಯಮಗಳನ್ನು ಪ್ರಸ್ತಾಪಿಸಿದ್ದಾನೆ. ಅಂತಹ ಒಂದು ನಿಯಮವೇನೆಂದರೆ ಉಚ್ಚವರ್ಗಗಳನ್ನು ಕೆಳಗಿನ ವರ್ಗಗಳವರು ಅನುಕರಿಸುತ್ತಾರೆಂಬುದು."[೩೧] ಬ್ರಾಹ್ಮಣರು ಸಾಮಾಜಿಕವಾಗಿ ಬ್ರಾಹ್ಮಣೇತರರಿಗಿಂತಲೂ ನಿಸ್ಸಂಶಯವಾಗಿ ಉನ್ನತ ಸ್ಥಾನದಲ್ಲಿದ್ದರು. ಬ್ರಾಹ್ಮಣೇತರರಲ್ಲಿ ಹಸುವಿನ ಪೂಜೆಯ ವ್ಯಾಪಕ ಹರಡುವಿಕೆ ಮತ್ತು ಹಸುವಿನ ಮಾಂಸ ತಿನ್ನುವುದು ಅಂತ್ಯ ಇವೆರಡೂ ಅವರು ಬ್ರಾಹ್ಮಣರನ್ನು ಅನುಕರಿಸುವುದರಿಂದ ಬೆಳೆಯಿತೆಂಬುದನ್ನು ಗಮನಿಸಬಹುದಾಗಿದೆ.

ಬಿ.ಟಿ.ಗೋಪಾಲಕೃಷ್ಣ ಅವರು ಸಹ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರ ಪ್ರಕಾರ "ಗೋಮಾಂಸ ಆಗಿನ ಸಮಾಜದಲ್ಲಿ ಎಲ್ಲಾ ಹಿಂದೂ ಜನಾಂಗಗಳ ಆಹಾರವಾಗಿತ್ತು. ಬಲಿ-ಯಜ್ಞಗಳನ್ನು ಮಾಡಿ ಗೋಮಾಂಸ ತಿನ್ನುತ್ತಿದ್ದರು. ಆದರೆ ಬೌದ್ಧ ಮತ್ತು ಬ್ರಾಹ್ಮಣ ಮತಗಳ ಪೈಪೋಟಿಯಿಂದಾಗಿ ಹಿಂದೂ ಸಮಾಜದಲ್ಲಿ ೧. ಬ್ರಾಹ್ಮಣರು ಎಲ್ಲಾ ರೀತಿಯ ಮಾಂಸ ತ್ಯಜಿಸಿದರು. ೨. ಬ್ರಾಹ್ಮಣೇತರರು ಹಸುವಿನ ಮಾಂಸ ಬಿಟ್ಟು ಉಳಿದೆಲ್ಲಾ ಮಾಂಸವನ್ನು ತಿನ್ನುತ್ತಿದ್ದರು. ೩. ಹೊರಗಿನವರು(ಅಸ್ಪೃಶ್ಯರು)ಯಾವ ಬದಲಾವಣೆಗೂ ಒಳಪಡಲಿಲ್ಲ."[೩೨] ಮೇಲ್ಕಂಡ ಹೇಳಿಕೆಗಳಿಂದ ತಿಳಿದುಬರುವಂತಹ ಅಂಶಗಳೆಂದರೆ ಯಾವ ಸಮುದಾಯ ಪಶುಬಲಿ ಯಜ್ಞಗಳು ತಮ್ಮ ಜನ್ಮಸಿದ್ಧವಾದ ಹಕ್ಕು ಎನ್ನುತ್ತಾ ಸಾವಿರಾರು ವರ್ಷಗಳಿಂದ ಅದನ್ನೆ ನಡೆಸಿಕೊಂಡು ಬಂದರೋ ಅದೇ ಸಮುದಾಯ ಗೋಹತ್ಯೆಗೆ ಸ್ವಯಂ ನಿರ್ಬಂಧ ಹಾಕಿಕೊಂಡು, ಸ್ವಇಚ್ಛೆಯಿಂದ ಗೋಮಾಂಸ ತಿನ್ನುವುದನ್ನು ವರ್ಜಿಸಿ, ಗೋ ಪೂಜೆ ಮಾಡಲು ಪ್ರಾರಂಭಿಸಿದರು. ಇದಕ್ಕೆ ಮೂಲ ಅಂದಿನ ಬ್ರಾಹ್ಮಣ ಮತದ ಪ್ರತಿಷ್ಠೆಯೇ ಕಾರಣವಾಗಿತ್ತು ಎಂಬುದನ್ನು ತಿಳಿಯಬಹುದು.

ಪ್ರಸ್ತುತ ಅವಧಿಯಲ್ಲಿ ಗೋಹತ್ಯಾ ನಿಷೇಧ ಅಥವಾ ಗೋಮಾಂಸ ಭಕ್ಷಣೆಯ ಪ್ರತಿಬಂಧ, ತಳಸಮುದಾಯಗಳನ್ನು ಆತಂಕಕ್ಕಿಡುಮಾಡುತ್ತಿದೆ. ತಲೆತಲಾಂತರದಿಂದ ತಳಸಮುದಾಯಗಳನ್ನು ಪುರೋಹಿತಶಾಹಿ ವರ್ಗ ಒಂದಿಲ್ಲೊಂದು ಕಾರಣಕ್ಕೆ ಶೋಷಿಸುತ್ತಾ ದೌರ್ಜನ್ಯವನ್ನೆಸಗುತ್ತಿರುವುದನ್ನು ಕಾಣಲಾಗುತ್ತಿದೆ. "ತಳಸಮುದಾಯಗಳು, ಮುಸಲ್ಮಾನರು ಮತ್ತು ಕ್ರಿಶ್ಚಿಯನ್ನರನ್ನು ಗೋಮಾಂಸ ಭಕ್ಷಕರು ಎಂದು ಬಿಂಬಿಸಿ, ಅವರನ್ನು ಹಿಂದುತ್ವವಾದಿಗಳು ದಮನಿಸುತ್ತಿರುವ ಹುನ್ನಾರದಂತೆ ತೋರುತ್ತಿದೆ"[೩೩] ಎಂದು ಮಹಾದೇವ್ ಮೂರ್ತಿ ಅವರು ಅಭಿಪ್ರಾಯಪಟ್ಟಿದ್ದಾರೆ. ಗೋರಕ್ಷಣೆಯ ಹೆಸರಿನಲ್ಲಿ ಅಮಾನವೀಯ ನರಹತ್ಯೆ ಮಾಡುತ್ತಿರುವುದನ್ನು ಕಾಣಲಾಗುತ್ತಿದೆ.

ಇದಕ್ಕೆ ಸಂಬಂಧಿಸಿದಂತೆ ಉದಾಹರಣೆಗಳನ್ನು ಗಮನಿಸುವುದಾದರೆ “ಸಂಘ ಪರಿವಾರದ ಬ್ರಾಹ್ಮಿಣಿಸಂ ಮತ್ತು ಮೋದಿ ಅವರ ಕ್ಯಾಪಿಟಲಿಸಂ ಎರಡೂ ಸಸ್ಯಾಹಾರ ಮತ್ತು ಮಾಂಸಾಹಾರವನ್ನು ದೇಶಪ್ರೇಮ ಆಧಾರದಲ್ಲಿ ವರ್ಗೀಕರಿಸಿದೆ. ಮಾಂಸಹಾರಿಯು ದೇಶದ್ರೋಹಿ ಎನ್ನುವ ತಾರ್ಕಿಕ ಅಂತ್ಯಕ್ಕೆ ಮುಟ್ಟಲು ತನ್ನ ಫ್ಯಾಸಿಸಂ ಚಟುವಟಿಕೆಗಳ ಮೂಲಕ ಸಂಘ ಪರಿವಾರವು ಪ್ರಜಾಪ್ರಭುತ್ವದ ಬುನಾದಿಯನ್ನು ಭಗ್ನಗೊಳಿಸುತ್ತಿದೆ”[೩೪] ಇಂದು ಆಹಾರವನ್ನು ಬಳಸಿಕೊಂಡು ಅಲ್ಪಸಂಖ್ಯಾತರನ್ನು, ತಳಸಮುದಾಯಗಳನ್ನು ಕೊಲೆಯ ತರ್ಕದಲ್ಲಿ ಅಂತ್ಯಗೊಳಿಸುವುದನ್ನು ದಾದ್ರಿ ಗ್ರಾಮದ ಹಿಂಸೆಯ ಮೂಲಕ ಮತ್ತೊಮ್ಮೆ ಎಚ್ಚರಿಕೆ ನೀಡಿದೆ. ಇಲ್ಲಿ ಬಾಬರಿ ಮಸೀದಿಯ ಧ್ವಂಸ ಮತ್ತು ಆ ಮೂಲಕ ನಡೆದ ಹತ್ಯೆಗಳು, ೨೦೦೨ರ ಗುಜರಾತ್ ಗಲಭೆ ಮತ್ತು ಹತ್ಯಾಕಾಂಡದ ನಂತರ ಇಂದು ದಾದ್ರಿ ಕೊಲೆಯು ಆಹಾರವೂ ಒಂದು ಸಂಕೇತವಾಗಿಯೂ ಆ ಮೂಲಕ ಅಲ್ಪಸಂಖ್ಯಾತರು ಮತ್ತು ತಳಸಮುದಾಯಗಳ ವಿರುದ್ಧ ಬಹುಸಂಖ್ಯಾತ ಧರ್ಮದ ಹಿಂಸೆಗೆ ಯಾವುದೇ ಪ್ರತಿಬಂಧವಿಲ್ಲ ಮತ್ತು ನ್ಯಾಯಾಂಗದ ಹಂಗೂ ಇಲ್ಲವೆಂದೂ ಸಾಬೀತುಪಡಿಸುತ್ತದೆ. ಏಕೆಂದರೆ “೨೦೦೨ರಲ್ಲಿ ಹರ್‍ಯಾಣದ ಜಾಜ್ವಾರ್ ಗ್ರಾಮದಲ್ಲಿ ದನವನ್ನು ಕೊಂದು ಮಾಂಸವನ್ನು ಸುಲಿಯುತ್ತಿದ್ದಾರೆ ಎನ್ನುವ ಅನುಮಾನದ ಮೇಲೆ ೫ ದಲಿತರನ್ನು ಸಜೀವವಾಗಿ ಹತ್ಯೆ ಮಾಡಿದ್ದರು. ದಲಿತ ಯುವಕನೊಬ್ಬ ದೇವಸ್ಥಾನ ಪ್ರವೇಶಕ್ಕೆ ಯತ್ನಿಸಿದಾಗ ಅವನನ್ನು ಜೀವಂತವಾಗಿ ಬೆಂಕಿ ಹಚ್ಚಿ ಸಾಯಿಸಿದರು.”[೩೫] ಮತೀಯವಾದ ಪ್ರಜಾಪ್ರಭುತ್ವದಲ್ಲಿ ಕರಗಿ ಹೋಗುವುದಿಲ್ಲ. ಇವು ಮತ್ತಷ್ಟು ಗಟ್ಟಿಗೊಳ್ಳುತ್ತವೆ. ಧಾರ್ಮಿಕ ಮೂಲಭೂತವಾದದ ಅರಾಜಕತೆ ತುಂಬಿಕೊಳ್ಳುತ್ತದೆ.

ಭಾರತೀಯರ ಮನಸ್ಸು ಗೆಲ್ಲಬೇಕಾದರೆ ಅವರನ್ನು ಭಾವನಾತ್ಮಕವಾಗಿ ಬಡಿದೆಬ್ಬಿಸಬೇಕು ಎನ್ನುವುದನ್ನು ಅರಿತ ಸವರ್ಣೀಯರು ಗೋ ರಾಜಕೀಯ ಪ್ರಾರಂಭ ಮಾಡಿದರು. “ಹಿಂದೂ ಧರ್ಮದವರೆಂದುಕೊಳ್ಳುವವರೆಲ್ಲಾ ಗೋವನ್ನು ಮಾತೆಯಾಗಿ ಪೂಜಿಸುತ್ತಾ ಬಂದಿದ್ದಾರೆ. ಹೀಗಾಗಿ ಯಾರೇ ಆಗಲಿ ಗೋಮಾತೆಯನ್ನು ಕೊಂದು ತಿನ್ನುವುದು ಅಪಚಾರ, ಹಾಗೇನಾದರೂ ಗೋಹತ್ಯೆ ಮಾಡಿದರೆ ಹಿಂದೂಗಳ ಭಾವನೆಗಳಿಗೆ ಧಕ್ಕೆ ಆಗುತ್ತದೆ”[೩೬] ಎನ್ನುವ ರೀತಿಯಲ್ಲಿ ಪ್ರಚಾರವನ್ನು ಮಾಡತೊಡಗಿದರು. ಗೋಮಾಂಸ ತಿನ್ನುವವರೆಲ್ಲಾ ಧರ್ಮದ್ರೋಹಿಗಳು ಎನ್ನುವಂತೆ ಬಿಂಬಿಸತೊಡಗಿದರು. ಇದರ ಹಿಂದೆ ಮುಸ್ಲಿಂ ಧರ್ಮೀಯರ ವಿರುದ್ಧ ಹಿಂದೂ ಧರ್ಮೀಯರನ್ನು ಎತ್ತಿ ಕಟ್ಟುವ ಹುನ್ನಾರವೂ ಅಡಗಿತ್ತು. ಏಕೆಂದರೆ ಮುಸ್ಲಿಂ ಸಮುದಾಯದವರು ಮೊದಲಿನಿಂದಲೂ ಗೋಮಾಂಸವನ್ನು ತಮ್ಮ ಆಹಾರದ ಭಾಗವನ್ನಾಗಿಸಿಕೊಂಡಿದ್ದರು. ಜೊತೆಗೆ ದಲಿತರೂ ಸಹ ಗೋಮಾಂಸವನ್ನು ಆಹಾರವಾಗಿ ಹಾಗೂ ಅದರ ಚರ್ಮವನ್ನು ವ್ಯಾಪಾರವಾಗಿ

ಬಳಸಿಕೊಳ್ಳುತ್ತಿದ್ದರು. ಗೋಮಾಂಸ ತಿನ್ನುವುದರಲ್ಲಿ ಆರ್ಥಿಕ ಅನಿವಾರ್ಯತೆಗಳೂ ಈ ತಳಸಮುದಾಯಗಳು ಹಾಗೂ ಮುಸ್ಲಿಂ ಸಮುದಾಯದವರದ್ದಾಗಿತ್ತು.

"ಗೋಹತ್ಯೆ ಮಾಡುವವರು ಈ ದೇಶದ ಬದ್ಧ ವೈರಿಗಳು, ಅವರಿಗೆ ಈ ದೇಶದಲ್ಲಿರುವ ಯಾವುದೇ ಹಕ್ಕಿಲ್ಲ. ಗೋಹತ್ಯೆ ಮಾಡುವವರ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಾಗುವುದು. ಈಗಾಗಲೇ ರಾಜ್ಯ ಸರ್ಕಾರ ಗೋಹತ್ಯೆ ನಿಷೇಧ ಕುರಿತು ಪ್ರಸ್ತಾವವನ್ನು ಅಂಗೀಕರಿಸಿದೆ. ಅಲ್ಲದೆ ಗೋ ರಕ್ಷಣೆಗಾಗಿ ಏನೇನು ಕ್ರಮ ಕೈಗೊಳ್ಳಬಹುದೋ ಅದೆಲ್ಲವನ್ನು ಉತ್ತರಾಖಂಡ ಸರ್ಕಾರ ಮಾಡುತ್ತದೆ"[೩೭] ಎಂದು ಉತ್ತರಾಖಂಡ ಮುಖ್ಯಮಂತ್ರಿ ಹರೀಶ್ ರಾವತ್ ಅವರು ಕಾರ್ಯಕ್ರಮವೊಂದರಲ್ಲಿ ಹೇಳಿದ್ದರು. ಬ್ರಾಹ್ಮಿಣಿಸಂ ಅನ್ನುವಂತಹದ್ದು ತಳಸಮುದಾಯಗಳನ್ನು ದೇಶದ್ರೋಹಿಗಳು ಎಂದು ಬಿಂಬಿಸುವ ಮೂಲಕ ಅವರನ್ನು ದಮನ ಮಾಡುವುದಕ್ಕೆ ಹೇಗೆ ಪ್ರಯತ್ನಿಸುತ್ತದೆ ಎಂಬುದನ್ನು ಮೇಲ್ಕಂಡ ಹೇಳಿಕೆಯಿಂದ ತಿಳಿಯಬಹುದಾಗಿದೆ.

ಗುಜರಾತ್ ರಾಜ್ಯದ ಊನಾದಲ್ಲಿ ಇತ್ತೀಚೆಗೆ ನಡೆದ ಘಟನೆ, ಭಾರತೀಯ ಸಾಮಾಜಿಕ ವ್ಯವಸ್ಥೆಯ ಸಮಸ್ಯೆಯನ್ನು ಜಗತ್ತಿಗೆ ತೋರಿಸಿತು. "ಅಂದು ಆ ಊರಿನ ನಾಲ್ವರು ಯುವಕರು ಸತ್ತ ದನಗಳ ಚರ್ಮ ಸುಲಿಯುವ ಕೆಲಸ ಮಾಡುತ್ತಿದ್ದರು. ದನಗಳ ಸುಲಿದ ಚರ್ಮವೇ ದಲಿತರಾದ ಅವರ ಕುಟುಂಬದ ಅನ್ನ ತಾನೇ? ಆದರೆ ಅವರು ಮಾಂಸಕ್ಕಾಗಿ ದನ ಕೊಂದಿದ್ದಾರೆ ಎಂದು ಕೋಪಗೊಂಡ ಆ ಊರಿನ 'ಗೋರಕ್ಷಕ ಪಡೆ' ಎಂಬ ರೌಡಿ ಪಡೆಯ ಮಂದಿ, ಆ ಯುವಕರ ಕೈಗಳನ್ನು ಕಟ್ಟಿ ಹಾಕಿ ಬಾರಕೋಲು, ಚಾಟಿಗಳಿಂದ ಒಂದೇ ಸಮನೆ ಬಾರಿಸಿ ಅವರ ಚರ್ಮ ಸುಲಿದರು. ಆಮೇಲೆ ಈ ಹಲ್ಲೆಯ ದೃಶ್ಯಗಳನ್ನು ದೇಶದಲ್ಲಿ ಏನಾಗು ತ್ತಿದೆ ಎಂಬುದನ್ನು ಜನರೆಲ್ಲಾ ನೋಡಲಿ ಎಂದು ವಾಟ್ಸ್‌ಆ್ಯಪ್‌ಗೆ, ಫೇಸ್‌ಬುಕ್‌ಗೆ ಸೇರಿಸಿದರು. ಗೋವಿನ ಚರ್ಮ ಸುಲಿಯುತ್ತಿದ್ದ ಆ ವೃತ್ತಿನಿರತರ ಮೇಲೆ ಇವರು ನಡೆಸಿದ ಹಲ್ಲೆಯನ್ನು ಟಿವಿ ಚಾನೆಲ್‌ಗಳಲ್ಲಿ ನೋಡಿದ ದೇಶದ ಜನರಿಗೆ ನಾಗರಿಕತೆಗೆ ಬಡಿದ ಈ ಕಾಲುಬಾಯಿ ದೊಡ್ಡರೋಗ ಕಂಡು ಬಾಯಿ ಬಡಿದುಕೊಳ್ಳವಷ್ಟು ದುಃಖಮಯವಾಯಿತು."[೩೮] ಈ ರೀತಿಯಾಗಿ ಗೋಸಂರಕ್ಷಣೆಯ ಹೆಸರಿನಲ್ಲಿ ತಳಸಮುದಾಯಗಳ ಮೇಲೆ ನಿರಂತರ ದೌರ್ಜನ್ಯವೆಸಗುತ್ತಿದ್ದಾರೆ.

ಮಾಂಸಾಹಾರ ಮತ್ತು ಗೋಮಾಂಸ ಸೇವನೆ ಬ್ರಾಹ್ಮಣರ ಆಹಾರವಾಗಿದ್ದು, ಹೇಗೆ ತಳಸಮುದಾಯಗಳ ಆಹಾರವಾಗಿ ಬದಲಾಯಿತು ಎಂಬುದನ್ನು ಪ್ರಸ್ತುತ ಲೇಖನದ ಅಧ್ಯಯಯನದಿಂದ ತಿಳಿಯಲಾಯಿತು. ಬ್ರಾಹ್ಮಣ್ಯವನ್ನು ಹೊಂದಿರುವ ಸಮುದಾಯಗಳು ಇಂದು ತಮ್ಮನ್ನು 'ಅಪ್ಪಟ ಸಸ್ಯಹಾರಿಗಳು' ಎಂದು ಬಿಂಬಿಸಿಕೊಂಡು ಪಾವಿತ್ರ್ಯದ ಸಂಕೇತವಾಗಿ

ಎಲ್ಲೆಡೆ ಹಬ್ಬಿಸುತ್ತಿದೆ. ಇದು ಅವರ ಜಾತೀಯತೆಯನ್ನು ಮತ್ತು ವೈದಿಕ ಧರ್ಮದ ಬ್ರಾಹ್ಮಣ್ಯವನ್ನು ಅನಾವರಣಗೊಳಿಸುತ್ತದೆ.

ಇತ್ತೀಚೆಗೆ ಸಂಕೇತಿ ಬ್ರಾಹ್ಮಣರು ಧರ್ಮದ ಹೆಸರಿನಲ್ಲಿ ಮತ್ತೂರಿನಲ್ಲಿ ಯಜ್ಞ ನಡೆಸಿ ಸೋಮರಸ ಕುಡಿದು, ಆಡನ್ನು ಬಲಿಕೊಟ್ಟು ಅದರ ಮಾಂಸ ಸೇವಿಸಿದ್ದು ವರದಿಯಾಗಿದೆ. ಈ ಘಟನೆಯನ್ನು ಕುರಿತು ಶ್ರೀಪಾದ ಭಟ್ ಅವರು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಇಲ್ಲಿ ಧರ್ಮದ ಹೆಸರಿನಲ್ಲಿ ನಡೆದ ಪ್ರಾಣಿ ವಧೆಯು ಖಂಡನೆಗೆ ಒಳಗಾಗಬೇಕಿತ್ತು ಮತ್ತು ನ್ಯಾಯಸಮ್ಮತವಾದ ಈ ಬ್ರಾಹ್ಮಣರ ಮಾಂಸ ಸೇವನೆಯನ್ನು ಸಹಜವಾಗಿಯೇ ಪರಿಗಣಿಸ ಬೇಕಾಗಿತ್ತು. ಆದರೆ ಗ್ರಾಮ ಹಬ್ಬಗಳಲ್ಲಿ ಶೂದ್ರರು ನಡೆಸುವ ಕುರಿ, ಕೋಳಿಗಳ ಬಲಿಯನ್ನು ಸದಾ ಖಂಡಿಸುವ ಮೇಲ್ಜಾತಿ, ಮೇಲ್ವರ್ಗಗಳು ಮತ್ತು ಮಾಧ್ಯಮಗಳು ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ ಈ ಬ್ರಾಹ್ಮಣರು ನಡೆಸಿದ ಪ್ರಾಣಿ ವಧೆಯನ್ನು ಖಂಡಿಸಲಿಲ್ಲ. ಬದಲಾಗಿ ಬ್ರಾಹ್ಮಣರು ಮಾಂಸ ಸೇವಿಸಿದರು ಎನ್ನುವುದೇ ಒಂದು ಆಘಾತಕಾರಿ ಸುದ್ದಿಯಾಗಿ ಚರ್ಚೆಗೊಳಪಟ್ಟಿತು. ಇದು ದೇಶದ ಮನಸ್ಥಿತಿ ಇನ್ನೂ ವರ್ಣಾಶ್ರಮದಲ್ಲೇ ಸ್ಥಗಿತಗೊಂಡಿರುವುದನ್ನು ಸಾಬೀತುಪಡಿಸಿತು.

"೧೮ನೇ ಶತಮಾನದಿಂದೀಚೆಗೆ ಮಾಂಸಹಾರ ಮತ್ತು ಗೋಮಾಂಸ ಸೇವನೆ ಬ್ರಾಹ್ಮಣರ ಆಹಾರದ ಮೆನುವಿನಿಂದ ಜಾರಿ ಅಸ್ಪೃಶ್ಯರ ಮೆನುವಾಗಿ ಬದಲಾಗುವ ಕಥನವನ್ನು ಬಹಳ ಚಾಣಾಕ್ಷತನದಿಂದ ಕಟ್ಟಿ ಬೆಳೆಸಿರುವ ಬ್ರಾಹ್ಮಣ ಸಮುದಾಯ ಇಂದು ತಮ್ಮನ್ನು 'ಅಪ್ಪಟ ಸಸ್ಯಹಾರಿಗಳು' ಎಂದು ಬಿಂಬಿಸಿಕೊಂಡು ಅದನ್ನೊಂದು ಪಾವಿತ್ರ್ಯದ ಸಂಕೇತವಾಗಿ ಎಲ್ಲೆಡೆ ಹಬ್ಬಿಸುತ್ತಿದೆ"[೩೯] ಇದು ಅವರ ಜಾತೀಯತೆಯನ್ನು ಮತ್ತು ಸನಾತನವಾದ ಬ್ರಾಹ್ಮಣ್ಯವನ್ನು ತೋರಿಸುತ್ತದೆ. ಇಂದು ಬ್ರಾಹ್ಮಣೀಕರಣಗೊಂಡ ಭಾರತೀಯ ಸಮಾಜವು "ಓಹ್ ಇದೇನಿದು ಬ್ರಾಹ್ಮಣರು ಮಾಂಸ ತಿಂದರಲ್ಲ ಎಂದು ಆಶ್ಚರ್ಯಚಕಿತರಾಗಿ, ಆತಂಕದಿಂದ ಪ್ರತಿಕ್ರಿಯಿಸುತ್ತಿದೆ. ಬ್ರಾಹ್ಮಣರು ಧರ್ಮದ ಹೆಸರಿನಲ್ಲಿ ಯಜ್ಞ ನಡೆಸುವುದನ್ನು, ಪ್ರಾಣಿ ವಧೆಯನ್ನು ವಿರೋಧಿಸಿ, ಅವರ ಮಾಂಸಾಹಾರ ಸೇವನೆಯನ್ನು ಸಹಜವಾಗಿಯೇ ಸಮರ್ಥಿಸಬೇಕಾಗಿತ್ತು"[೪೦] ಇಲ್ಲಿನ ಸಮಾಜ ವ್ಯತಿರಿಕ್ತವಾಗಿ ವರ್ತಿಸುತ್ತಾ ಬ್ರಾಹ್ಮಣರ ಶ್ರೇಷ್ಠತೆಯನ್ನು ಪುರಸ್ಕರಿಸುತ್ತದೆ.

ಸಸ್ಯಹಾರ-ಮಾಂಸಹಾರ ಕುರಿತ ಪರ-ವಿರೋಧ ಚರ್ಚೆ ಸಾರ್ವಕಾಲಿಕ. ಜೈನರ ಉತ್ಸವದ ಪ್ರಯುಕ್ತ ಮಹಾರಾಷ್ಟ್ರ ಸರ್ಕಾರ, ಹಿಂದಿನಿಂದ ಜಾರಿಯಲ್ಲಿದ್ದ ಎರಡು ದಿನಗಳ ಮಾಂಸ ಮಾರಾಟ ನಿಷೇಧವನ್ನು ನಾಲ್ಕು ದಿನಕ್ಕೆ ವಿಸ್ತರಿಸಲು ಹೊರಟು ವಿವಾದಕ್ಕೀಡಾಗಿದ್ದು, ಇದೀಗ ಈ ಕುರಿತ ಚರ್ಚೆಗೆ ಕಾವೇರಿಸಿದೆ.

ಮೊಗಳ್ಳಿ ಗಣೇಶ್ ಅವರ ಪ್ರಕಾರ "ದನದ ಮಾಂಸದ ಕಾರಣಕ್ಕೆ ದಲಿತರನ್ನು ಕಲ್ಲಿನಿಂದ ಜಜ್ಜಿ ಕೊಂದವರ ಮನಸ್ಸಿನಲ್ಲಿ ಯಾವ ಧರ್ಮ ಇದೆ ಎಂದು ಕೇಳಿಕೊಳ್ಳಬೇಕು. ಸುಪ್ರೀಂಕೋರ್ಟ್ ಆಹಾರದ ಸಾರ್ವಭೌಮತ್ವ ಎತ್ತಿ ಹಿಡಿಯಬೇಕು; ಹಾಗೆಯೇ ಯಾವುದೇ ಸರ್ಕಾರವು ಆಹಾರದ ಅವರವರ ಹಕ್ಕನ್ನು ರಕ್ಷಿಸಬೇಕು. ಅಲ್ಲದೆ ಹಿಂದೂ ಧರ್ಮವನ್ನು ಆಹಾರದ ಮೇಲು-ಕೀಳಿನಿಂದ ಬಿಡಿಸಿ ಪ್ರಜಾಪ್ರಭುತ್ವದ ನೀತಿಯನ್ನು ಸಾಕಾರಗೊಳಿಸಬೇಕು"[೪೧] ಎಂದು ಹೇಳಿದ್ದಾರೆ.

ಮಾಂಸಹಾರವನ್ನು ಕುರಿತು ಚೆನ್ನಣ್ಣ ವಾಲೀಕಾರ ಅವರು ಈ ಕೆಳಗಿನಂತೆ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. "ಮಾಂಸಹಾರ ಸೇವನೆಯು ವೈಯಕ್ತಿಕ ವಿಚಾರ. ಅದಕ್ಕೆ ಧರ್ಮ, ಜಾತಿ ಎನ್ನುವ ಸೀಮೆಯಿಲ್ಲ. ಗೌತಮಬುದ್ಧ ಈ ಬಗ್ಗೆ ತುಂಬಾ ಸ್ಪಷ್ಟವಾಗಿ ಹೇಳಿದ್ದಾನೆ. ಅದನ್ನು ಇಡೀ ಮನುಕುಲ ಗೌರವಿಸಬೇಕು. 'ಎಲ್ಲ ಜನರ ಆಹಾರ ಪದ್ಧತಿಯನ್ನು ಎಲ್ಲರೂ ಗೌರವಿಸಬೇಕು. ಮಾಂಸಾಹಾರ ಸೇವನೆ ಕೆಟ್ಟದ್ದಲ್ಲ ಎಂಬುದನ್ನು ವೈಜ್ಞಾನಿಕ ತಳಹದಿ ಮೇಲೆ ಹೇಳಿದ್ದಲ್ಲದೆ, ಸ್ವತಃ ಬುದ್ಧ ಮಾಂಸಾಹಾರ ಸೇವಿಸಿದ್ದ. ಇನ್ನೊಬ್ಬರ ಧರ್ಮಾಚರಣೆ ಹಾಗೂ ವಿಚಾರಗಳಿಗೆ ಅಡ್ಡಿಯನ್ನುಂಟುಮಾಡಬೇಕು ಎನ್ನುವ ಬಗ್ಗೆ ಯಾವ ಧರ್ಮದಲ್ಲೂ ಉಲ್ಲೇಖವಿಲ್ಲ"[೪೨] ಎಂದು ಹೇಳಿದ್ದಾರೆ.

ಮೀರಾ ನಾಯಕ ಅವರು ಈ ವಿಚಾರವನ್ನು ಕುರಿತು ಈ ಕೆಳಗಿನಂತೆ ಪ್ರತಿಕ್ರಿಯಿಸಿದ್ದಾರೆ. "ಆಹಾರ ಸೇವನೆ ಅವರವರ ಸ್ವಾತಂತ್ರ್ಯ. ಅದನ್ನು ಪ್ರಶ್ನಿಸುವ, ನಿಯಂತ್ರಿಸುವ ಕೆಲಸವನ್ನು ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಯಾರೂ ಮಾಡಬಾರದು. ಈಚಿನ ದಿನಗಳ ಬೆಳವಣಿಗೆಗಳನ್ನು ಗಮನಿಸಿದರೆ ದಲಿತರನ್ನೂ, ಅಲ್ಪಸಂಖ್ಯಾತರನ್ನು ದಮನ ಮಾಡುವ ವ್ಯವಸ್ಥಿತ ಹುನ್ನಾರ ದೇಶದಲ್ಲಿ ನಡೆಯುತ್ತಿದೆ ಎನಿಸುತ್ತಿದೆ"[೪೩] ಎಂದಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಆಹಾರ ಸೇವನೆ ಅವರವರ ವೈಯಕ್ತಿಕ ವಿಚಾರ. ಪ್ರಜಾಪ್ರಭುತ್ವ ರಾಷ್ಟ್ರದಲ್ಲಿ ಸರ್ಕಾರವು ಆಹಾರದ ಅವರವರ ಹಕ್ಕನ್ನು ರಕ್ಷಿಸಬೇಕು ಎಂಬ ಅಂಶ ಮಹತ್ವಪೂರ್ಣವಾದದ್ದು.

### ೩.೨. ತಳಸಮುದಾಯಗಳ ಮೇಲಾಗುತ್ತಿರುವ ದೌರ್ಜನ್ಯಗಳು

ರಾಜ್ಯದಲ್ಲಿ ತಳಸಮುದಾಯಗಳ ಮೇಲಿನ ದೌರ್ಜನ್ಯಗಳು ನಿರಂತರವಾಗಿ ನಡೆಯುತ್ತಿವೆ. ಈ ವ್ಯವಸ್ಥೆಗೆ ಸಂಬಂಧಿಸಿದಂತೆ ತುಮಕೂರು ಜಿಲ್ಲೆಯೂ ಹೊರತಾಗಿಲ್ಲದಿರುವುದನ್ನು ಗಮನಿಸಬಹುದು. ತುಮಕೂರು ತಾಲೂಕಿನ ಕೋರಾ ಹೋಬಳಿ ಕೋಡಿಹಳ್ಳಿಯಲ್ಲಿ ತಳ

ಸಮುದಾಯಗಳಿಗೆ ಸಾಮೂಹಿಕ ಬಹಿಷ್ಕಾರ ಹಾಕಲಾಗಿತ್ತು. ಆರೋಪಿಗಳ ವಿರುದ್ಧ ಕಟ್ಟು ನಿಟ್ಟಿನ ಕ್ರಮ ಕೈಗೊಳ್ಳಬೇಕು ಎಂದು ಗ್ರಾಮಸ್ಥರು ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿ ಆರ್ ಹಿತೇಂದ್ರ ಅವರಿಗೆ ಮನವಿ ಸಲ್ಲಿಸಿದ್ದರು.

"ಗ್ರಾಮದ ರಂಗಪ್ಪ ಎಂಬುವವರು ಬಹಿರ್ದೆಸೆಗೆ ಹೋಗಿದ್ದಾಗ ನಟರಾಜು ಎಂಬುವವರು ಬಂದು ಆತನನ್ನು ನೂಕಿದರು. ಮುಗ್ಗರಿಸಿದ ತಕ್ಷಣ ಕಿರುಚಿಕೊಂಡಾಗ ಅದೇ ಗ್ರಾಮದ ರಾಜಶೇಖರಯ್ಯ, ಕರಿಬಸವರಾಜು, ಸುರೇಶ್, ಗಂಗಯ್ಯ, ಪರಮೇಶಯ್ಯ, ರೇಣುಕಯ್ಯ, ರಮೇಶ್ ಅವರು ಜಾತಿನಿಂದನೆ ಮಾಡಿ ಪ್ರಾಣ ಬೆದರಿಕೆ ಹಾಕಿದ್ದಾರೆ"[೪೪] ಎಂದು ಎಸ್ಪಿ ಅವರಿಗೆ ನೀಡಿರುವ ದೂರಿನಲ್ಲಿ ವಿವರಿಸಲಾಗಿದೆ.

"ಗ್ರಾಮದ ಅಂಗನವಾಡಿಯಲ್ಲಿ ಸಹಾಯಕಿಯಾಗಿ ಕಾರ್ಯನಿರ್ವಹಿಸುತ್ತಿರುವ ನರಸಮ್ಮ ಎಂಬುವವರು ದಲಿತ ಮಕ್ಕಳನ್ನು ಶಾಲೆಯಲ್ಲಿ ಪ್ರತ್ಯೇಕವಾಗಿ ಕೂರಲು ಒತ್ತಾಯ ಮಾಡುವುದರ ಜೊತೆಗೆ ಅವರ ಕೈಯಲ್ಲೇ ತಟ್ಟೆ ಮತ್ತು ಲೋಟಗಳನ್ನು ತೊಳೆಸುತ್ತಿದ್ದರು. ಇದನ್ನು ಕೇಳಲು ಹೋದಾಗ ನಿಮ್ಮ ಕಾಲೋನಿಗೆ ಪ್ರತ್ಯೇಕ ಅಂಗನವಾಡಿ ನಿರ್ಮಿಸಿಕೊಳ್ಳಿ ಎಂದು ಉದ್ಧಟತನದಿಂದ ಉತ್ತರಿಸಿದರು ಎಂದು ಹೇಳಲಾಗಿದೆ."[೪೫] ಪ್ರಸ್ತುತ ಘಟನೆಯ ಬಗ್ಗೆ ಸಂಬಂಧಪಟ್ಟ ಅಧಿಕಾರಿಗೆ ದೂರು ನೀಡಲಾಗಿದ್ದು, ಸಿಡಿಪಿಓ ಅವರು ಪರಿಶೀಲನೆಗೆ ಬಂದಾಗ "ಸವರ್ಣೀಯರು ಕುಮ್ಮಕ್ಕಿನಿಂದ ಹೇಳಿಕೆ ನೀಡುತ್ತಿದ್ದರು. ಇದನ್ನು ಕೇಳಲು ಹೋದಾಗ ಅಧಿಕಾರಿಯ ಬಳಿ ನಿನಗೇನು ಕೆಲಸ ಎಂದು ರಂಗಪ್ಪನನ್ನು ಥಳಿಸಿದರು. ಶಿವಪ್ರಕಾಶ್, ಜಗದೀಶ್, ಕರಿಬಸವರಾಜು, ಉಮೇಶ ಮೊದಲಾದವರು ನಮ್ಮ ಮೇಲೆ ದೈಹಿಕವಾಗಿ ಹಾಗೂ ಮಾನಸಿಕವಾಗಿ ದೌರ್ಜನ್ಯವೆಸಗಿದ್ದಾರೆ. ನಮ್ಮ ಮನೆ ಹತ್ತಿರ ಓಡಿ ಬಂದಾಗ ರೇಣುಕಯ್ಯ, ಜಯದೇವ, ರಾಜಶೇಖರ, ಸಚ್ಚಿದಾನಂದಮೂರ್ತಿ, ಸುನಂದಮ್ಮ ಇತರರು ಓಡಿಸಿಕೊಂಡು ಬಂದು ಮನೆ ಬಾಗಿಲಿಗೆ ಕಲ್ಲುಗಳಿಂದ ಹೊಡೆದರು. ಬಾಗಿಲುಗಳನ್ನು ಮುರಿದು ಧ್ವಂಸ ಮಾಡಿದರು. ಎಂ.ಸಿ.ಎ.ಸಿದ್ಧ, ಸಿದ್ಧಲಿಂಗಯ್ಯ ಇವರು 'ಮಾದಿಗ ನನ್ನ ಮಕ್ಕಳಿಗೆ ಸುಮ್ನೆ ಬಿಡಬಾರದು ಪ್ರಾಣ ತೆಗೆಯುತ್ತೇವೆಂದು ಜಾತಿ ನಿಂದನೆ ಮಾಡಿ ಬೈದರು. ಅಷ್ಟರಲ್ಲಿ ಪೊಲೀಸಿನವರು ಓಡಿ ಬಂದು ಎಲ್ಲರನ್ನು ಬಿಡಿಸಿ ಸಮಾಧಾನಪಡಿಸಿದರು. ಅವರು ದೊಣ್ಣೆ, ಕಲ್ಲುಗಳನ್ನು, ಮಚ್ಚುಗಳನ್ನು ಸ್ಥಳದಲ್ಲೇ ಬಿಸಾಡಿ ಹೋದರು. ಮೇಲ್ಕಂಡ ಆರೋಪಿಗಳು ಹಿಂದೆ ಅಂಗನವಾಡಿ ವಿಚಾರದಲ್ಲಿ ಆಗಿದ್ದ ಗಲಾಟೆ ವಿಚಾರವನ್ನು ಜಿದ್ದು ಮಾಡಿಕೊಂಡು ಸಾರ್ವಜನಿಕ ಸ್ಥಳದಲ್ಲಿ ಎಲ್ಲರ ಎದುರಿಗೆ ನಮಗೆ ಮಾನಸಿಕವಾಗಿ ಮತ್ತು ದೈಹಿಕವಾಗಿ ನೋವಾಗುವಂತೆ ಜಾತಿ ನಿಂದನೆ ಮಾಡಿರುತ್ತಾರೆ. ಆದ್ದರಿಂದ ನಾವು ತುಮಕೂರಿಗೆ ಹೋಗಿ ಪೆಟ್ಟು ಬಿದ್ದಿದ್ದವರು ಚಿಕಿತ್ಸೆ ಪಡೆದಿರುತ್ತೇವೆ.

ಮುಂದಿನ ಕ್ರಮ ಜರುಗಿಸಬೇಕೆಂದು ಬೇಡಿಕೊಳ್ಳುತ್ತೇವೆ."[೪೬] ಕೋಡಿಹಳ್ಳಿಯಲ್ಲಿನ ತಳಸಮುದಾಯ ಗಳು ತಮ್ಮ ಮೇಲಾದಂತಹ ದೌರ್ಜನ್ಯವನ್ನು ಕುರಿತು ಪ್ರಥಮ ವರ್ತಮಾನ ವರದಿಯಲ್ಲಿ ತಿಳಿಸಿದ್ದಾರೆ.

ಈ ಬಗ್ಗೆ ಪಿಎಸ್ಐ ಅವರಿಗೆ ದೂರು ನೀಡಿದಾಗ ಠಾಣೆಗೆ ಕರೆದು ರಾಜಿ ಮಾಡಿಸಿ ಮುಚ್ಚಳಿಕೆ ಬರೆಸಿಕೊಂಡರು. ಆದರೆ ರಾತ್ರಿ ಎಲ್ಲ ಸವರ್ಣೀಯರು ಒಟ್ಟಾಗಿ ಸೇರಿ ತಳಸಮುದಾಯಗಳ ಮೇಲೆ ಸಾಮೂಹಿಕ ಬಹಿಷ್ಕಾರ ವಿಧಿಸಿದರು ಎಂದು ಆಪಾದಿಸಲಾಗಿದೆ. ತಳಸಮುದಾಯ ಸವರ್ಣೀಯರ ಜಮೀನುಗಳಲ್ಲಿ ನಡೆದಾಡಬಾರದು, ತಳಸಮುದಾಯಗಳನ್ನು ಕೂಲಿಗೆ ಕರೆಯಬಾರದು, ಹಿಟ್ಟಿನ ಗಿರಣಿಗಳಲ್ಲಿ ಹಿಟ್ಟು ಮಾಡಿಕೊಡಬಾರದು, ಅಂಗಡಿಗಳಲ್ಲಿ ದಿನಸಿ ಮಾರಾಟ ಮಾಡಬಾರದು. ಕೊಳವೆ ಬಾವಿಗಳಲ್ಲಿ ನೀರು ಹಿಡಿಯಬಾರದು ಎಂದು ನಿಷೇಧಿಸಲಾಗಿತ್ತು. ಇದಕ್ಕೆ ತಪ್ಪಿದ್ದಲ್ಲಿ ೫೦೦ ರೂಪಾಯಿ ದಂಡ ವಿಧಿಸುವುದಾಗಿ ನಿರ್ಧಾರ ಕೈಗೊಂಡಿದ್ದರು ಎಂದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳು ಮಾಹಿತಿ ನೀಡಿದ್ದಾರೆ.

ಜಿಲ್ಲೆಯಲ್ಲಿ ದಲಿತರ ಮೇಲೆ ನಡೆಯುತ್ತಿರುವ ದಬ್ಬಾಳಿಕೆ ತಡೆಯಲು ಜಿಲ್ಲಾಡಳಿತ ಸೂಕ್ತ ಕ್ರಮ ತೆಗೆದುಕೊಳ್ಳಬೇಕು ಎಂದು ಸಿಪಿಎಂ ಒತ್ತಾಯಿಸಿತು. "ಸಿರಾ, ಚಿಕ್ಕನಾಯಕನಹಳ್ಳಿ, ಮಧುಗಿರಿ ತಾಲೂಕಿನ ವಿವಿಧೆಡೆ ತಳಸಮುದಾಯಗಳಿಗೆ ಕ್ಷೌರ ನಿರಾಕರಣೆ, ಹೋಟೆಲ್ ಮತ್ತು ದೇವಸ್ಥಾನಗಳ ಪ್ರವೇಶ ನಿರಾಕರಣೆಯಂತಹ ಪ್ರಕರಣಗಳು ಪದೇ ಪದೇ ಮರುಕಳಿಸುತ್ತಿವೆ. ಜಿಲ್ಲಾಡಳಿತ ಇಂತಹ ಪ್ರಕರಣಗಳು ನಡೆಯದಂತೆ ಗಮನಹರಿಸುವಂತೆ ಆಗ್ರಹಿಸಿ ಸಿಪಿಎಂ ಹಾಗೂ ದಲಿತ ಹಕ್ಕುಗಳ ಸಮಿತಿಯ ನಿಯೋಗವು ಜಿಲ್ಲಾಧಿಕಾರಿ ಮೂಲಕ ಮುಖ್ಯಮಂತ್ರಿ ಹಾಗೂ ಸಮಾಜ ಕಲ್ಯಾಣ ಸಚಿವ ಎಚ್.ಆಂಜನೇಯ ಅವರಿಗೆ ಮನವಿ ಪತ್ರ ಸಲ್ಲಿಸಿತು."[೪೭] ನಿಯೋಗದಲ್ಲಿ ಸಿಪಿಎಂ ರಾಜ್ಯ ಸಮಿತಿ ಸದಸ್ಯ ಸಯ್ಯದ್ ಮುಜೀಬ್, ಜಿಲ್ಲಾ ಕಾರ್ಯದರ್ಶಿ ಎನ್.ಕೆ.ಸುಬ್ರಮಣ್ಯ, ಸದಸ್ಯರಾದ ಅಜ್ಜಪ್ಪ, ಬಿ.ಉಮೇಶ್, ಎಸ್.ರಾಘವೇಂದ್ರ, ಇ.ಶಿವಣ್ಣ, ಮುತ್ತುರಾಜ್ ಇತರರಿದ್ದರು.

"ಸಾರ್ವಜನಿಕ ನಲ್ಲಿ, ಕೆರೆ, ಬಾವಿಗಳಿಂದ ತಳಸಮುದಾಯಗಳು ನೀರು ಪಡೆಯುವಂತಿಲ್ಲ. ತುಮಕೂರು ಜಿಲ್ಲೆಯ ಕೊರಟಗೆರೆ ತಾಲೂಕಿನ ಚನ್ನಪಟ್ಟಣ ಎಂಬ ಗ್ರಾಮದಲ್ಲಿ ದಾರಿಯ ಮಧ್ಯದಲ್ಲಿರುವ ಅರಳೀಮರದ ಕಟ್ಟೆಯನ್ನು ಅವರು ಏರಿ ಹಾದು ಹೋದರೆ ಸವರ್ಣೀಯರು ಬಂದು ಗೋಮೂತ್ರ ಹಾಕಿ ದಾರಿಯನ್ನು ಶುದ್ಧಿಗೊಳಿಸುತ್ತಾರೆ."[೪೮]

"ಜಿಲ್ಲೆಯ ಪಾವಗಡ ತಾಲೂಕಿನಲ್ಲಿ ದೇವಸ್ಥಾನದ ಪ್ರವೇಶದ ವಿಚಾರದಲ್ಲಿ ತಳಸಮುದಾಯಗಳನ್ನು ತಾರತಮ್ಯದಿಂದ ನಡೆಸಿಕೊಳ್ಳುವ ಜಿಲ್ಲಾ ಪೊಲೀಸರ ಮಧ್ಯಪ್ರವೇಶ

ಸ್ವಾಗತಾರ್ಹ. ಆದರೆ ದಲಿತರ ಮೇಲಿನ ನಿರಂತರ ದಾಳಿ ಹಾಗೂ ಆರೋಪಿ ಬಂಧಿಸುವ ವಿಚಾರದಲ್ಲಿ ರಾಜ್ಯ ಸರ್ಕಾರ ಇಚ್ಛಾಶಕ್ತಿ ಪ್ರದರ್ಶಿಸಬೇಕು"[೪೯] ಎಂದು ಒತ್ತಾಯಿಸಿದರು.

ದಿನ ಬೆಳಗಾದರೆ ತೀವ್ರಗೊಳ್ಳುತ್ತಿರುವ ತಳಸಮುದಾಯಗಳ ಮೇಲಿನ ದೌರ್ಜನ್ಯಗಳ ಹಿನ್ನೆಲೆಯಲ್ಲಿ ದಲಿತ ಹಕ್ಕುಗಳ ಸಮಿತಿ, ಸಮಾಜ ಕಲ್ಯಾಣ ಸಚಿವ ಆಂಜನೇಯ ಅವರಿಗೆ ೩೦-೫-೨೦೧೭ರಂದು ಒಂದು ಮನವಿ ಸಲ್ಲಿಸಿ "ನಿಲ್ಲದ ದಲಿತರ ಮೇಲಿನ ದೌರ್ಜನ್ಯ ತಡೆಗಟ್ಟಬೇಕು, ಪರಿಹಾರ ಕಾಣದ ಕುಟುಂಬಗಳಿಗೆ ತಕ್ಷಣ ಪರಿಹಾರ ನೀಡಬೇಕು. ಜಿಲ್ಲೆಗೊಂದು ವಿಶೇಷ ತ್ವರಿತ ನ್ಯಾಯಾಲಯಗಳನ್ನು ಸ್ಥಾಪಿಸಬೇಕು, ವಿವಿಧ ದೌರ್ಜನ್ಯ ಪ್ರಕರಣಗಳ ತಪ್ಪಿತಸ್ಥರಿಗೆ ತಕ್ಷಣ ಕಠಿಣ ಶಿಕ್ಷೆಯಾಗಬೇಕು ಮತ್ತು ಸಾಕ್ಷಿಗಳ ರಕ್ಷಣೆಗೆ ಕ್ರಮ ವಹಿಸಬೇಕು"[೫೦] ಎಂಬ ಹಕ್ಕೊತ್ತಾಯಗಳನ್ನು ಮಂಡಿಸಿತು. ಮನವಿ ಪತ್ರದಲ್ಲಿ ಇತ್ತೀಚಿನ ಕೆಲವು ದೌರ್ಜನ್ಯ ಪ್ರಕರಣಗಳನ್ನು ಸಚಿವರ ಗಮನಕ್ಕೆ ತರಲಾಯಿತು. ಅದರಲ್ಲಿ ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಘಟನೆಯನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

"ತುಮಕೂರು ಜಿಲ್ಲೆಯ ಮಲ್ಲಸಂದ್ರ ಸಮೀಪ ಕೊತ್ತಿಹಳ್ಳಿಯಲ್ಲಿ ಕುಂಚಂಗಿಯಮ್ಮ ಜಾತ್ರೆ. ದೇವಿಗೆ ತಳಸಮುದಾಯಗಳು ಪೂಜೆ ಸಲ್ಲಿಸಲು ಮುಂದಾದಾಗ ಅಲ್ಲಿಯ ಸವರ್ಣೀಯರು ಜಾತಿ ಮಲೀನವಾಯಿತೆಂದು ದೌರ್ಜನ್ಯ ನಡೆಸಿ ಸಾಮಾಜಿಕ ಬಹಿಷ್ಕಾರ ಹಾಕಿದ್ದಾರೆ. ಅದೇ ರೀತಿ ಕೋರಾ ಹೋಬಳಿ ಬಿಟ್ಟನಕುರಿಕೆಯ ದಲಿತರ ಮೇಲೆ ದೌರ್ಜನ್ಯಗಳೂ ನಡೆದಿದೆ."[೫೧]

ಜನವರಿ ೨೦೧೭ರಂದು ಮಾನವೀಯತೆ ಇರುವವರೆಲ್ಲರೂ ತಲೆ ತಗ್ಗಿಸುವಂತಹ ಹೇಯ ಕೃತ್ಯವೊಂದು ತುಮಕೂರು ಜಿಲ್ಲೆಯ ಗುಬ್ಬಿಯಲ್ಲಿ ನಡೆಯಿತು. "ಅಭಿಷೇಕ್ ಎಂಬ ತಳಸಮುದಾಯದ ಯುವಕನನ್ನು ಜಾತಿಯ ಕಾರಣಕ್ಕೆ ಅಲ್ಲಿನ ಸವರ್ಣೀಯರಲ್ಲಿನ ಕೆಲ ದುಷ್ಟರು ಸಂಪೂರ್ಣ ಬೆತ್ತಲೆಗೊಳಿಸಿ ಚಪ್ಪಲಿ ಹಾರ ಹಾಕಿ ಅಮಾನುಷವಾಗಿ ಹಲ್ಲೆ ನಡೆಸಿ ಶವದ ಬಟ್ಟೆಯಲ್ಲಿ ಸುತ್ತಿದ್ದ ದೇಹವನ್ನು ಅರೆ ಪ್ರಜ್ಞಾವಸ್ಥೆಯಲ್ಲಿ ಸ್ಮಶಾನದಲ್ಲಿ ಬಿಸಾಕಿ ಹೋಗಿದ್ದರು. ಈ ಯುವಕನಿಗೆ ಅವಾಚ್ಯವಾಗಿ ನಿಂದಿಸುತ್ತಾ, ಹೊಡೆಯುವುದನ್ನು ವಿಡಿಯೋ ರೆಕಾರ್ಡ್ ಮಾಡಿ ವಾಟ್ಸ್‌ಫ್‌ನಲ್ಲಿ ಬಿಡಲಾಗಿತ್ತು."[೫೨] ಇದನ್ನು ಮಾಧ್ಯಮಗಳು ಬೆಳಕಿಗೆ ತಂದವು. ಈ ಘಟನೆಯ ಕ್ರೂರತೆಯನ್ನು ನೋಡಿದ ಇಡೀ ರಾಜ್ಯವೇ ಹೌಹಾರಿತು. ಅಮಾಯಕ ಅಭಿಷೇಕ್ ಮೇಲೆ ಕರುಣೆಯಿಲ್ಲದೇ ಥಳಿಸಿದ್ದನ್ನು, ಅಸಹಾಯಕ ಯುವಕ ನೋವಿನಿಂದ ಚೀರುತ್ತಾ ಎಷ್ಟು ಅಂಗಲಾಚಿರೂ ಮನಕರಗದೇ ಮತ್ತಷ್ಟು ಹಲ್ಲೆ ನಡೆಸಿದರು. ಈ ಘಟನೆಯ ಬಗ್ಗೆ ತಿಳಿಯುತ್ತಲೇ ಗುಬ್ಬಿಯ ಹಾಗೂ ತುಮಕೂರಿನ ದಲಿತ ಸಂಘಟನೆಗಳ ಕಾರ್ಯಕರ್ತರು ಪ್ರತಿಭಟನೆ ನಡೆಸಿ ಅಪರಾಧಿಗಳನ್ನು ಬಂಧಿಸುವಂತೆ ಒತ್ತಾಯಿಸಿದರು. ಅಭಿಷೇಕ್ ಮೇಲೆ ಹಲ್ಲೆ ನಡೆಸಿದ ಹತ್ತು

ಜನ ಆರೋಪಿಗಳಲ್ಲಿ ಏಳು ಮಂದಿಯನ್ನು ಬಂಧಿಸಿ ಜಾತಿ ದೌರ್ಜನ್ಯ ತಡೆ ಕಾಯ್ದೆಯಡಿ ಪ್ರಕರಣ ದಾಖಲಿಸಲಾಗಿದೆ. ಆದರೆ ನಂತರದಲ್ಲಿ ಆರೋಪಿಗಳ ಕಡೆಯವರು ತಾವು ನಡೆಸಿದ ದೌರ್ಜನ್ಯದ ಗಮನವನ್ನು ದಿಕ್ಕು ತಪ್ಪಿಸಲು ಹಲ್ಲೆಗೊಳಗಾದ ಅಭಿಷೇಕ್ ಮೇಲೆಯೇ ಆರೋಪ ಹೊರಿಸುವ ಹುನ್ನಾರ ನಡೆಸಿದರು.

ಹಲ್ಲೆ ನಡೆಸಿದ ಕಾಡುಪ್ರಕಾಶ್ ಎಂಬಾತನ ಮಗಳನ್ನು ಅಭಿಷೇಕ್ ಚುಡಾಯಿಸಿದ್ದ ಹಾಗೂ ಹೆದರಿಸುತ್ತದ್ದ ಎಂಬ ಸುಳ್ಳು ಕತೆಗಳನ್ನು ಹೇಳಿದರು. ಆದರೆ ಈ ಕತೆ ಸುಳ್ಳು ಎಂಬುದು ಅಭಿಷೇಕ್, ಆ ಹುಡುಗಿ ಮತ್ತು ಹುಡುಗಿಯ ತಾಯಿ ನಂತರದಲ್ಲಿ ಮಾಧ್ಯಮಗಳಿಗೆ ನೀಡಿರುವ ಹೇಳಿಕೆಗಳಲ್ಲಿ ಸಾಬೀತಾಯಿತು. "ಅಪ್ರಾಪ್ತ ವಯಸ್ಸಿನ ಇಬ್ಬರೂ ಪರಸ್ಪರ ಪರಿಚಯವಿದ್ದು ಆ ಹುಡುಗಿಯೇ ಕಳೆದೆರಡು ತಿಂಗಳಿಂದ ಅಭಿಷೇಕ್‌ಗೆ ತನ್ನ ತಾಯಿಯ ಮೊಬೈಲಿನಿಂದ ಕರೆ ಮಾಡುತ್ತಿದ್ದಳು. ದಲಿತ ಜಾತಿಯ ಹುಡುಗನೊಂದಿಗೆ ತಮ್ಮ ಮಗಳು ಮಾತಾಡುತ್ತಿರುವುದನ್ನು ತಿಳಿದ ಕಾಡುಪ್ರಕಾಶ್ ಕೊನೆಗೆ ಅಭಿಷೇಕನನ್ನೇ ಮುಗಿಸಿಬಿಡಲು ನಿರ್ಧರಿಸಿದ್ದು, ಹುಡುಗಿಗೆ ತಿಳಿದು, ಆಕೆ ಅಭಿಷೇಕ್‌ನಿಗೆ ತನ್ನ ತಂದೆ ಹೊಡೆಯಬಹುದೆಂದೂ, ಊರು ಬಿಟ್ಟು ಹೋಗಬೇಕೆಂದೂ ತಿಳಿಸಿದ್ದಳು. ಆದರೆ ತಾನು ಯಾವ ತಪ್ಪನ್ನೂ ಮಾಡಿಲ್ಲವಾದ್ದರಿಂದ ತಾನೇಕೆ ಊರು ಬಿಡಬೇಕು ಎಂದು ಭಾವಿಸಿಕೊಂಡ ಅಭಿಷೇಕ್ ತನ್ನ ಪಾಡಿಗೆ ತಾನಿದ್ದ."[೫೩] ೧೭ನೇ ತಾರೀಖು ಕಾಡುಪ್ರಕಾಶ್ ಮತ್ತು ಆತನ ಗುಂಪಿನ ಕೈಗೆ ಸಿಕ್ಕು ಅದೃಷ್ಟವಶಾತ್ ಬದುಕುಳಿದಿದ್ದಾನೆ.

ವಾಸ್ತವ ಸಂಗತಿ ಇದಾಗಿದ್ದರೂ ಸಹ ಈಗ ಹುಡುಗಿಯ ಪೋಷಕರು ನೀಡಿದ್ದ ಸುಳ್ಳು ದೂರಿನ ಆಧಾರದಲ್ಲಿ ದಲಿತ ಯುವಕ ಅಭಿಷೇಕ್ ಮೇಲೆ ಪೋಕ್ಸೋ ಕಾಯ್ದೆಯಡಿ ದೂರು ದಾಖಲಿಸಲಾಗಿದೆ. ಪೋಕ್ಸೋ ಕಾಯ್ದೆಯ ಅಡಿಯಲ್ಲಿ ಕೇಸು ದಾಖಲಿಸುವ ಯಾವುದೇ ತಪ್ಪನ್ನೂ ಅಭಿಷೇಕ್ ಮಾಡದಿರುವುದು ಮೇಲ್ನೋಟಕ್ಕೆ ತಿಳಿಯುತ್ತಿದ್ದರೂ ಸಹ ಜಾತಿ ದೌರ್ಜನ್ಯದ ಹೇಯ ಪ್ರಕರಣವೊಂದನ್ನು ಮುಚ್ಚಿ ಹಾಕಲು ಆರೋಪಿಗಳು ನಡೆಸಿರುವ ಪ್ರಯತ್ನವೆಂದು ಹೇಳಬಹುದಾಗಿದೆ.

### ೩.೩. ತಳಸಮುದಾಯದ ಮಹಿಳೆ

ತಳಸಮುದಾಯದ ಮಹಿಳೆ ಪ್ರಾಚೀನ ಕಾಲದಿಂದಲೂ ಶೋಷಣೆಗೆ ಒಳಗಾಗುತ್ತಿದ್ದಾಳೆ. 'ದೇವದಾಸಿ' ಎಂಬ ವೇಶ್ಯಾವೃತ್ತಿಗೆ ಬಲಿಯಾಗುವಂತೆ ಇವರನ್ನು ಮೇಲ್ಜಾತಿಗಳು ನಂಬಿಸಿದ್ದವು. ದೇವದಾಸಿ ಪರಂಪರೆ ವಸಾಹತು ಕಾಲಘಟ್ಟದಲ್ಲಿ ತುಮಕೂರು ಜಿಲ್ಲೆಯಲ್ಲೂ ಅಸ್ತಿತ್ವದಲ್ಲಿತ್ತು

ಎಂಬ ಅಂಶವು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳು ನೀಡಿದ ಮಾಹಿತಿಯಿಂದ ತಿಳಿದು ಬಂದಿದೆ. ವೇಶ್ಯಾವೃತ್ತಿ ಪರಂಪರೆಯನ್ನು ಕುರಿತು ಗೋಪಿಚಂದರಾವ್ ಹೀಗೆ ಅಭಿಪ್ರಾಯಪಟ್ಟಿದ್ದಾರೆ.

"ದೇವತೆಗಳನ್ನು ಎಷ್ಟು ಬಗೆಯಾಗಿ ಪ್ರಸನ್ನೀಕರಿಸಲಾಯಿತೋ ಅಷ್ಟು ಪ್ರಮಾಣದಲ್ಲಿ ಮನುಷ್ಯನು ಸುಖ ಪಡೆಯಬಹುದು ಎಂಬ ವಿಶ್ವಾಸ ಒಂದು ಬಾರಿ ಯುನಾನ್ ದೇಶದ ಜನತೆಯಲ್ಲಿ ಹುಟ್ಟಿ ಹರಡಿತು. ಇದರ ಪರಿಣಾಮವಾಗಿ ದೇವತೆಗಳಿಗಾಗಿ ದೊಡ್ಡ ದೊಡ್ಡ ಭವನಗಳು ನಿರ್ಮಾಣವಾದವು. ಪ್ರಸಾದ, ವಾದ್ಯ, ಸಂಗೀತಗಳಿಂದ ಅವರನ್ನು ಮೆಚ್ಚಿಸಿಕೊಳ್ಳುವ ಪ್ರಯತ್ನವು ನಡೆಯಿತು. ಮಣ್ಣು ಅಥವಾ ಕಲ್ಲಿನ ದೇವತೆಗಳ ಸೇವೆಗಾಗಿ ಸಶರೀರ ಮನುಷ್ಯರು ಬಂದರು, ಸ್ತ್ರೀಯರು ಕಲೆತರು, ಕುಮಾರಿಯರು ಆಗಮಿಸಿದರು. ಆ ದೇವತೆಗಳು ತಮ್ಮ ಪ್ರತಿನಿಧಿಯಾಗಿರುವ ಪುರೋಹಿತರ ಮೂಲಕ ಹಾಗೆ ಬಂದಿದ್ದ ಸ್ತ್ರೀ ಮತ್ತಿ ಕುಮಾರಿಯರೊಡನೆ ಶರೀರ ಸಂಪರ್ಕ ಸ್ಥಾಪಿಸಿಕೊಂಡರು. ಆ ಮೇಲೆ ದೇವಾಲಯಗಳಲ್ಲಿ ಬಂದು ಹೋಗುವ ದೇವತೆಗಳ ಬೇರೆ ಪೂಜಾರಿಗಳಿಗೂ ಅವಕಾಶ ಒದಗಿತು."[೫೪]

ಈ ರೀತಿಯಾಗಿ ದೇವದಾಸಿಯೆಂಬ ವೇಶ್ಯಾವೃತ್ತಿಯ ಪರಂಪರೆ ಬೆಳೆದುಬಂದಿತು. ಪ್ರಸಿದ್ಧ ಇತಿಹಾಸಕಾರ ವಿಲಿಯಂ ಲೈಕಿಯು ಈ ಅಮಾನವೀಯ ಪದ್ಧತಿಯನ್ನು ಕುರಿತು ಹೀಗೆ ಹೇಳಿದ್ದಾರೆ.

"ಕಲ್ಮಷ ಮತ್ತು ಪತನದ ಪ್ರತೀಕವಾದ ಅವೊಂದು ನಾರಿಯ ಮೇಲೆ ಒಂದು ಭಾರವನ್ನು ಹೊರಿಸಲಾಗಿದೆ, ಈ ಭಾರವು ಹೊರಳಿದರೆ, ಜಗತ್ತು ಲಜ್ಜೆಯಿಂದ ತುಂಬಿ ಹೋಗುವುದು. ಧರ್ಮಗಳು ಹುಟ್ಟುತ್ತವೆ, ಸಾಯುತ್ತವೆ, ಸಂಸ್ಕೃತಿಗಳು ಅರಳುತ್ತವೆ, ಮುಗಿಯುತ್ತವೆ; ಆದರೆ ಕರುಣೆಯ ಸಾಕಾರ ಮೂರ್ತಿಯಾದ, ಮಾನವತೆಯ ಅಮರ ಪೂಜಾರಿಣಿಯಾದ ವೇಶ್ಯೆ ಪುರುಷರ ಕಾಮಲಿಪ್ಸೆಯ ದವಡೆಗಳೆಡೆಯಲ್ಲಿ ಯುಗಯುಗಗಳಿಂದ ಇದ್ದಲಿನಂತೆ ಜೀವಿಸಿದ್ದು ಉರಿಯುತ್ತಿದ್ದಾಳೆ"[೫೫] ಈ ರೀತಿಯಾಗಿ ತಳಸಮುದಾಯಗಳ ಮಹಿಳೆಯೇ ದೇವದಾಸಿ ಎಂಬ ವೇಶ್ಯಾವೃತ್ತಿ ಪರಂಪರೆಗೆ ಒಳಗಾಗಿರುವುದನ್ನು ಗಮನಿಸಬಹುದಾಗಿದೆ.

ಪ್ರಸ್ತುತ ಸಂದರ್ಭದಲ್ಲೂ ತಳಸಮುದಾಯದ ಮಹಿಳೆ ಶೋಷಣೆಗೆ ಒಳಾಗುಗುತ್ತಲೇ ಬಂದಿದ್ದಾಳೆ ಎಂಬುದು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತಿಳಿದುಬಂದಿದೆ. ಇದಕ್ಕೆ ಉತ್ತಮ ನಿದರ್ಶನವನ್ನು ಚಿನ್ನಸ್ವಾಮಿ ಸೋಸಲೆ ಅವರು 'ದಲಿತರ ಬದುಕು–ಮೇಲುಕು' ಕೃತಿಯಲ್ಲಿ ಚರ್ಚಿಸಿದ್ದಾರೆ. ಇತ್ತೀಚೆಗೆ ಸರ್ಕಾರವು ಶಾಲಾ ಮಕ್ಕಳಿಗೆ ಜಾರಿಗೆ ತಂದಿರುವ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದಲ್ಲಿ ಉದ್ಭವಿಸಿದ ನೂತನ ಅಸ್ಪೃಶ್ಯತಾ ನೀತಿ "ಇದು ಚಿಂತನೆಗಿಂತ

ಮುಖ್ಯವಾಗಿ ಆತ್ಮಾವಲೋಕನದ ವಿಷಯವಾಗಿದೆ. ಇದೊಂದು ಅತ್ಯುತ್ತಮ ಯೋಜನೆ ಎಂಬುದರಲ್ಲಿ ಎರಡು ಮಾತಿಲ್ಲ. ಅಡುಗೆಯವರ ನೇಮಕಾತಿಯನ್ನು ಸರ್ಕಾರದ ನಿಯಮಾನುಸಾರ ಮಾಡಬೇಕು. ದಲಿತ ಮಹಿಳೆಯರಿಗೆ ಅವಕಾಶ ಕೊಡಬೇಕು ಎಂಬುದು ಸರ್ಕಾರದ ಮಾನದಂಡ. ಇದನ್ನು ಎಲ್ಲ ಕಡೆ ಅನುಸರಿಸಲಾಗುತ್ತಿದೆ. ಆದರೆ ದುರಂತವೆಂದರೆ ದಲಿತ ಮಹಿಳೆಯರನ್ನು ಅಡುಗೆಯವರನ್ನಾಗಿ ಒಪ್ಪಿಕೊಳ್ಳಲು ಭಾರತೀಯ ಸ್ಪೃಶ್ಯ ಸಮಾಜ ಸಿದ್ಧವಾಗಿಲ್ಲ"[೫೬] ಎಷ್ಟೇ ತಿಳುವಳಿಕೆ ಕೊಟ್ಟರೂ, ಹೇಳಿದರೂ ರಾಜ್ಯದ ಅನೇಕ ಗ್ರಾಮಗಳಲ್ಲಿ ಸವರ್ಣೀಯ ಸಮುದಾಯದವರು ಇಂತಹ ಮನಸ್ಥಿತಿಯನ್ನು ಜೀವಂತವಾಗಿ ಇಟ್ಟುಕೊಂಡಿದ್ದಾರೆ ಹಾಗೂ ಇಟ್ಟುಕೊಂಡೇ ಇರುತ್ತಾರೆ. ಇದಕ್ಕೆ ಸಾವು ಇಲ್ಲವೆಂದು ಧೈರ್ಯವಾಗಿ ಸಾರಬಹುದಾಗಿದೆ.

"ಕುಣಿಗಲ್ ತಾಲೂಕಿನ ಸಿಂಗೋನಹಳ್ಳಿ ಎಂಬಲ್ಲಿ ದುರಂತ ನಡೆಯಿತು. ಆ ಗ್ರಾಮದಲ್ಲಿ ಇರುವುದೇ ಒಂದು ದಲಿತ ಕುಟುಂಬ. ಆ ಕುಟುಂಬದ ಮಹಿಳೆಯನ್ನು ಅಡುಗೆಯವರನ್ನಾಗಿ ನಿಯೋಜಿಸಿಕೊಂಡದ್ದಕ್ಕೆ ಇಡೀ ಊರಿಗೆ ಊರೇ ಈ ಕುಟುಂಬಕ್ಕೆ ಒಂದು ರೀತಿಯ ಸಾಮಾಜಿಕ ಬಹಿಷ್ಕಾರವನ್ನು ಹಾಕಿದಂತಹ ಪರಿಸ್ಥಿತಿಯನ್ನು ನಿರ್ಮಿಸಲಾಯಿತು. ವಿಷಯ ತಿಳಿದು ಬಂದಂತಹ ಜಿಲ್ಲಾ ಪೊಲೀಸ್ ವರಿಷ್ಠ ಮುನಿಸ್ವಾಮಿ ಅವರಿಗೆ ಊರಿನ ಮಹನೀಯರು ನೀಡಿದ ಉತ್ತರ ಅಷ್ಟೇ ಪ್ರಮಾಣದ ಚರಿತ್ರೆಯನ್ನು ಮೆಲುಕು ಹಾಕುವಂತೆ ಮಾಡಿತ್ತು. 'ಸ್ವಾಮಿ, ಊಟದ ಕ್ವಾಲಿಟಿ, ಗುಣಮಟ್ಟ ಸರಿ ಇಲ್ಲದೇ ಇದ್ದುದರಿಂದ ನಾವು ಮಕ್ಕಳಿಗೆ ಊಟ ಮಾಡಬೇಡಿ ಎಂದು ಹೇಳಿದ್ದೇವೆ, ನಾವೇನು ಜಾತಿ–ಪಾತಿ ಮಾಡುತ್ತಿಲ್ಲ"[೫೭] ಎಂಬುದು ಅವರ ತೋರಿಕೆಯ ಉತ್ತರ; ಇಂತಹ ಘಟನೆಗಳು ಜಿಲ್ಲೆ ಹಾಗೂ ರಾಜ್ಯದಾದ್ಯಂತ ತಿಳಿದುಬಂದಿದೆ.

ಈ ವಿಷಯಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ತುಮಕೂರು ಜಿಲ್ಲೆಯ ದಾಸಾಲುಕುಂಟೆ ಗ್ರಾಮಕ್ಕೆ ಭೇಟಿ ನೀಡಿದಾಗ ವಕ್ತೃಗಳು ಮಾಹಿತಿ ನೀಡಿದ್ದಾರೆ. ಗ್ರಾಮಗಳಲ್ಲಿ ದಲಿತ ಮಹಿಳೆಯನ್ನು ಅಕ್ಷರ ದಾಸೋಹ ಕಾರ್ಯಕ್ರಮದಡಿ ನೇಮಕ ಮಾಡಿದ್ದರಿಂದ ಅಲ್ಲಿನ ಮಕ್ಕಳನ್ನು ಶಾಲೆಯಲ್ಲಿ ಊಟ ಮಾಡದಂತೆ ನಿರ್ಬಂಧಿಸಿರುವುದು ಕಂಡುಬಂದಿದೆ. ಇಂದಿಗೂ ಕೂಡ ಬಹುತೇಕ ಶಾಲೆಗಳಲ್ಲಿ ತಳಸಮುದಾಯ ಮಹಿಳೆಯರು ಅಡುಗೆಯವರಾಗಿ ಕಾರ್ಯನಿರ್ವಹಿಸುತ್ತಿಲ್ಲ. ಅಡುಗೆಯವರ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿರುವುದು ತಿಳಿದುಬಂದಿದೆ. ಇದೇ ರೀತಿಯ ಇನ್ನೊಂದು ಉದಾಹರಣೆಯನ್ನು ಗಮನಿಸಬಹುದು.

"ಅಂಗನವಾಡಿಯಲ್ಲಿ ನನ್ನ ಹೆಂಡತಿ ಅಡುಗೆ ಕೆಲಸಕ್ಕೆ ಸೇರಿದ್ದರಿಂದ ಊರಿನ ಸವರ್ಣೀಯರು ಅಂಗನವಾಡಿಯಲ್ಲಿ ತಮ್ಮ ಮಕ್ಕಳು ಊಟ ಮಾಡುವುದನ್ನು ನಿರ್ಬಂಧಿಸಿದ್ದರು"[೫೮]

ಎಂದು ಸೂರೇನಹಳ್ಳಿ ನಿವಾಸಿ ಭೀಮರಾಜು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ್ದಾರೆ. ರಾಜ್ಯಾದಾದ್ಯಂತ ನಿರಂತರವಾಗಿ ಇಂತಹ ಘಟನೆಗಳು ನಡೆಯುತ್ತಿವೆ.

ಒಟ್ಟಾರೆಯಾಗಿ ಹೇಳುವುದಾದರೆ, ಭಾರತೀಯ ಸಮಾಜ ನಿಂತಿರುವುದು ಜಾತಿಯ ಆಧಾರದಲ್ಲಿ. ಜಾತಿಯನ್ನು ಹೊರತುಪಡಿಸಿ ಹಿಂದೂಧರ್ಮವನ್ನೇ ಆಗಲಿ, ಭಾರತೀಯ ಸಮಾಜವನ್ನೇ ಆಗಲಿ ನೋಡುವುದಕ್ಕೆ ಆಗಲಿ ಸಾಧ್ಯವಿಲ್ಲ. ಜಾತಿ ವ್ಯಕ್ತಿಯನ್ನು ಹುಟ್ಟಿನಿಂದ ಸಾವಿನವರೆಗೆ ಪ್ರತಿನಿಧಿಸುತ್ತದೆ. ಜಾತಿಯ ಹೆಸರಿನಲ್ಲಿ ನಿರಂತರ ಶೋಷಣೆಗೆ ಒಳಗಾಗುವವರು ತಳಸಮುದಾಯಗಳು.

**ಕೊನೆ ಟಿಪ್ಪಣಿಗಳು**

೧. ಇರ್ಫಾನ್ ಹಬೀಬ್ (ಲೇ.), ಕಕ್ಕಿಲ್ಲಾಯ ಬಿ.ವಿ. (ಅನು.), ೨೦೧೩, **ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ಪು.೬.

೨. ಚಿನ್ನಸ್ವಾಮಿ ಸೋಸಲೆ ಎನ್., ೨೦೧೨, **ದಲಿತರ ಬದುಕು-ಮೆಲುಕು,** ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೩೭೭.

೩. **ಜಾತಿ ಸಂವಾದ,** ೩ನೇ ಡಿಸೆಂಬರ್ ೨೦೧೨, ಪು.೭.

೪. ಅದೇ, ಪು.೭.

೫. ಅದೇ, ಪು.೭.

೬. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, **ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು...,** ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೪೯.

೭. **ಜಾತಿ ಸಂವಾದ,** ೩ನೇ ಡಿಸೆಂಬರ್ ೨೦೧೨, ಪು.೭.

೮. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, **ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು...,** ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೧೩.

೯. ಪೋತೆ ಎಚ್.ಟಿ(ಲೇ.), ಏಪ್ರಿಲ್ ೨೦೦೮, **ಅಂಬೇಡ್ಕರ್ ಲೋಹಿಯಾ ಸಾಂಸ್ಕೃತಿಕ ಅನುಸಂಧಾನ,** ಸಂವಾದ, ಪು.೧೪.

೧೦. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, **ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು...,** ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೫೦.

೧೧. **ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಬರಹಗಳು ಮತ್ತು ಭಾಷಣಗಳು,** ೨೦೧೫, ಸಂಪುಟ ೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಪು.೩೦.

೧೨. ಚಿನ್ನಸ್ವಾಮಿ ಸೋಸಲೆ ಎನ್., ೨೦೦೮, **ಭಾರತೀಯ ಸಮಾಜ ಮತ್ತು ದಲಿತರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೬೦.

೧೩. ಅದೇ, ಪು.೬೧-೬೨.

೧೪. **ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ೨೦೧೫, ಸಂಪುಟ ೪, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೭೦.

೧೫. ಶಿವರಾಮ ಶೆಟ್ಟಿ, ಮಟ್ಪಾಡಿ, ೧೯೫೬, **ದಲಿತ ಸಮಾಜ,** ೨೨ನೇ ನವೆಂಬರ್, ಪು.೧೧.

೧೬. ಪ್ರಜಾವಾಣಿ, ಏಪ್ರಿಲ್, ೧೫, ೨೦೧೬.

೧೭. ಪ್ರಜಾವಾಣಿ, ಅಕ್ಟೋಬರ್ ೩೧, ೨೦೧೫.

೧೮. ಪ್ರಜಾವಾಣಿ, ಏಪ್ರಿಲ್ ೭, ೨೦೧೫.

೧೯. ಪ್ರಜಾವಾಣಿ, ೪ನೇ ಫೆಬ್ರವರಿ ೨೦೧೩, ಪು.೭, ಜಾತಿ ಸಂವಾದ.

೨೦. ನವಯುಗ, ವಾರಪತ್ರಿಕೆ, ೮ನೇ ಮೇ, ೧೯೫೮, **ಜಾತಿ ವರ್ಗಗಳ ಪೆಡಂಭೂತ.**

೨೧. ಪ್ರಜಾವಾಣಿ, ೧೫ನೇ ಫೆಬ್ರವರಿ, ೨೦೧೩, **ಬಿಸಲೇಹಳ್ಳಿ ದೇಗುಲಕ್ಕೆ ದಲಿತ ಪ್ರವೇಶ.**

೨೨. ಪ್ರಜಾವಾಣಿ, ಮೇ ೨೬, ೨೦೧೭, **ಗ್ರಾಮ ದೇವತೆ ಜಾತ್ರೆ ನಿಲ್ಲಿಸಿದ ಗ್ರಾಮಸ್ಥರು!**

೨೩. ಅದೇ, ಪು.

೨೪. ಪ್ರಜಾವಾಣಿ, ಸೋಮವಾರ ೧೭ನೇ ಡಿಸೆಂಬರ್ ೨೦೧೨, **ಜಾತಿ ಸಂವಾದ,** ಪು. ೭.

೨೫. ಅದೇ, ಪು.೭.

೨೬. ಸಾವುಕಾರ ಎಸ್.ಕಾಂಬಳೆ, ಸಂವಾದ ಮೇ, ೨೦೦೩, **ಅಸ್ಪೃಶ್ಯತೆ ಸೃಷ್ಟಿಯ ಕಾರಣ ಅರಸುತ್ತಾ.**

೨೭. **ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ೨೦೧೦, ಸಂಪುಟ ೭, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೩೧೬.

೨೮. ಅದೇ, ಪು.೩೨೧.

೨೯. ಅದೇ, ಪು.೩೨೨.

೩೦. ಅದೇ, ಪು.೩೫೦.

೩೧. ಅದೇ, ಪು.೩೩೩.

೩೨. ಗೋಪಾಲಕೃಷ್ಣ ಬಿ.ಟಿ., ಆಗಸ್ಟ್ ೨೦೧೩, **ಗೋಹತ್ಯೆ ನಿಷೇಧದ ಹಿಂದಿರುವ ಇತಿಹಾಸ,** ಸಂವಾದ, ಪು.೩೧.

೩೩. ಮಹಾದೇವಮೂರ್ತಿ ಬಿ.ಎಂ., ಮೇ ೨೦೧೭, **ಗೋ ಸಂರಕ್ಷಣೆಯೋ ದುರ್ಬಲರ ಶೋಷಣೆಯೋ....?,** ಸಂವಾದ, ಪು.೪.

೩೪. ಶ್ರೀಪಾದ ಭಟ್ ಬಿ., ನವೆಂಬರ್, ೨೦೧೨, **ವಿಷಗಾಳಿಯಲ್ಲಿ ನಲುಗುತ್ತಿರುವ ಭಾರತ,** ಸಂವಾದ, ಪು.೧೧.

೩೫. ಅದೇ, ಪು.೧೨.

೩೬. ಶಶಿಕಾಂತ ಯಡಹಳ್ಳಿ (ಲೇ.), ಅಕ್ಟೋಬರ್ ೨೦೧೬, **ದೇಶಭಕ್ತಿಯ ಉನ್ಮಾದದ ಹಿಂದೆ ಸಂಘ ಪರಿವಾರದ ಹುನ್ನಾರ,** ಸಂವಾದ, ಪು.೨೭.

೩೭. ಪ್ರಜಾವಾಣಿ, ನವೆಂಬರ್ ೨೧, ೨೦೧೫.

೩೮. ಪೂರ್ಣಿಮಾ ಆರ್.(ಲೇ.), ಆಗಸ್ಟ್ ೨, ೨೦೧೬, **ದಲಿತರು, ಮುಸ್ಲಿಮರನ್ನು ಬಡಿಯಲು ಒದಗಿದ ಹೊಸ ಬಾರುಕೋಲು, ಹುಸಿ ಧಾರ್ಮಿಕತೆಗೆ ರಕ್ತಮಾಂಸ ತುಂಬಿದ ಗೋವು,** ಪ್ರಜಾವಾಣಿ.

೩೯. ಶ್ರೀಪಾದ ಭಟ್ (ಲೇ.), ಮೇ ೬, ೨೦೧೬, **ಮಾಂಸ ಸೇವನೆ ಮತ್ತು ಕರ್ಮಠತನ,** ಪ್ರಜಾವಾಣಿ.

೪೦. ಅದೇ, ಪು.

೪೧. ಪ್ರಜಾವಾಣಿ, ಸೆಪ್ಟೆಂಬರ್ ೧೯, ೨೦೧೫, ಪು.೭

೪೨. ಅದೇ, ಪು

೪೩. ಅದೇ, ಪು.

೪೪. ಪ್ರಜಾವಾಣಿ, ೮-೧೦-೨೦೦೭, ದಲಿತರಿಗೆ ಬಹಿಷ್ಕಾರ: ಆರೋಪಿಗಳ ವಿರುದ್ಧ ಕ್ರಮಕ್ಕೆ ಗ್ರಾಮಸ್ಥರ ಆಗ್ರಹ.

೪೫. ಅದೇ, ಪು.

೪೬. ಪ್ರಥಮ ವರ್ತಮಾನ ವರದಿ, ೧೫-೧೧-೨೦೦೨, ಕೋಡಿಹಳ್ಳಿ, ತುಮಕೂರು ತಾಲೂಕು.

೪೭. ಪ್ರಜಾವಾಣಿ, ೧೪ ಮೇ ೨೦೧೫, ದಲಿತರ ಮೇಲಿನ ದೌರ್ಜನ್ಯ ತಡೆಗಟ್ಟಲು ಸಿಪಿಎಂ ಅಗ್ರಹ.

೪೮. ಭಾರತ ಕಮ್ಯುನಿಸ್ಟ್ ಪಕ್ಷ(ಮಾರ್ಕ್ಸ್‌ವಾದಿ), ನವೆಂಬರ್ ೨೨, ೨೦೧೬, ದಲಿತರ ಮೇಲಿನ ದೌರ್ಜನ್ಯಗಳು, ಕರ್ನಾಟಕ ರಾಜ್ಯ ಸಮಿತಿ.

೪೯. ಉದಯವಾಣಿ, ಆಗಸ್ಟ್ ೧೧, ೨೦೧೫.

೫೦. ೭ ಜುಲೈ ೨೦೧೭, ಜನಶಕ್ತಿ ಕನ್ನಡ ವಾರಪತ್ರಿಕೆ, ದಲಿತರ ಮೇಲಿನ ದೌರ್ಜನ್ಯ: ಜಿಲ್ಲೆಗೊಂದು ವಿಶೇಷ ತ್ವರಿತ ಕೋರ್ಟು ಸ್ಥಾಪಿಸಿ.

೫೧. ಅದೇ, ಪು.

೫೨. ಗುಬ್ಬಿ ಹಾಗೂ ರಾಜ್ಯದೆಲ್ಲೆಡೆ ನಡೆಯುತ್ತಿರುವ ದಲಿತರ ಮೇಲಿನ ನಿರಂತರ ಅಮಾನುಷ ಹಲ್ಲೆ ಕಗ್ಗೊಲೆಗಳನ್ನು ಪ್ರತಿರೋಧಿಸಿ ಚಲೋ ತುಮಕೂರು ಫೆಬ್ರವರಿ ೧೬, ೨೦೧೭, ದಲಿತ-ಪ್ರಗತಿಪರ ಸಂಘಟನೆಗಳ ಒಕ್ಕೂಟ, ತುಮಕೂರು ದಲಿತ ದಮನಿತರ ಸ್ವಾಭಿಮಾನಿ ಹೋರಾಟ ಸಮಿತಿ, ಕರಪತ್ರ ಕರ್ನಾಟಕ.

೫೩. ಅದೇ,

೫೪. ಗೋಪಿಚಂದರಾವ್ ಎಸ್., ೧೯೫೮, ಸಮಾಜದ ತೊಳೆಯಲಾರದ ಕಳಂಕ-ವೇಶ್ಯಾವೃತ್ತಿಯ ಪ್ರಾಚೀನ ಪರಂಪರೆ, ನವಯುಗ, ವಾರಪತ್ರಿಕೆ, ಪು.೩.

೫೫. ಅದೇ, ಪು.೩.

೫೬. ಚಿನ್ನಸ್ವಾಮಿ ಸೋಸಲೆ ಎನ್., ೨೦೧೨, ದಲಿತರ ಬದುಕು-ಮೆಲಕು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೮.

೫೭. ಅದೇ, ಪು.೫೯.

೫೮. ಭೀಮರಾಜು, ಸೂರೇನಹಳ್ಳಿ.

# ಅಧ್ಯಾಯ ನಾಲ್ಕು

## ಆಚರಣೆಗಳ ವಿಶ್ಲೇಷಣೆ

**೪.೧. ಪ್ರಕೃತಿಗೆ ಸಂಬಂಧಿಸಿದ ಆಚರಣೆಗಳು**

೪.೧.೧. ಹೊಲ ದೇವರು

೪.೧.೨. ಹೊರಬೀಡು

೪.೧.೩. ಮುನಿಯಪ್ಪನ ಆಚರಣೆ

೪.೧.೪. ಮಳೆರಾಯ

೪.೧.೫. ಸಾವಿಗೆ ಸಂಬಂಧಪಟ್ಟ ಆಚರಣೆಗಳು

**೪.೨. ಗ್ರಾಮದೇವತೆಗಳನ್ನು ಕುರಿತ ಆಚರಣೆ, ಸಂಪ್ರದಾಯಗಳು**

೪.೨.೧. ಮಾರಮ್ಮನನ್ನು ಕುರಿತ ಪುರಾಣ

೪.೨.೨. ಸಿಡಿಯ ಆಚರಣೆ

೪.೨.೩. ಕೊಂಡ ಹಾಯುವುದು

೪.೨.೪. ಮಡೆಸ್ನಾನ

೪.೨.೫. ಜನಿವಾರ ಶಾಸ್ತ್ರ

೪.೨.೬. ಬೇವಿನ ಸೀರೆ, ಬಾಯಿಗೆ ಬೀಗ

೪.೨.೭. ಬಸವಿ ಪದ್ಧತಿ

## ಅಧ್ಯಾಯ: ನಾಲ್ಕು

# ಆಚರಣೆಗಳ ವಿಶ್ಲೇಷಣೆ

ಪ್ರಕೃತಿಯ ಜೊತೆ ಬದುಕುತ್ತಿದ್ದ ಆದಿಮಾನವ ಪ್ರಕೃತಿಯಲ್ಲಿನ ಬಿಡಿಸಲಾರದ ನಿಗೂಢಗಳನ್ನು ಗಮನಿಸಿದ. ತನ್ನನ್ನೂ ಮೀರಿದ ಅಗೋಚರ ಶಕ್ತಿಯೊಂದಿದೆ ಎಂದು ನಂಬಿದ. ಆ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನ್ನ ಒಳ್ಳೆಯದನ್ನು ಸಾಧಿಸಿಕೊಳ್ಳಬೇಕು ಎಂಬುದು ಅವನ ಉದ್ದೇಶವಾಯಿತು. ಕಾರಣವೆಂದರೆ ಪ್ರಕೃತಿಯ ಜೊತೆ ಬದುಕುತ್ತಿದ್ದ ಅವನಿಗೆ ಸಮಸ್ಯೆಗಳು ಎದುರಾಗುತ್ತಿದ್ದವು. ಆದ್ದರಿಂದ ಅಗೋಚರ ಶಕ್ತಿಯನ್ನು ಒಲಿಸಿಕೊಳ್ಳುವ ಮೂಲಕ ತನಗೆ ಒದಗುವ ಸಮಸ್ಯೆಗಳಿಂದ ಪಾರಾಗಬೇಕು ಎಂಬುದು ಅವನ ತರ್ಕವಾಗಿತ್ತು. ಅವನು ಎರಡು ರೀತಿಯಲ್ಲಿ ಆ ಶಕ್ತಿಯನ್ನು ಗೆಲ್ಲುವ ಪ್ರಯತ್ನ ಮಾಡಿದ. ಅವುಗಳೆಂದರೆ ೧. ಮಾಟದ ಮೂಲಕ ನಿಯಂತ್ರಿಸುವುದು. ೨. ಆರಾಧನೆಯ ಮೂಲಕ ಒಲಿಸಿಕೊಳ್ಳುವುದು. ಇಂದಿಗೂ ಈ ಆಚರಣೆಗಳು ಜನಪದರ ಜೀವನದಲ್ಲಿ ಉಳಿದು ಬಂದಿವೆ. ಹಳೇ ಶಿಲಾಯುಗದ ಕಾಲದಿಂದ ಆರಂಭವಾಗಿ ಹೊಸ ಶಿಲಾಯುಗ ಮತ್ತು ಕಂಚಿನ ಯುಗದಲ್ಲಿ ಅನೇಕ ರೀತಿಯ ದೇವರುಗಳ ಮೂರ್ತಿಗಳು ಸಿಕ್ಕಿವೆ. ಗುಹೆಗಳಲ್ಲಿ ಮತ್ತು ಬಂಡೆಗಳ ಮೇಲೆ ಕೆತ್ತಿದ ಅನೇಕ ಆಕೃತಿಗಳು ದೊರಕಿವೆ. ದೇವರುಗಳ ಅಸ್ತಿತ್ವ ಪ್ರಾಚೀನದಲ್ಲಿಯೇ ಇತ್ತು ಎಂಬುದಕ್ಕೆ ಅನೇಕ ಆಧಾರಗಳನ್ನು ಪುರಾತತ್ವಶಾಸ್ತ್ರಜ್ಞರು ನಿರೂಪಿಸಿದ್ದಾರೆ. ಭಾರತದ ಪ್ರಾಚೀನ ಪರಂಪರೆಯಲ್ಲಿ ಕಂಡುಬರುವ ಬಹುತೇಕ ದೇವರುಗಳಲ್ಲಿ ಪ್ರಮುಖ ಸ್ಥಾನ ಮಾತೃದೇವತೆಯರದ್ದು. ಇಡೀ ಜಗತ್ತಿನ ದೈವಕಲ್ಪನೆ ಯಲ್ಲಿಯೂ ಮಾತೃವಿಗೆ ಪ್ರಥಮ ಸ್ಥಾನವಿದೆ.

ಮಾತೃದೇವತೆಯ ಆರಾಧನೆ ಯಾವ ರೀತಿಯಾಗಿ ಅಸ್ತಿತ್ವಕ್ಕೆ ಬಂತು ಎಂಬುದರ ಬಗ್ಗೆ ತಿಳಿಯುವುದು ಅಗತ್ಯ. ಮನುಷ್ಯ ನಾಗರಿಕನಾಗಲು ಹವಣಿಸಿದ ಮೊದಲ ಘಟ್ಟ ಆಹಾರ ಸಂಗ್ರಹಣೆ, ಅಂದರೆ ತನಗೆ ಬೇಕಾದ ಅಗತ್ಯ ವಸ್ತುಗಳನ್ನು ಹುಡುಕುತ್ತಾ ಕಾಡಿನಿಂದ ಕಾಡಿಗೆ ಅಲೆಯುತ್ತಿದ್ದ. ಆದರೂ ಹಾಗೆ ಲಭ್ಯವಾದ ಆಹಾರವನ್ನು ಒಂದು ಕಡೆ ಕೂಡಿಡುವ, ಸಂರಕ್ಷಿಸುವ

ಬುದ್ಧಿಯನ್ನು ಉಪಯೋಗಿಸಿದ್ದೇ ಅವನು ನಾಗರಿಕತೆ ಕಡೆಗೆ ಮುಖ ಮಾಡಿದ ಪ್ರಥಮ ಹಂತ. ಒಂದು ಗುಂಪಿನ ಜನ ಒಟ್ಟಾಗಿ ವಾಸಿಸುವ ಮೂಲಕ ತಮಗೊಂದು ಅಸ್ತಿತ್ವ ಕಂಡುಕೊಳ್ಳುತ್ತಿದ್ದ ಸಮೂಹ ಜೀವನದ ಕಾಲ ಅದು. ಮಕ್ಕಳನ್ನು ಹಡೆಯಬಲ್ಲ ಶಕ್ತಿ ಪಡೆದ ತಾಯಿ ಮಾತ್ರ ಅಲ್ಲಿ ಮುಖ್ಯ. ಅವಳಿಗೆ ಅಲ್ಲಿ ಪ್ರಾಧಾನ್ಯ. ಹೀಗಾಗಿ ಸೃಷ್ಟಿಗೆ ಕಾರಣಳಾದ ಮತ್ತು ಪೋಷಣೆಗೆ ಪೂರಕಳಾದ ಮಾತೃವನ್ನು ಗೌರವಿಸಿ, ಆರಾಧಿಸಿದ್ದು ಕೂಡ ಅಷ್ಟೇ ಸಹಜ. ಮಾತೃವಿನ ಆರಾಧನೆ ಆರಂಭವಾದ ಮೊದಲಹಂತ ಇದು, ಈ ಹಿನ್ನೆಲೆಯಲ್ಲಿ ದೈವ ಸೃಷ್ಟಿಯ ವಿವಿಧ ಹಂತಗಳನ್ನು ಗುರುತಿಸಬಹುದು.

ಸ್ತ್ರೀಯ ಗರ್ಭಧಾರಣಾ ಶಕ್ತಿ ಮತ್ತು ಭೂಮಿಯ ಸಸ್ಯಧಾರಣ ಶಕ್ತಿಯನ್ನು ಗೌರವಿಸಿ ಮಾನ್ಯ ಮಾಡಿದ ಕೃಷಿ ಹಂತದ ಚಟುವಟಿಕೆಗಳು ಸ್ತ್ರೀಯನ್ನು ದೈವಸ್ಥಾನಕ್ಕೆ ಏರಿಸಿದವು. ಗ್ರಾಮದೇವತೆಗಳ ಸೃಷ್ಟಿ ಆರಂಭವಾದದ್ದು ಹೀಗೆ. ಮಾನವನು ಆದಿಮ ಆರ್ಥಿಕ ಚಟುವಟಿಕೆ ಎನಿಸಿದ ಆಹಾರ ಸಂಗ್ರಹಣೆಯ ಕಾಲದಲ್ಲಿ ಅತ್ಯಂತ ಪ್ರಮುಖ ಪಾತ್ರವಹಿಸಿದ ಸ್ತ್ರೀಯ ಸ್ಥಾನಮಾನ, ತನ್ನ ಸೃಷ್ಟಿಶಕ್ತಿಯ ಜೊತೆಗೆ ಆಹಾರ ರಕ್ಷಣಾಶಕ್ತಿಯನ್ನು ಒಂದುಗೂಡಿಸಿಕೊಂಡು, ಆರ್ಥಿಕ ಚಟುವಟಿಕೆಯ ಆರಂಭಿಕ ಹಂತದ ಉದಯಕ್ಕೆ ಕಾರಣವಾಯಿತು. "ಡಿ.ಡಿ.ಕೋಸಾಂಬಿ ಅವರ ಪ್ರಕಾರ ಈ ಹಂತವೇ ಮಾತೃದೇವತೆಯರ ಉಗಮಕ್ಕೂ ಕಾರಣವಾಗಿರಬಹುದು. ಹೀಗೆ ಉಗಮಗೊಂಡ ದೇವತೆಯನ್ನು ಅಂದಿನ ಅಲೆಮಾರಿ ಸ್ವರೂಪದ ಜನರು ತಮ್ಮ ಕಾರ್ಯಕಲಾಪಗಳನ್ನು ಮುಗಿಸಿ ಬಂದು ಸೇರುತ್ತಿದ್ದ ಕೂಡು ಹಾದಿಗಳಲ್ಲಿ ಪ್ರತಿಷ್ಠಾಪಿಸುತ್ತಿದ್ದರು. ಅದಕ್ಕೆ ನರಬಲಿ ಅಥವಾ ರಕ್ತ ಬಲಿಯನ್ನು ನೀಡಲಾಗುತ್ತಿತ್ತು."[೧] ದೇವಿಪ್ರಸಾದ ಚಟ್ಟೋಪಾಧ್ಯಾಯ ಅವರ ಪ್ರಕಾರ "ಹೀಗೆ ಉಗಮಗೊಂಡ ಮಾತೃದೇವತಾ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳಾಗಿವೆ."[೨]

ಸಮಾನ ವೃತ್ತಿ, ಸಮಾನ ಮನಸ್ಸು, ಸಮಾನ ಅಭಿರುಚಿಗಳಿಂದ ಕೂಡಿದ ಜನ ಪ್ರತ್ಯೇಕ ಪ್ರತ್ಯೇಕ ಗುಂಪುಗಳಾದರು. ಆ ಗುಂಪುಗಳಿಗೆ ಸಮಾನವಾದ ನಂಬಿಕೆಗಳು, ಆಚರಣೆಗಳು ಚಾಲ್ತಿಗೆ ಬಂದವು. ಹೀಗೆಯೇ ಜೀವನದ ಕಷ್ಟಗಳನ್ನು ಮರೆಯಲು ಮನಸ್ಸಿಗೆ ಮತ್ತು ಅನುಭವಕ್ಕೆ ಸಹಜವಾದ ಹಾಡು, ಕಥೆ, ಚಿತ್ರ, ಅಲಂಕಾರ ಮುಂತಾದವು ರೂಪುಗೊಂಡವು. ಎಲ್ಲರೂ ಒಟ್ಟುಗೂಡಿ ಆನಂದಿಸುವಂಥ ಜಾತ್ರೆಗಳು, ಸಂತೆಗಳು, ಹಬ್ಬ ಹರಿದಿನಗಳು ಸಾಮಾಜಿಕ ಚಿಂತನೆ ಮತ್ತು ಕ್ರಿಯೆಗಳ ಫಲವಾಗಿ ಮೂಡಿ ಬಂದವು. ಮಣ್ಣು, ನೀರುಗಳನ್ನು ಆಧರಿಸಿದ ನಂಬಿಕೆಗಳು ಸುದೀರ್ಘ ಜೀವನದ ಫಲವಾಗಿ ರೂಢಿ ಮೂಲವಾದವು. ಹೀಗಾಗಿ ಜೀವನದಿಂದ ಹುಟ್ಟಿದ ಮತ್ತು ಜೀವನಕ್ಕೆ ಪೋಷಕವಾದ ಈ ಎಲ್ಲ ಪದ್ಧತಿಗಳು ದೀರ್ಘಕಾಲದ ಆಚರಣೆಯ

ಫಲವಾಗಿ ರೂಢಿ ಮೂಲವಾದವು. ಹೀಗಾಗಿ ಜೀವನದಿಂದ ಹುಟ್ಟಿದ ಮತ್ತು ಜೀವನಕ್ಕೆ ಪೋಷಕವಾದ ಈ ಎಲ್ಲ ಪದ್ಧತಿಗಳು ದೀರ್ಘ ಕಾಲದ ಆಚರಣೆಯ ಫಲವಾಗಿ ಸಂಸ್ಕೃತಿ ಎನಿಸಿಕೊಂಡವು. ಈ ಎಲ್ಲಾ ಸಂಸ್ಕೃತಿಯ ಮೂಲ ಪ್ರಜ್ಞೆ, ಮೂಲ ಸಾಮಗ್ರಿ ಮತ್ತು ಮೂಲ ಚಿಂತನೆ ಆ ಪರಿಸರದಿಂದ ಹುಟ್ಟಿದವುಗಳೇ ಆಗಿದ್ದವು.

ಈ ಮೂಲ ಸಂಸ್ಕೃತಿಗಳ ಮೇಲೆ ಆಗಮನವಾದ ಆರ್ಯ ಸಂಸ್ಕೃತಿಯಿಂದ ಆಕ್ರಮಣಗಳಾದವು. ಹಾಗೆಯೇ ಇತರ ಸಂಸ್ಕೃತಿಗಳ ಪ್ರಭಾವವೂ ಈ ಗ್ರಾಮೀಣ ಸಂಸ್ಕೃತಿಯ ಮೇಲೆ ದಟ್ಟವಾಗಿ ಆಗತೊಡಗಿತು. ಈ ಮೂಲ ಜನಾಂಗಗಳಲ್ಲಿ ಮತ್ತು ಸಂಸ್ಕೃತಿಗಳಲ್ಲಿ ಹಲವು ಪಲ್ಲಟಗಳನ್ನು ಮತ್ತು ಪರಿವರ್ತನೆಗಳನ್ನು ತಂದವು. ಗ್ರಾಮದೇವತೆಗಳ ಹಬ್ಬಗಳು ಜನಪದ ಸಂಸ್ಕೃತಿಯ ವಿಶಿಷ್ಟ ಪ್ರಕಾರ. ಅಪಾರ ಜನಸಂಖ್ಯೆ, ಗದ್ದಲ, ಮನೋರಂಜನೆ, ಆಟೋಟಗಳು, ವಿವಿಧ ರೀತಿಯ ಸರಕುಗಳ ವ್ಯಾಪಾರ, ದೇವರನ್ನು ಮೆರೆಸುವಿಕೆ, ಹರಕೆ ಇವುಗಳೆಲ್ಲ ಎಲ್ಲ ಹಬ್ಬಗಳ ಸಾಮಾನ್ಯ ನೋಟ ಗ್ರಾಮದೇವತೆಗಳ ಹಬ್ಬಗಳು ನಡೆಯುವುದು ಕೃಷಿಯ ಕೆಲಸಗಳು ಮುಗಿದು ಫಲ ಕೈಗೆ ಬಂದು ಶ್ರಮಿಕ ಬಿಡುವಾಗಿರುವ ಸಂದರ್ಭದಲ್ಲಿ. ಕೈಗೆ ಬಂದ ಫಲಕ್ಕಾಗಿ ದೇವರಿಗೆ ಕೃತಜ್ಞತೆ ಸಲ್ಲಿಸುವುದು ಮತ್ತು ಮುಂದಿನ ವರ್ಷವೂ ಇದೇ ರೀತಿಯ ಫಲ ಸಿಗುವಂತೆ ಪ್ರಾರ್ಥನೆ ಸಲ್ಲಿಸುವುದೂ ಹಬ್ಬಗಳ ಮುಖ್ಯ ಉದ್ದೇಶವಾಗಿರಬಹುದು. "ಇಂದಿಗೂ ಬಹುತೇಕ ಗ್ರಾಮದೇವತೆಗಳಿಗೆ ಗುಡಿ ಕಟ್ಟಿಲ್ಲದಿರುವುದನ್ನು ಗಮನಿಸಬಹುದು. ಅವು ಆಕಾಶಕ್ಕೆ ತೆರೆದುಕೊಂಡಿರಬೇಕು ಎಂಬ ನಿಯಮವಿದೆ. ಇದರ ಮೇಲೆ ಭಾವಣಿಯನ್ನು ಹೊದಿಸಿ ಅಪಚಾರವೆಸಗಿದ ಭಕ್ತನಿಗೆ ಕಷ್ಟ ಬರುತ್ತದೆ ಎಂಬ ನಂಬಿಕೆಗಳನ್ನು ಹೇರಲಾಗಿದೆ."[೩] ಇಂಥ ಕಟ್ಟಲೆಗಳಿಂದ ಈಗ ಪ್ರಚಲಿತದಲ್ಲಿರುವ ಈ ಪಂಥಗಳ ಆದಿ ಮೂಲವನ್ನು ಹಾಗೂ ಅದರ ಸ್ವಭಾವವನ್ನು ಕುರಿತು ಡಿ.ಡಿ.ಕೋಸಾಂಬಿ ಅವರು ಚರ್ಚಿಸಿದ್ದಾರೆ. ತಲೆಯ ಮೇಲೆ ಹೊರುವುದರಿಂದಾರಂಭಿಸಿ ರಥ, ತೇರುಗಳವರೆಗಿನ ವಿವಿಧ ಹಂತಗಳನ್ನು ಗಮನಿಸಿದಾಗ ತಿಳಿದು ಬರುವ ಸಂಗತಿಯೆಂದರೆ ಸಾಮಾನ್ಯವಾಗಿ ರಥೋತ್ಸವಗಳೆಲ್ಲ ಶಿಷ್ಟ ದೇವತೆಗಳಿಗೆ ನಡೆಯುವಂತಹವು. ಬಿದಿರಿನ ಬುಟ್ಟಿ, ಅಡ್ಡೆ, ಮರದ ಬಂಡಿಯಂತಹವು ಗ್ರಾಮದೇವತೆಗಳಿಗೆ ಮೀಸಲಾಗಿವೆ. ಗ್ರಾಮದೇವತೆಗಳು ಹಳ್ಳಿಗಳಿಗೆ, ಶ್ರಮಿಕರಿಗೆ, ತಳಸಮುದಾಯಗಳಿಗೆ ಸೀಮಿತವಾದವುಗಳಾಗಿವೆ.

ಗ್ರಾಮದೇವತೆಗಳ ಹಬ್ಬಗಳಲ್ಲಿ ವಿವಿಧ ರೀತಿಯ ಹರಕೆಗಳ ಸಲ್ಲಿಕೆಯೇ ಹಬ್ಬದ ಪ್ರಧಾನ ಅಂಶವಾಗಿರುತ್ತದೆ. ಸಿಡಿಯಾಡುವುದು, ಉರುಳುಸೇವೆ, ಬೆತ್ತಲೆ ಸೇವೆ, ಬೇವಿನುಡುಗೆ ಸೇವೆ, ಬಾಯಿಬೀಗ, ಕೊಂಡದ ಮೇಲೆ ನಡೆಯುವುದು, ಗಾವು ಸಿಗಿಯುವುದು ಇತ್ಯಾದಿ. ಉಜ್ಜನಿ

ಚೌಡಮ್ಮನ ಗ್ರಾಮದೇವತೆ ಹಬ್ಬದಲ್ಲಿ ಎರಡು ಜಾತಿಗಳ ತಾತ್ಕಾಲಿಕ ಪಾತ್ರ ಬದಲಾವಣೆಯೇ ಪ್ರಧಾನ. ಹಬ್ಬಗಳ ಅಂಗವಾಗಿ ರೂಪುಗೊಂಡ ಜನಪದ ಸಾಹಿತ್ಯ ಅನೇಕ ದೃಷ್ಟಿಗಳಿಂದ ಗಮನ ಸೆಳೆಯುತ್ತದೆ. ಈ ಸಾಹಿತ್ಯದಲ್ಲಿ ಹಾಡು, ಐತಿಹ್ಯ, ಪುರಾಣ, ಸ್ಥಳಕಥೆ, ವಿವರಣಾತ್ಮಕ ಕಥೆ, ಗಾದೆ, ನುಡಿಗಟ್ಟು ಇತ್ಯಾದಿ ಸೇರುತ್ತವೆ. ಶಿಷ್ಟದೇವತೆಗಳ ಕಥೆಗಳಿಗಿಂತ ಗ್ರಾಮದೇವತೆಗಳ ಕಥೆಗಳು ಅದರಲ್ಲಿಯೂ ಹೆಣ್ಣು ದೇವತೆಯ ಕಥೆಗಳು ಸಾಮಾಜಿಕ, ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ಉಪಯುಕ್ತ ಆಧಾರಗಳಾಗಿವೆ. ಸ್ಥಳನಾಮಗಳ ಅಧ್ಯಯನಕ್ಕೂ ಪೂರಕವಾದ ಮಾಹಿತಿಯನ್ನೊದಗಿಸುತ್ತವೆ. ಬಹುತೇಕ ಈ ಎಲ್ಲ ದೇವತೆಗಳು ಆಯಾ ಊರಿನ ಹೆಸರನ್ನೇ ಹೊಂದಿರುತ್ತವೆ. ಉದಾಹರಣೆಗೆ ಉಜ್ಜನಿ ಚೌಡಮ್ಮ, ನಾಗಸಂದ್ರದ ಕೆಂಪಮ್ಮ, ಹಂದನಕೆರೆ ದುರ್ಗಮ್ಮ, ಹುಲಿಕಲ್ ಕೆಂಪಮ್ಮ, ಗುನ್ನಾಗರದ ಎಲ್ಲಮ್ಮ ಇತ್ಯಾದಿ.

ಗ್ರಾಮದೇವತೆಗಳು ತಳಸಮುದಾಯಗಳ ಬದುಕಿನುದ್ದಕ್ಕೂ ಬೆಳೆದು ಬಂದಿವೆ. ಒಂದೊಂದು ಗ್ರಾಮದೇವತೆಗೂ ತನ್ನದೇ ಆದ ಪುರಾಣ, ಐತಿಹ್ಯಗಳು, ಮೌಖಿಕ ಪರಂಪರೆಯಲ್ಲಿ ತಳಸಮುದಾಯಗಳು ಕಟ್ಟುವ ಮೂಲಕ ಉಳಿದು ಬಂದಿವೆ. ಶಿವ ಅಥವಾ ವಿಷ್ಣುವಿನಂಥ ಶಿಷ್ಟ ದೇವತೆಗಳು ಎಷ್ಟೇ ಪ್ರಮುಖರಾಗಿದ್ದರೂ, ಜನರ ಕಷ್ಟಕಾಲದಲ್ಲಿ ನೆರವಿಗೆ ಬಂದು ಆತ್ಮೀಯರಾಗುವುದು ಗ್ರಾಮದೇವತೆಗಳೇ ಎಂಬ ನಂಬಿಕೆ ತಳಸಮುದಾಯಗಳಲ್ಲಿದೆ. ಗ್ರಾಮದೇವತೆಗಳೆಲ್ಲವೂ ಸಾಮಾನ್ಯವಾಗಿ ಸ್ತ್ರೀದೇವತೆಗಳಾಗಿವೆ. ಗ್ರಾಮದೇವತೆಗಳಂತೆ ಗ್ರಾಮದೇವರುಗಳೂ ಇರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ವೀರಭದ್ರ, ಭೈರವೇಶ್ವರ, ಆಂಜನೇಯ, ರಂಗನಾಥ ಮುಂತಾದವು.

ದ್ರಾವಿಡರದು ಮಾತೃಪ್ರಧಾನ ಕುಟುಂಬ ಎನ್ನುವುದಕ್ಕೆ ಸಾಕ್ಷಿಯಾಗಿ ಇಂದಿಗೂ ಕೇರಳದಲ್ಲಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿಯೂ ಈ ಪದ್ಧತಿಯಿದೆ. ಅಳಿಯ ಸಂತಾನವಾಗಿ ಹೆಂಡತಿಯ ಮನೆಯಲ್ಲಿ ಹೋಗಿ ಇರುವುದನ್ನು ಕಾಣುತ್ತೇವೆ. ಗಂಡು ದೇವತೆಗಳ ಪೂಜೆ ನಡೆಯುವುದು ಆರ್ಯ ಜನಾಂಗ, ದ್ರಾವಿಡರ ಜೊತೆ ರಕ್ತ ಸಂಬಂಧ ಮಾಡಿದ ನಂತರ ಕಂಡುಬರುತ್ತದೆ. ತುಮಕೂರು ಜಿಲ್ಲೆಯಲ್ಲಿ ಕಂಡುಬರುವ ದೇವತೆಗಳ ಹೆಸರುಗಳು ಭಿನ್ನ ಭಿನ್ನವಾಗಿದ್ದರೂ ಅವೆಲ್ಲ ಮಾತೃದೇವತಾ ಉಪಾಸನಾ ಮೂಲದಿಂದ ಹುಟ್ಟಿದ ಹೆಣ್ಣುದೇವತೆಗಳಾಗಿವೆ. ಅಲ್ಲದೆ ಒಬ್ಬೊಬ್ಬ ದೇವತೆಗೆ ಒಂದೊಂದು ವಿಶಿಷ್ಟ ಶಕ್ತಿಯನ್ನು ಕೊಡಲಾಗಿದೆ. ಗ್ರಾಮದೇವತೆಗಳು ಹೆಚ್ಚಾಗಿ ಸ್ಥಳೀಯ ಮೂಲದಿಂದ ಕೂಡಿವೆ. ಒಂದೊಂದು ಊರಿಗೆ ಒಬ್ಬೊಬ್ಬ ಗ್ರಾಮದೇವತೆ ಸಿಗುವಳು. ಆ ದೇವತೆಗಳಿಗೆ ಹಲವಾರು ಬಗೆಯ ಕಥೆಗಳಿವೆ, ಆಚಾರ-ವಿಚಾರಗಳಿವೆ. ಗ್ರಾಮದೇವತೆಗಳ ಪೂಜಕರು ಸಂಪೂರ್ಣ ಭಾವುಕರು. ತಮಗೆ ತಿಳಿದ ಹಾಗೆ ಬದುಕಿದ್ದಾರೆ.

ಗ್ರಾಮದೇವತೆಯ ಮೂಲಾರಾಧಕರು ದ್ರಾವಿಡರು ಶಿವೋಪಾಸಕರು. ಶಿವ ಸೃಷ್ಟಿಗೆ ಬೀಜವಾದರೆ ಅವನ ಹೆಂಡತಿಯಾದ ಪಾರ್ವತಿ ಭೂಮಿ-ತಾಯಿ. ಹುಟ್ಟಿಸುವ, ಕಾಯುವ, ಬೆಳೆಸುವ ಗ್ರಾಮದೇವತೆ ಪಾರ್ವತಿ ಅಂಶದವಳೆಂದು ಅವಳಿಗೂ ಅವತಾರಗಳ ಕಲ್ಪನೆ ತಂದದ್ದು ಆರ್‍ಯರ ಸಂಪರ್ಕ ಬಂದ ಬಳಿಕ.

### ಪುರಾಣ ಮಿಶ್ರಿತ ಚರಿತ್ರೆ

ಎನ್.ಚಿನ್ನಸ್ವಾಮಿ ಸೋಸಲೆ ಅವರು ಹೇಳುವ ಹಾಗೆ ಹಿಂದಿನ ಇತಿಹಾಸವು ಪುರಾಣ ಮಿಶ್ರಿತ ಚರಿತ್ರೆಯಾಗಿದೆ. ಗ್ರಾಮದೇವತೆಗಳನ್ನು ಒಂದಿಲ್ಲೊಂದು ಪೌರಾಣಿಕ ಸ್ತ್ರೀ ದೇವತೆಗಳಿಗೆ ಜೋಡಿಸಿ ಹೇಳುವುದನ್ನು ಗಮನಿಸಬಹುದು. ಪೌರಾಣಿಕ ಸ್ತ್ರೀ ದೇವತೆಗಳಿಗೆ ಮೂಲ ಆದಿಶಕ್ತಿ. ಈಕೆ ಕುಮಾರಿಯಾಗಿದ್ದಳು. ಈಕೆಯಿಂದಲೇ ಬ್ರಹ್ಮ, ವಿಷ್ಣು, ರುದ್ರರೆಂಬ ತ್ರಿಮೂರ್ತಿಗಳು ಹುಟ್ಟಿದರು. ಇವರಿಗೆ ಸೃಷ್ಟಿ, ಸ್ಥಿತಿ, ಲಯಕ್ಕೆ ಶಕ್ತಿ ತರಿಸಲು ಆದಿಶಕ್ತಿ ಬ್ರಹ್ಮನಿಗೆ ಸರಸ್ವತಿ, ವಿಷ್ಣುವಿಗೆ ಲಕ್ಷ್ಮಿ, ರುದ್ರನಿಗೆ ಪಾರ್ವತಿಯಾಗಿ ಹೆಂಡತಿಯಾದಳು. ಇಲ್ಲಿನ ಮೂಲ ಮಾತೃದೇವತೆಗಳ ಮೇಲೆ ಆರ್ಯರು ಯಾವ ರೀತಿಯ ಪುರಾಣಗಳನ್ನು ಹೇರಿದರು ಎಂಬುದಕ್ಕೆ ಇದು ಪ್ರಮುಖ ಉದಾಹರಣೆಯಾಗಿದೆ. ತುಮಕೂರು ಜಿಲ್ಲೆಯಲ್ಲಿ ಹೆಚ್ಚಿನ ಗ್ರಾಮದೇವತೆಗಳೆಲ್ಲ ಪಾರ್ವತಿ ಪರಂಪರೆಗೆ ಸೇರಿದ ದೇವತೆಗಳಾಗಿದ್ದಾರೆ.

ಪ್ರಕೃತಿಯ ವೈಚಿತ್ರ್ಯಗಳಿಂದ ತಮ್ಮನ್ನು ಉಳಿಸಿಕೊಳ್ಳಲು, ಕಾಡು ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು, ಭೂತಪ್ರೇತಗಳ ಭಯದಿಂದ ಸಾವು, ನೋವಿನ ಭೀತಿಯಿಂದ ಪಾರಾಗಲು ಶಕ್ತಿ ಸ್ವರೂಪಿಣಿಯಾದ ಪಾರ್ವತಿ ಪರಂಪರೆಯ ದೇವತೆಗಳು ಅಗತ್ಯವಾಗಿ ಕಂಡುಬಂದವು. ಅದಕ್ಕಾಗಿ ಅಂದಿನ ತಳಸಮುದಾಯಗಳು ಕರಿಯಮ್ಮ, ದೊಡ್ಡಮ್ಮ, ಕೆಂಪಮ್ಮ, ಮಾರಮ್ಮ, ಹುಲ್ಲೂರಮ್ಮ, ಕುಲಾಲ್ದಮ್ಮ, ಕಲ್ಲಾಳಮ್ಮ, ಹೊನ್ನಾದೇವಮ್ಮ, ಕೊಲ್ಲಾಪುರದಮ್ಮ, ಕಾಳಘಟ್ಟಮ್ಮ, ಚೌಡಮ್ಮ, ದುರ್ಗಮ್ಮ, ಎಲ್ಲಮ್ಮ, ಮಾತಂಗ್ಯಮ್ಮರನ್ನು ತಮ್ಮ ಗ್ರಾಮದೇವತೆಗಳನ್ನಾಗಿ ಮಾಡಿಕೊಂಡರು. ಲಕ್ಷ್ಮಿ ಪರಂಪರೆಯ ದೇವತೆಗಳು ಆರ್ಯರು ಭಾರತಕ್ಕೆ ಬಂದ ನಂತರ ಗ್ರಾಮದೇವತೆಗಳಾಗಿ ನೆಲೆಯೂರಿದ್ದನ್ನು ಕಾಣಬಹುದು. ಲಕ್ಷ್ಮಿಯನ್ನು ಗ್ರಾಮದೇವತೆಯನ್ನಾಗಿ ಮಾಡಿದ್ದು ದ್ರಾವಿಡರ ಅಂದರೆ ತಳಸಮುದಾಯಗಳ ಅಧಿಕಾರ ತಗ್ಗಿಸಿ, ತಮ್ಮೆಡೆಗೆ ಅವರನ್ನು ಸೆಳೆಯುವುದಕ್ಕಾಗಿ ಇರಬಹುದು. ಗ್ರಾಮಗಳ ಜನ ಕಷ್ಟವನ್ನು ನಿವಾರಣೆ ಮಾಡುವ ದೇವಿಗೆ ಮಂಗಳವಾರ, ಸಂಪತ್ತನ್ನು ಹೆಚ್ಚು ಮಾಡುವ ದೇವಿಗೆ ಶುಕ್ರವಾರ ಪೂಜಿಸುವುದನ್ನು ಇಂದಿಗೂ ಕಾಣಬಹುದಾಗಿದೆ. ಇಲ್ಲಿ ಮುಖ್ಯವಾಗಿ ಭಕ್ತಿಗೆ ಮೀಸಲಾಗಿ ಶಿವ ಮತ್ತವನ ಹೆಂಡತಿ, ಸಾಹಸ ಮತ್ತು ಸಂಪತ್ತಿಗೆ ಮೀಸಲಾಗಿ ವಿಷ್ಣು ಮತ್ತವನ ಹೆಂಡತಿ ಲಕ್ಷ್ಮಿಯನ್ನು ಗುರುತಿಸಬಹುದಾಗಿದೆ.

ಜ್ಞಾನ ಮತ್ತು ವಿದ್ಯೆಗಳಿಗೆ ಮೀಸಲಾಗಿ ಬ್ರಹ್ಮ ಮತ್ತವನ ಹೆಂಡತಿಯಾದ ಸರಸ್ವತಿಯನ್ನು ಗುರುತಿಸಬಹುದು. ವಿದ್ಯಾದೇವತೆಯಾದ ಸರಸ್ವತಿಯನ್ನು ಸಾಮಾನ್ಯರ ಹತ್ತಿರ ತಂದರೆ, ಅವರೆಲ್ಲ ಓದು ಬರೆದು ತಮ್ಮ ಹಕ್ಕುಗಳನ್ನು ಚಲಾಯಿಸಬಹುದೆಂಬ ಹೆದರಿಕೆಯಿಂದ ಆರ್ಯರು ಸರಸ್ವತಿಯನ್ನು ಗ್ರಾಮದೇವತೆಯನ್ನಾಗಿ ಮಾಡುವ ವಿಚಾರವನ್ನು ಮಾಡಿಲ್ಲದೆ ಇರಬಹುದು. ಲಕ್ಷ್ಮಿಯನ್ನು ಗ್ರಾಮದೇವತೆಯನ್ನಾಗಿ ಮಾಡಿದಂತೆ ಸರಸ್ವತಿಯನ್ನು ಗ್ರಾಮದೇವತೆಯಾಗಿ ಮಾಡಲಿಲ್ಲ. ತಳಸಮುದಾಯಗಳು ತಮ್ಮ ಮಕ್ಕಳಿಗೆ ಬರುವ ಯಾವುದೇ ರೋಗದ ಮುಂದೆ 'ಅಮ್ಮ' ಎಂಬ ವಿಶೇಷಣವನ್ನು ಸೇರಿಸುವ ಮೂಲಕ ಅಂಥ ದೇವತೆಗಳನ್ನು ಆಯಾಯ ರೋಗದ ಹೆಸರಿನಲ್ಲಿಯೇ ಕರೆಯುವ ಸಂಪ್ರದಾಯವಿದೆ. ಉದಾಹರಣೆಗೆ ಪ್ಲೇಗಿನಮ್ಮ, ಕಾಲರದಮ್ಮ, ಸಿಡುಬಿನಮ್ಮ, ದಡಾರದಮ್ಮ ಮುಂತಾದವು.

"ಗ್ರಾಮದೇವತೆಗಳು ಆಯಾಯ ಗ್ರಾಮವನ್ನೇ ನೆಲೆಯಾಗಿಸಿಕೊಂಡು ಅವುಗಳ ಮಹಿಮೆ ಆ ಗ್ರಾಮದ ಹೆಸರಲ್ಲಿಯೇ ಪ್ರಸಿದ್ಧವಾಗಿರುತ್ತವೆ."[೭] ಕೆಲವೊಮ್ಮೆ ತಾವು ಹುಟ್ಟಿದ ಸಮುದಾಯಕ್ಕಾಗಿ, ಕೊಟ್ಟ ಗ್ರಾಮಕ್ಕೆ ನೈಸರ್ಗಿಕವಾಗಿ ಉಂಟಾಗುವ ವಿಕೋಪಗಳ ಪರಿಹಾರಕ್ಕಾಗಿ ತಮ್ಮ ಪ್ರಾಣವನ್ನೇ ತ್ಯಾಗ ಮಾಡಿದ ಶ್ರೇಷ್ಠತೆಯಿಂದಾಗಿ ಆ ವ್ಯಕ್ತಿಗಳೂ ಕಾಲಾನಂತರ ಆರಾಧನೆಯ ಮೂರ್ತಿಗಳಾಗಿ ಗ್ರಾಮದೇವತೆಗಳಾಗಿವೆ. ಈ ಬಗೆಯ ನಂಬಿಕೆ ತಳಸಮುದಾಯಗಳ ಬದುಕಿನಲ್ಲಿ ಹಾಸುಹೊಕ್ಕಾಗಿರುವುದನ್ನು ಗಮನಿಸಬಹುದು.

ಎನ್.ಚಿನ್ನಸ್ವಾಮಿ ಸೋಸಲೆ ಅವರು ಹೇಳುವ ಹಾಗೆ ಗ್ರಾಮಗಳಲ್ಲಿರುವ ಐತಿಹ್ಯಗಳು ತಳಸಮುದಾಯಗಳ ತಳಸ್ಪರ್ಶಿಯ ಅಧ್ಯಯನಕ್ಕೆ ಪ್ರಮುಖ ಆಕರಗಳಾಗಿವೆ. ಅವುಗಳು ಮೇಲ್ನೋಟಕ್ಕೆ ವೈದಿಕೀಕರಣದಂತೆ ಕಂಡುಬಂದರೂ ಸೂಕ್ಷ್ಮವಾಗಿ ಗಮನಿಸಿದಾಗ ಆ ಸಮುದಾಯದ ಹಾಗೂ ಆ ಸ್ಥಳದ ಚರಿತ್ರೆಯನ್ನು ಹೇಳುವುದರಲ್ಲಿ ಸಂದೇಹವಿಲ್ಲ ಎನ್ನುವ ಹೇಳಿಕೆ ವಾಸ್ತವವಾಗಿದೆ. ಗ್ರಾಮದೇವತೆಗಳಲ್ಲಿ ಸೌಮ್ಯರೂಪದ ಗ್ರಾಮದೇವತೆಗಳು, ಉಗ್ರರೂಪದ ಗ್ರಾಮದೇವತೆಗಳು ಎಂದು ಎರಡು ವಿಧಗಳಿವೆ. ಸೌಮ್ಯರೂಪದ ಗ್ರಾಮದೇವತೆಗಳಿಗೆ ಸಸ್ಯ ಆಹಾರ ಪ್ರಿಯವಾದರೆ ಉಗ್ರರೂಪದ ಗ್ರಾಮದೇವತೆಗಳಿಗೆ ಮಾಂಸಾಹಾರ ಮುಖ್ಯವಾಗುತ್ತದೆ. ಆದುದರಿಂದಲೇ ಇಲ್ಲಿ ಪ್ರಾಣಿ ಬಲಿಗೆ ವಿಶೇಷ ಮಹತ್ವ ಕೊಡಲಾಗಿದೆ. ಕೆಲವೊಮ್ಮೆ ಒಂದು ಸಮುದಾಯ ವಾಸಿಸುವ ಹಿನ್ನೆಲೆಯಿಂದಲೂ ಆಹಾರ ಕ್ರಮ ನಿರ್ಧಾರವಾಗುವ ಸಾಧ್ಯತೆಗಳು ಇರಬಹುದು. ಸಾಮಾನ್ಯವಾಗಿ ತಳಸಮುದಾಯದವರೇ ಪೂಜಾರಿಗಳಾಗಿರುವ ಗ್ರಾಮದೇವತೆಗಳಲ್ಲಿ ಅಧಿಕ ಮಂದಿ ಆರಾಧಿಸುವವರು ತಳಸಮುದಾಯದವರು ಎಂಬುದು ಗಮನಾರ್ಹವಾದುದು.

### ೪.೧. ಪ್ರಕೃತಿಗೆ ಸಂಬಂಧಿಸಿದ ಆಚರಣೆಗಳು

ಶಿಷ್ಟ ಆಚರಣೆಗಳಿಗೆ ಸಂಬಂಧಿಸಿದಂತೆ ಕೆಲವು ಪ್ರಮುಖ ಆಚರಣೆಗಳನ್ನು ಕೆಳಕಂಡಂತೆ ಚರ್ಚಿಸಲಾಗಿದೆ.

#### ೪.೧.೧. ಹೊಲ ದೇವರು

ಹೊಲ ದೇವರು ಆಚರಣೆಯಲ್ಲಿ ಹೊಲದ ಪೈರು, ಕಾಳು ಬಲಿಯುವ ಕಾಲದಲ್ಲಿ ಹೊಲದ ಮಧ್ಯೆ ಅಥವಾ ಬದುವಿನಲ್ಲಿ ಪುಟ್ಟ ಚಪ್ಪರ ಹಾಕಿ, ಬೆನಕವನ್ನು ಇಟ್ಟು ದೀಪ ಹಚ್ಚುತ್ತಾರೆ. ರಕ್ತ ಮಿಶ್ರಿತ ಅನ್ನವನ್ನು ಮೊದಲು ದೇವರ ಗದ್ದಿಗೆಯ ಮುಂದೆ ಎಡೆ ಇಟ್ಟು, ನಂತರ ಹೊಲಕ್ಕೆ ಎರಚುತ್ತಾರೆ. ನಂತರ ಬಲಿ ನೀಡಿದ ಪ್ರಾಣಿಯನ್ನು ಮನೆಗೆ ತಂದು ಅಡುಗೆ ಮಾಡಿಕೊಂಡು ಊಟ ಮಾಡುತ್ತಾರೆ. ಇದರಲ್ಲಿ ನೆಂಟರು, ಆಪ್ತರು ಮಾತ್ರ ಭಾಗಿಯಾಗುತ್ತಾರೆ.[೨೫] ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ರೀತಿಯ ಆಚರಣೆ ಅಸ್ತಿತ್ವದಲ್ಲಿರುವುದನ್ನು ಗಮನಿಸಲಾಯಿತು. ಬೆಳೆಯು ಸಮೃದ್ಧಿಯಾಗಿ ಬರಲಿ ಎಂಬ ನಂಬಿಕೆ ತಳಸಮುದಾಯಗಳದ್ದಾಗಿದೆ.

#### ೪.೧.೨. ಹೊರಬೀಡು

ಹಳ್ಳಿಯಲ್ಲಿರುವ ಪ್ರತಿಯೊಬ್ಬರೂ ತಮ್ಮ ಹಳ್ಳಿಯಿಂದಾಚೆಗೆ ಹೋಗಿ, ಹೊಲ ಅಥವಾ ಮರದಡಿಯಲ್ಲಿ ಮೂರು ಬೆನಕಗಳನ್ನು ಇಟ್ಟು ಪೂಜೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಪ್ರಾಣಿ ಬಲಿ ನೀಡಿ, ಅಡುಗೆ ಮಾಡಿ ಸಂಬಂಧಿಕರ ಜೊತೆಗೂಡಿ ಊಟ ಮಾಡುತ್ತಾರೆ. ನಂತರ ಸಂಜೆ ಉಳಿದ ಅಡುಗೆಯೊಡನೆ ಮನೆಗೆ ಹಿಂತಿರುಗುತ್ತಾರೆ. ಈ ರೀತಿಯದೇ ಆದಂತಹ ಆಚರಣೆಯನ್ನು ಡಿ.ಡಿ.ಕೋಸಾಂಬಿ ಅವರು ಮಹಾರಾಷ್ಟ್ರದಲ್ಲಿ ಗುರುತಿಸಿದ್ದಾರೆ.

"ಮಹಾರಾಷ್ಟ್ರದಲ್ಲಿ ಇಂದಿಗೂ ಜನರ ನೆನಪಿನಲ್ಲಿ ಉಳಿದಿರುವ ಗಾಮ್‌ವಾಸಾಯಿ ಸಂಪ್ರದಾಯವು ಬಹುಶಃ ಜನ ಒಂದೆಡೆ ನೆಲೆಯೂರುವುದಕ್ಕಿಂತಲೂ ಹಿಂದಿನ ಕಾಲದ್ದು ಎಂದು ನನಗನ್ನಿಸುತ್ತದೆ. ಈ ಹಬ್ಬದ ಅತ್ಯಂತ ಮಹತ್ವದ ಅಂಶವೆಂದರೆ ಹಳ್ಳಿಯಲ್ಲಿ ಪ್ರತಿಯೊಬ್ಬರೂ ತಮ್ಮ ಹಳ್ಳಿಯಿಂದಾಚೆಗೆ ಹೋಗಿ ಏಳು ದಿನಗಳ ಕಾಲ ವಾಸ ಮಾಡಲೇಬೇಕಾಗಿತ್ತು. ಈ ಸಮಯದಲ್ಲಿ ಜನರು ಗದ್ದೆಯಲ್ಲಿ ಅಥವಾ ಮರದಡಿಯಲ್ಲಿ ವಾಸ ಮಾಡುತ್ತಿದ್ದರು. ಅಲ್ಲಿ ಮಾಡಬೇಕಾದ ಪೂಜೆಯನ್ನು ಮಾಡಿ, ಪ್ರಾಣಿಬಲಿ ನೀಡಿ, ಎಲ್ಲರಿಗೂ ಒಳ್ಳೆಯದಾಗುತ್ತದೆ, ಎಲ್ಲರೂ ಆರೋಗ್ಯವಂತರಾಗುತ್ತಾರೆ ಮತ್ತು ಇಳುವರಿ ಹೆಚ್ಚುತ್ತದೆ ಎಂಬ ಭರವಸೆ ಪಡೆದು ಹಳ್ಳಿಗೆ ಹಿಂದಿರುಗುತ್ತಿದ್ದರು."[೨೬] ಒಟ್ಟಾರೆಯಾಗಿ ಹೇಳುವುದಾದರೆ ಕೃಷಿ ಪೂರ್ವ ಅಲೆಮಾರಿಗಳು ಮಾಮೂಲಾಗಿ ಸಂಚರಿಸುತ್ತಿದ್ದ ದಾರಿಗಳು ಕೂಡುತ್ತಿದ್ದ ಸ್ಥಳ ಅವರ ಪೂಜಾತಾಣಗಳಾಗಿರಬಹುದು.

ಡಿ.ಡಿ.ಕೋಸಾಂಬಿ ಅವರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಆ ಸ್ಥಳಗಳಲ್ಲೇ ಅವರು ಸರಕುಗಳ ವಿನಿಮಯಕ್ಕಾಗಿ ಸೇರುತ್ತಿದ್ದರು. ಆ ಸಂದರ್ಭದಲ್ಲಿ ಯಾವಾಗಲೂ ಅವರ ಸಾಮಾಜಿಕ ವಿಧಿಯಾಚರಣೆಗಳು ನಡೆಯುತ್ತಿದ್ದವು ಎಂದು ಹೇಳಿದ್ದಾರೆ. ಅಂದರೆ ಈ ಆಚರಣೆಯು ಮಾನವನ ಅಲೆಮಾರಿ ಹಂತದ ಜೀವನವನ್ನು ನೆನಪಿಸುತ್ತದೆ. ಆದ್ದರಿಂದ ಈ ಕೂಡುದಾರಿಗಳು ಮಾತೃದೇವತಾ ಪಂಥಗಳ ಮೂಲ ತಾಣಗಳಾಗಿದ್ದವು ಎಂದು ತಿಳಿಯ ಬಹುದಾಗಿದೆ.

### ೪.೧.೩. ಮುನಿಯಪ್ಪನ ಆಚರಣೆ

ಮುನಿಯಪ್ಪನ ಆಚರಣೆಯೂ ತುಮಕೂರು ಜಿಲ್ಲೆಯಾದ್ಯಂತ ಪ್ರಚಲಿತ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಈ ಆಚರಣೆಯಲ್ಲಿ ಭಾಗವಹಿಸಿ, ಮಾಹಿತಿಯನ್ನು ಸಂಗ್ರಹಿಸಲಾಯಿತು. ಬೆಳೆ ಸಮೃದ್ಧಿಯಾಗಿ ಬಂದಂತಹ ಸಂದರ್ಭದಲ್ಲಿ ಈ ಆಚರಣೆ ಮಾಡುತ್ತಾರೆ.

ಮಾಂಸಹಾರಿಗಳಲ್ಲಿ ಪ್ರಾಣಿಬಲಿಯಾದರೆ, ಸಸ್ಯಹಾರಿಗಳಲ್ಲಿ ಸಿಹಿ ಊಟ ಬಳಕೆಯಲ್ಲಿದೆ. ಅಂದರೆ ಅವರು ಹಿಂದಿನಿಂದ ರೂಢಿಸಿಕೊಂಡಿರುವ ವ್ಯವಸ್ಥೆಯ ಮೇಲೆ ಊಟ ನಿರ್ಧಾರ ವಾಗುತ್ತದೆ. ಅಲ್ಲಿಯೇ ಊಟದ ಏರ್ಪಾಡು ನಡೆಯುತ್ತದೆ. ಯಾವುದೇ ಕಾರಣದಿಂದ ಅಲ್ಲಿ ಉಳಿದ ಅಡುಗೆಯನ್ನು ಗ್ರಾಮದೊಳಗೆ ತರುವುದಿಲ್ಲ. ಗ್ರಾಮಸ್ಥರಿಗೆ ಊಟ ಹಾಕುವುದಕ್ಕಿಂತ ಮೊದಲು ಹಾಗೂ ನಂತರ ಎರಡು ಬಾರಿ ಮುನಿಯಪ್ಪನನ್ನು ಪೂಜಿಸಲಾಗುವುದು. ಮಾಡಿದ ಅಡುಗೆಯನ್ನು ಮುನಿಯಪ್ಪನಿಗೆ ಎಡೆ ಮಾಡಲಾಗುತ್ತದೆ. ತಮ್ಮ ಹೊಲದಲ್ಲಿ ಇಳುವರಿ ಹೆಚ್ಚುವುದೆಂಬ ನಂಬಿಕೆಯೊಂದಿಗೆ, ಮನೆಗೆ ಶಾಂತಿ-ಸಮೃದ್ಧಿಯನ್ನು ದೇವರು ನೀಡುವನೆಂಬ ನಂಬಿಕೆಯಿಂದ ಈ ಆಚರಣೆ ಮಾಡುತ್ತಾರೆ. ಕೆಲವರು ಪೂರ್ವಿಕರು ಪಾಲಿಸಿಕೊಂಡು ಬಂದುದನ್ನು ಮುಂದುವರೆಸುತ್ತಿದ್ದಾರೆ.

### ೪.೧.೪. ಮಳೆರಾಯ

ತುಮಕೂರು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲೂ ಮಳೆಗೆ ಸಂಬಂಧಿಸಿದ ಆಚರಣೆ ರೂಢಿಯಲ್ಲಿರುವುದನ್ನು ಕಾಣಬಹುದು. ಮಳೆ ಬಾರದೆ ಹೋದ ಸಂದರ್ಭದಲ್ಲಿ ಸಾಮಾನ್ಯವಾಗಿ ಆಗಸ್ಟ್-ಸೆಪ್ಟಂಬರ್ ತಿಂಗಳುಗಳಲ್ಲಿ ಮಳೆರಾಯನ ಆಚರಣೆ ಮಾಡುತ್ತಾರೆ. ದೇವೇಂದ್ರನ ಆಕೃತಿಯನ್ನು ಜೇಡಿಮಣ್ಣಿನಲ್ಲಿ ಮಾಡಲಾಗುತ್ತದೆ. ಪ್ರತಿದಿನ ಸಂಜೆ ಸಮೀಪದ ಊರುಗಳಲ್ಲಿ ಮೆರವಣಿಗೆ ಮಾಡುತ್ತಾರೆ. ಈ ಸಂದರ್ಭದಲ್ಲಿ ಹಿಮ್ಮೇಳದ ಮಾದರಿಯಲ್ಲಿ ಹಾಡುತ್ತಾರೆ. ಹೀಗೆ ಹನ್ನೊಂದು ದಿನಗಳ ಕಾಲ ಸುತ್ತಲ ಊರುಗಳಲ್ಲಿ ಮಳೆರಾಯನ ಮೆರವಣಿಗೆ ಮಾಡುತ್ತಾರೆ. ಮೆರವಣಿಗೆ ಸಂದರ್ಭದಲ್ಲಿ ಗ್ರಾಮಸ್ಥರಿಂದ ದವಸಗಳನ್ನು ಸಂಗ್ರಹಿಸುತ್ತಾರೆ. ಕೊನೆಯ ದಿನ

ಊರ ಹೊರಗಿನ ಯಾವುದಾದರೂ ಮರದ ನೆರಳಲ್ಲಿ ವಿಶೇಷ ಅಡುಗೆಯನ್ನು ತಯಾರಿಸುತ್ತಾರೆ. ಬಂದ ಜನರಿಗೆಲ್ಲಾ ಊಟವನ್ನು ಹಾಕಲಾಗುತ್ತದೆ. "ನೆರೆಯ ಜಿಲ್ಲೆಗಳಾದ ಮಂಡ್ಯ, ಮೈಸೂರು, ಹಾಸನ, ಕೋಲಾರ ಹಾಗೂ ಚಿತ್ರದುರ್ಗ ಜಿಲ್ಲೆಗಳಲ್ಲಿ ಈ ಆಚರಣೆ ಅಸ್ತಿತ್ವದಲ್ಲಿದೆ."[೭] ಕೃಷಿ ಪೂರ್ವ ಮತ್ತು ಕೃಷಿ ಹಂತದ ಆಚರಣೆ ಆಗಿರಬಹುದು. ಮಾನವ ಒಂದು ಕಡೆ ನೆಲೆ ನಿಂತ ಮೇಲೆ ಕೃಷಿಯನ್ನು ಅವಲಂಬಿಸಿದ್ದರಿಂದ, ಮಳೆ ಅವಶ್ಯಕವಾಗಿದ್ದರಿಂದ ಈ ಆಚರಣೆ ಅಸ್ತಿತ್ವಕ್ಕೆ ಬಂದಿರಬಹುದು.

**೪.೧.೫. ಸಾವಿಗೆ ಸಂಬಂಧಪಟ್ಟ ಆಚರಣೆಗಳು**

ವ್ಯಕ್ತಿ ಸತ್ತಾಗ ಸಹಜವಾಗಿ ಆತನನ್ನು ಹೂಳುವುದು ಸಹಜ. ಬ್ರಾಹ್ಮಣ, ವೈಶ್ಯ ಜಾತಿಗಳಲ್ಲಿ ಮಾತ್ರ ಸುಡುವ ಸಂಪ್ರದಾಯವಿದೆ. ಇತರೆ ಸಮುದಾಯಗಳಲ್ಲಿ ಹೂಳುವ ಪದ್ಧತಿ ಇರುವುದನ್ನು ಕಾಣಬಹುದಾಗಿದೆ. ಕೆಲವೊಮ್ಮೆ ಈ ಹೂಳುವ ಪದ್ಧತಿಯ ವ್ಯಕ್ತಿಗಳಲ್ಲಿ ತೊನ್ನುರೋಗ ಇದ್ದರೆ ಅಂಥವರನ್ನು ಹೂತರೆ ಮಳೆ ಬರುವುದಿಲ್ಲ ಎಂಬ ನಂಬಿಕೆ ಇದೆ. ಒಂದು ವೇಳೆ ಅಂಥ ಶವವನ್ನು ಹೂತು, ಮಳೆ ಬಾರದೇ ಹೋದರೆ, 'ಇದರಿಂದಲೇ ಮಳೆ ಬಾರದಿರುವುದು' ಎಂದು ನಂಬುತ್ತಾರೆ. ಆಗ ಪರಸ್ಪರ ಮಾತಾಡಿಕೊಂಡು ಹೂತ ಶವವನ್ನು ಹೊರ ತೆಗೆದು ಸುಡುವ ಸಂಪ್ರದಾಯ ತುಮಕೂರು ಜಿಲ್ಲೆಯಲ್ಲಿದೆ.

ಹಾಗೆಯೇ "ಗರ್ಭಿಣಿ ಸತ್ತಾಗಲೂ ಆಕೆಯನ್ನು ಶವಸಂಸ್ಕಾರ ಮಾಡುವ ಸಂದರ್ಭದಲ್ಲಿ ಹೊಟ್ಟೆಯನ್ನು ಸೀಳುವ ಸಂಪ್ರದಾಯವಿದೆ. ಹೀಗೆ ಮಾಡದೆ ಹೋದಲ್ಲಿ ಮಳೆ ಬರದೆ ಬರಗಾಲ ಬರುವುದೆಂಬ ಪ್ರಬಲವಾದ ನಂಬಿಕೆ ಇದೆ."[೮] ಹೀಗೆ ಮಾನವರು ಅಲೆಮಾರಿ ಹಂತದಿಂದ ಪ್ರಸ್ತುತದವರೆಗೂ ಹಲವಾರು ಆಚರಣೆಗಳನ್ನು ಮಾಡುತ್ತಾ ಬಂದಿದ್ದಾರೆ. ಇದಕ್ಕೆ ಮುಖ್ಯ ಕಾರಣ ಶಾಂತಿ, ನೆಮ್ಮದಿ, ಆರೋಗ್ಯ ಮತ್ತು ಉತ್ತಮ ಇಳುವರಿಗಾಗಿ ಪ್ರಾರ್ಥನೆ. ವ್ಯಕ್ತಿಯೂ ಊರಿಂದ ಹೊರಗೆ ಸತ್ತರೆ, ಆ ವ್ಯಕ್ತಿಯ ಶವವನ್ನು ಊರ ಒಳಗೆ ತರುವುದಿಲ್ಲ. ಅಶುಭ ಎಂಬ ನಂಬಿಕೆ ಇದೆ. ಶಿಷ್ಟ ಆಚರಣೆಗಳಿಗೆ ಸಂಬಂಧಿಸಿದಂತೆ ತುಮಕೂರು ಜಿಲ್ಲೆಯಲ್ಲಿ ಇನ್ನೂ ಹಲವಾರು ಆಚರಣೆಗಳು ಅಸ್ತಿತ್ವದಲ್ಲಿವೆ. ಅವುಗಳೆಂದರೆ ಬಿತ್ತನೆ ಪೂಜೆ, ಹೊಲಕ್ಕೆ ಎಡೆ ಇಡುವುದು, ಕೊಯಲು ಮೊದಲು ಮಾಡುವ ಶಾಸ್ತ್ರ, ರಾಶಿ ಪೂಜೆ, ಬಸವನ ಹಬ್ಬ, ಕಾರಬ್ಬ ಹಾಗೂ ದೀವಣಿಗೆ ಹಬ್ಬ ಹೀಗೆ ಹಲವಾರು ಆಚರಣೆಗಳು ತಳಸಮುದಾಯಗಳ ಬದುಕಿನುದ್ದಕ್ಕೂ ಅಸ್ತಿತ್ವವನ್ನು ಕಂಡುಕೊಂಡಿವೆ. ಈ ಆಚರಣೆಗಳು ತಳಸಮುದಾಯಗಳ ಜೀವನದ ಒಂದು ಭಾಗ.

## ೪.೨. ಗ್ರಾಮದೇವತೆಗಳನ್ನು ಕುರಿತ ಆಚರಣೆ, ಸಂಪ್ರದಾಯಗಳು

ದೇವರು ದೇವತೆಗಳು ಜೀವಂತವಾಗಿರುವುದು ಆಚರಣೆ, ಸಂಪ್ರದಾಯಗಳಿಂದ. ಯಾವುದೇ ಸಮಾಜ ತನಗರಿವಿಲ್ಲದಂತೆ ಸಂಪ್ರದಾಯಗಳನ್ನು ಒಳಗೊಂಡಿರುತ್ತದೆ. ಜನಪದರು ತಾವು ನಂಬಿರುವ ದೇವತೆಗಳನ್ನು ತೃಪ್ತಿಪಡಿಸಲು ಮತ್ತು ಆ ಮೂಲಕ ಅವರು ನೆಮ್ಮದಿ ಕಾಣಲು ಆಚರಣೆಗಳನ್ನು ಶ್ರದ್ಧೆಯಿಂದ ನಿರ್ವಹಿಸುವುದನ್ನು ಗಮನಿಸಬಹುದು. ತಳಸಮುದಾಯಗಳ ಬದುಕಿನಲ್ಲಿ ದೇವತೆಗಳು ಪಾದಾರ್ಪಣೆ ಮಾಡಿದಾಗಲೇ ಆಚರಣೆ, ಸಂಪ್ರದಾಯಗಳು ಹುಟ್ಟಿಕೊಂಡವು. "ಸಂಪ್ರದಾಯ, ಆಚರಣೆಗಳು ವ್ಯಕ್ತಿಮೂಲದಿಂದ ಹುಟ್ಟಿದವು. ನೆಲಮೂಲ ಸಂಸ್ಕೃತಿಯನ್ನು ಪ್ರತಿಫಲಿಸುವ ಇವುಗಳ ಮೂಲವನ್ನು ಮಾತೃಪ್ರಧಾನ, ಪಿತೃಪ್ರಧಾನ ಸಂಸ್ಕೃತಿಯಿಂದ ತಿಳಿಯಬೇಕು."[೯] ಇತಿಹಾಸವನ್ನು ಗಮನಿಸಿದಾಗ ತಳಸಮುದಾಯಗಳು "ಭಯ, ಭಕ್ತಿಯಿಂದ ತೊಡಗುವಿಕೆಯಿಂದಲೂ ಈ ಆಚರಣೆಗಳನ್ನು ನಿರ್ವಹಿಸುತ್ತಾರೆ. ಇವರಿಗೆ ಒಂದೊಂದು ಆಚರಣೆಯೂ ಜೀವಂತ, ಅರ್ಥಪೂರ್ಣ"[೧೦] ಆಚರಣೆಗಳನ್ನು ಮಾಡದಿದ್ದರೆ ತೊಂದರೆಗಳು ಆರಂಭವಾಗುತ್ತವೆ ಎಂಬ ನಂಬಿಕೆ ಇರುವುದರಿಂದ ಆಚರಣೆಗಳನ್ನು ನಿಲ್ಲಿಸುವುದಿಲ್ಲ.

ಒಂದು ಸಮುದಾಯದ ಜೀವನ ವಿಧಾನದ ಬೇಡಿಕೆಯ ಅಂಗವಾಗಿ ಆಚರಣೆ ರೂಪುಗೊಳ್ಳುತ್ತದೆ. ಆದ್ದರಿಂದಾಗಿ ಅದು ಬಹುಕಾಲ ಅಸ್ತಿತ್ವದಲ್ಲಿರುತ್ತದೆ. ಆಚರಣೆಗಳು ವಿಶೇಷ ಸಂದರ್ಭದಲ್ಲಿ ಆಚರಿಸಲ್ಪಟ್ಟಾಗ ಹಬ್ಬಗಳೆನಿಸಿಕೊಳ್ಳುತ್ತವೆ. ಈ ಹಬ್ಬಗಳಿಗೆ ವ್ಯಾಪಾರ ವಾಣಿಜ್ಯದ ಸ್ಪರ್ಶವಾದಾಗ ಅವುಗಳಿಗೆ ಜಾತ್ರೆಯ ಸ್ವರೂಪ ಬರುತ್ತದೆ. "ಗ್ರಾಮದೇವತೆಗಳನ್ನು ಅಧ್ಯಯನ ಮಾಡಲು ಆಚರಣೆಗಳೇ ಆಧಾರ. ಆಚರಣೆ ಸಾಮೂಹಿಕವಾದರೆ, ಹರಕೆ ವೈಯಕ್ತಿಕವಾದದ್ದು. ಹರಕೆ ಬಹಳ ಸಲ ಆಚರಣೆ ರೂಪದಲ್ಲೇ ನಡೆಯುತ್ತದೆ."[೧೧] ಆಚರಣೆಗಳು ಹುಟ್ಟುವುದಕ್ಕೆ ಮೊದಲು ಮತ್ತು ನಂತರ ಪುರಾಣಗಳು ಹುಟ್ಟಿಕೊಂಡಿರುವುದನ್ನು ಗಮನಿಸಬಹುದು.

ತುಮಕೂರು ಜಿಲ್ಲೆಯಾದ್ಯಂತ ಗ್ರಾಮದೇವತೆಗಳ ಹಬ್ಬ, ಆಚರಣೆ ಮತ್ತು ಸಂಪ್ರದಾಯಗಳು ಕಂಡುಬರುತ್ತವೆ. ಆಚರಣೆ ಸಂಪ್ರದಾಯಗಳು ತಳಸಮುದಾಯಗಳ ಬದುಕಿನೊಂದಿಗೆ ಬೆರೆತು ಹೋಗಿವೆ. ಈ ಆಚರಣೆ, ಉತ್ಸವಗಳನ್ನು ಹೀಗೆ ವಿವರಿಸಬಹುದು.

### ಸಾರುವುದು

ಬಹುತೇಕ ಗ್ರಾಮದೇವತೆಗಳ ಹಬ್ಬ-ಜಾತ್ರೆ-ಉತ್ಸವಗಳು ಸುಗ್ಗಿ ಕಾಲದಲ್ಲಿ ಅಥವಾ ಸುಗ್ಗಿ ಕಳೆದ ಮೇಲೆ ಆರಂಭಗೊಳ್ಳುತ್ತವೆ. ಗ್ರಾಮದೇವತೆಯ ಹಬ್ಬಕ್ಕೆ ಗ್ರಾಮದ ಜನರನ್ನು ಮಾನಸಿಕವಾಗಿ ಮತ್ತು ಆರ್ಥಿಕವಾಗಿ ಸಿದ್ಧಗೊಳಿಸುವ ಆರಂಭದ ಆಚರಣೆ ಇದಾಗಿದೆ.

ಇದರಿಂದ ಮನೆಗೆ ಒಬ್ಬೊಬ್ಬರು ಒಂದು ಸಾಮೂಹಿಕ ಜವಾಬ್ದಾರಿಯನ್ನು ಹೊತ್ತು ಹಬ್ಬ ನಡೆಯುಲು ಸುಲಭವಾಗುವುದು. ಹೆಚ್ಚಿನ ಸಂದರ್ಭಗಳಲ್ಲಿ ಸಾರುವ ವ್ಯಕ್ತಿ ತಳಸಮುದಾಯದವನಾಗಿರುತ್ತಾನೆ. ಸಾರುವವನಿಗೆ ಪ್ರತಿಫಲವಾಗಿ ಹಣ ಅಥವಾ ಹೆಂಡವನ್ನು ಕೊಡುವ ಪದ್ಧತಿ ಇದೆ.

### ೪.೨.೧. ಮಾರಮ್ಮನನ್ನು ಕುರಿತ ಪುರಾಣ

ಆಸಾದಿಗಳು ಗ್ರಾಮದೇವತೆಯ ಹಬ್ಬದಲ್ಲಿ ಮಾರಮ್ಮನ ಕಥೆಯನ್ನು ವಿಸ್ತಾರವಾಗಿ ಹೇಳುತ್ತಾರೆ. ಮಾರಮ್ಮ ಗ್ರಾಮದೇವತೆಯಾದ ಬಗೆಗೆ ಜನಪದರಲ್ಲಿ ಕಥೆ ಇದೆ. "ಮಾದಿಗ ಜನಾಂಗಕ್ಕೆ ಸೇರಿದ ಹುಡುಗ ಬ್ರಾಹ್ಮಣ ಹುಡುಗಿಯನ್ನು ಮೋಹಿಸುತ್ತಾನೆ. ಜನಾಂಗಿಕ ತಾರತಮ್ಯತೆಯ ಹಿನ್ನೆಲೆಯಿಂದ ಈ ವಿವಾಹ ಸಾಧ್ಯವಿಲ್ಲ ಎಂದು ಅರಿವಾದಾಗ ಆತ ಬ್ರಾಹ್ಮಣನೆಂದು ಆ ಬ್ರಾಹ್ಮಣರ ಕನ್ಯೆಯನ್ನು ನಂಬಿಸಿ ವಿವಾಹವಾಗುತ್ತಾನೆ. ದಾಂಪತ್ಯ ಜೀವನ ಸುಖಕರವಾಗಿ ನಡೆಯುತ್ತದೆ. ಕೆಲವು ದಿನಗಳ ನಂತರ ಹುಡುಗನ ತಾಯಿ-ತಂದೆಯವರು ಮಗನ ಮನೆಗೆ ಬರುತ್ತಾರೆ. ಆದರೆ ಮಗ ತಾನು ಮಾದಿಗ ಜನಾಂಗಕ್ಕೆ ಸೇರಿದವನೆಂಬ ಸುಳಿವು ಹೆಂಡತಿಗೆ ತಿಳಿಯದಂತೆ ಎಚ್ಚರಿಕೆ ವಹಿಸುತ್ತಿರುವುದನ್ನು ತಂದೆ ತಾಯಿ ಅವರಿಗೆ ಹೇಳಿರುತ್ತಾನೆ. ಆದರೆ ಆ ವಯಸ್ಕ ತಂದೆ ತಾಯಿಯರು ಸೊಸೆಯ ಅಡುಗೆಯನ್ನು ಮೆಚ್ಚಿಕೊಂಡರು. ಆದರೆ ಮಲಗುವಾಗ ಗಂಡ ಹೆಂಡತಿಯರು ಆಪ್ತವಾಗಿ ಮಾತನ್ನಾಡಿಕೊಳ್ಳುವ ಸಂದರ್ಭದಲ್ಲಿ ಅಡುಗೆ ವಿಷಯ ಪ್ರಸ್ತಾಪ ಬರುತ್ತದೆ. ಆಗ 'ಎಷ್ಟೇ ಚೆನ್ನಾಗಿದ್ದರೂ ಒಂದು ಕರುವಿನ ಕಾಲು ಕಡಿದ ಹಾಗೆ ಆಗಲಿಲ್ಲ'. ಎಂಬ ಮಾತು ಮಾರಮ್ಮನ ಕಿವಿಗೆ ಬೀಳುತ್ತದೆ. ತನ್ನ ಗಂಡ ಮಾಡಿದ್ದು ಮೋಸವೆಂದು ಕೋಪಗೊಳ್ಳುತ್ತಾಳೆ. ಸತ್ತು ಮಾರಮ್ಮಳಾಗಿ ಹುಟ್ಟಿ ತನ್ನ ಗಂಡನನ್ನು ಕೋಣನ ರೂಪದಲ್ಲಿ ಬಲಿ ತೆಗೆದುಕೊಳ್ಳುವುದರ ಮೂಲಕ ಸೇಡು ತೀರಿಸಿಕೊಳ್ಳುತ್ತಾಳೆಂಬ ನಂಬಿಕೆ ಜನಪದರಲ್ಲಿದೆ."[೧೨] ಮಾರಿ ದೇವತೆಯ ಜಾತ್ರೆಯ ಸಂದರ್ಭದಲ್ಲಿ ಆಸಾದಿಗಳು ಮಾರಮ್ಮನನ್ನು ಕುರಿತ ಈ ಬಗೆಯ ಕತೆಯನ್ನು ಚೌಡಿಕೆ ಹಾಡಿನ ಮೂಲಕ ಹೇಳುತ್ತಾರೆ.

ಕರ್ನಾಟಕದಲ್ಲಿ ಪ್ರಚಲಿತವಾಗಿರುವ ಗ್ರಾಮದೇವತೆಯ ಕಥೆಯ ಮೂಲ ಆಶಯ ಒಂದೇ ಆದರೂ, ಅದರ ಒಳವಿವರಗಳಲ್ಲಿ ಸಣ್ಣಪುಟ್ಟ ವ್ಯತ್ಯಾಸಗಳಿರುವುದನ್ನು ಕಾಣುತ್ತೇವೆ. "ದೇವದಾನವರ ಘರ್ಷಣೆ ಆರ್ಯ, ದ್ರಾವಿಡರ ಸಂಘರ್ಷವಲ್ಲದೆ ಬೇರೆ ಅಲ್ಲ. ಆರ್ಯರು ಭಾರತಕ್ಕೆ ಆಗಮಿಸಿದಾಗ ಇಲ್ಲಿಯ ಸ್ಥಳೀಯ ಜನಾಂಗಗಳೊಡನೆ ನಡೆಸಿದ ಯುದ್ಧಗಳೇ ದೇವದಾನವರ ಕಥೆಗಳು. ರಾಕ್ಷಸ, ಅಸುರ, ದೈತ್ಯ ಇತ್ಯಾದಿ ಹೆಸರುಗಳು ಆರ್ಯರ ಆಗಮನದ ಸಂದರ್ಭದಲ್ಲಿ ಆಳುತ್ತಿದ್ದ ಜನಾಂಗಗಳ ಹೆಸರುಗಳೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ."[೧೩]

ಉತ್ತರ ಕರ್ನಾಟಕದಲ್ಲಿ ವಿಶೇಷವಾಗಿ ಕಂಡುಬರುವ ದ್ಯಾಮವ್ವ, ದುರ್ಗವ್ವನ ಕಥೆಗಳ ಆಶಯವೂ ಇದೇ ಆಗಿದೆ. ಮಾದಿಗರ ಜನಾಂಗಕ್ಕೆ ಸೇರಿದ ಹುಡುಗನು ಮಾರಮ್ಮನನ್ನು ವಿವಾಹವಾದ್ದರಿಂದ ವರ್ಣಸಂಕರದ ಪ್ರಯತ್ನವಾದ್ದರಿಂದ ಆರ್ಯರು ಆತನ ಸಂಹಾರವನ್ನು ಮಾಡಿರುವ ಸಾಧ್ಯತೆ ಇದೆ. ಗ್ರಾಮದೇವತೆ ಮಾರಮ್ಮನ ಪುರಾಣದಲ್ಲಿ ಕೋಣವು ಗ್ರಾಮದೇವತೆಯ ಏಳು ಜನ ಅಕ್ಕತಂಗಿಯರನ್ನು ವಿವಾಹವಾಗಬಯಸಿದ್ದು, ದೇವತೆಗಳನ್ನು ಹೆದರಿಸಿ ಹಲ್ಲೆ ಮಾಡಿದ್ದು, ದೇವತೆ ಕೋಣವನ್ನು ಬಲಿ ತೆಗೆದುಕೊಳ್ಳುವುದು ಶಿಷ್ಟ ಪುರಾಣದ ಪ್ರಭಾವವೇ ಆಗಿದೆ. ಪ್ರಾರಂಭದಲ್ಲಿ ಆತ ಮಾದಿಗರ ಹುಡುಗನೆಂದೂ ಸುಳ್ಳು ಹೇಳಿ ಬ್ರಾಹ್ಮಣ ಕನ್ಯೆಯನ್ನು ವಿವಾಹವಾದನೆಂದು ಹೇಳಿರುವುದು ನೇರವಾದ ಕಥೆಯಷ್ಟೇ ಅಲ್ಲ ಸಾಮಾಜಿಕ ಸಂದರ್ಭಗಳ ಒತ್ತಡವೂ ಇಲ್ಲಿ ಕ್ರಿಯಾಶೀಲವಾಗಿದೆ.

ತಳಸಮುದಾಯಗಳಲ್ಲಿ ಜಾತಿ ವ್ಯವಸ್ಥೆಯನ್ನು ಹರಡುವುದಕ್ಕೆ, ತಮ್ಮ ಮೇಲೆ ಹೇರಿದ ಅಮಾನವೀಯತೆಯನ್ನು ತಾವೇ ತಲೆಬಾಗಿ ಒಪ್ಪಿಕೊಳ್ಳುವುದಕ್ಕೆ, ಅದನ್ನು ತಮ್ಮೊಳಗೆ ಆಂತರಿಕ ಗೊಳಿಸುವುದಕ್ಕೆ ಮಾರಮ್ಮನ ಮೇಲೆ ಮತ್ತು ಇಂತಹ ಕೆಲ ತಳಸಮುದಾಯಗಳ ಮೇಲೆ ಹೇರಿದ ಪುರಾಣಗಳೇ ಈ ಕೆಲಸವನ್ನು ಬಲವಾಗಿ ಮಾಡಿವೆ. ಮಾರಮ್ಮನ ಬಗ್ಗೆ ಹರಡಲಾಗಿರುವ ಐತಿಹ್ಯ–ಪುರಾಣ ವರ್ಣಸಂಕರವನ್ನು ಕಟುವಾಗಿ ನಿಷೇದಿಸುವ ಮೂಲಕ ವರ್ಣವ್ಯವಸ್ಥೆಯನ್ನು ಆ ಬಗ್ಗೆ ಅರಿವೇ ಇಲ್ಲದ ಮುಗ್ಧ ಜನರ ತಲೆಯ ಮೇಲೆ ಹೇರಿದೆ. ಮಾರಮ್ಮನನ್ನು ಆಕೆಯ ನೆಚ್ಚಿನ ಆರಾಧಕರಾದ ತಳಸಮುದಾಯಗಳ ವಿರುದ್ಧದ ಅಸ್ತ್ರವನ್ನಾಗಿ ಬಹಳ ಪರಿಣಾಮಕಾರಿಯಾಗಿ ಬಳಸಲಾಗಿದೆ.

### ದಂಡಿನ ಮಾರಮ್ಮ

ಮಧುಗಿರಿ ದಂಡಿನ ಮಾರಮ್ಮನನ್ನು ಕುರಿತು ಐತಿಹ್ಯವಿದೆ. 'ಮಧುಗಿರಿಯಲ್ಲಿ ಸಿದ್ಧನಾಯಕನೆಂಬ ಪಾಳೆಯಗಾರನಿದ್ದನು. ಮಧುಗಿರಿ ಕೋಟೆಯನ್ನು ರಕ್ಷಿಸುವಲ್ಲಿ ಈತನ ಪಾತ್ರ ಪ್ರಮುಖವಾದುದು. ಮೈಸೂರಿನ ಅರಸರಿಗೆ ಈತನ ಸಾಮರ್ಥ್ಯದ ಬಗ್ಗೆ ಮಾಹಿತಿಗಳು ದೊರೆತಿದ್ದವು. "ಮೈಸೂರಿನಲ್ಲಿ ಯುದ್ಧ ಪ್ರಾರಂಭವಾದಾಗ ಮೈಸೂರಿನ ಅರಸರು ಫೌಜನ್ನು ತೆಗೆದುಕೊಂಡು ಬರುವಂತೆ ಸಿದ್ಧನಾಯಕನಿಗೆ ಆದೇಶ ಕಳುಸಿದರು. ಅರಸರ ಆದೇಶದಂತೆ ಸಿದ್ಧನಾಯಕನು ತನ್ನ ಫೌಜನ್ನು ತೆಗೆದುಕೊಂಡು ಅವರ ಸಹಾಯಕ್ಕೆ ಹೋದನು. ಈ ಯುದ್ಧದಲ್ಲಿ ಸಿದ್ಧನಾಯಕನು ಜಯ ಗಳಿಸುವಲ್ಲಿ ಶಿಲೆ ಕಾರಣವೆಂದು ತಿಳಿಯಲಾಗಿದೆ. ದಂಡಿನ ಜೊತೆಯಲ್ಲಿಯೇ ಈ ಶಿಲೆ ಬಂದದ್ದರಿಂದಾಗಿ, ಈ ಶಿಲೆಗೆ ದಂಡಿನ ಮಾರಮ್ಮ ಎಂದು ಕರೆಯಲಾಗಿದೆ."[೧೪] ಮಧುಗಿರಿ ದಂಡಿನ ಮಾರಮ್ಮನನ್ನು ಕುರಿತು ಪುರಾಣ ಕಥೆಯು ಇದೆ.

## ಆಸಾದಿ

ಮಧುಗಿರಿಯ ದಂಡಿನ ಮಾರಮ್ಮನ ಕತೆಯಲ್ಲಿ ಬ್ರಾಹ್ಮಣಿಯಾದ ಗೌರಮ್ಮ ಮನೆ ಮುಂದಿರುವ ತಗ್ಗಿನ ಜಾಗದಲ್ಲಿ ಕಟ್ಟಿಗೆಗಳನ್ನು ಹಾಕಿ ಕೆಂಡ ಮಾಡಿದಳು. ಅದರಲ್ಲಿ ಹಾರಿಕೊಳ್ಳುವ ಮುನ್ನ ಹೇಳುತ್ತಾಳೆ. "ಪಾಪಾತ್ಮ ನಮ್ಮ ಕುಲಗೋತ್ರನೆಲ್ಲಾ ಹಾಳು ಮಾಡಿ ನಮಗೆ ಅನ್ಯಾಯ ಮಾಡ್ದೆ, ಆದ್ರೆ ಕಲಿಯುಗದಲ್ಲಿ ನಾನು ಮಾರಿಯಾಗಿ ಮಧುಗಿರಿನಾಗೆ ಕಾಣಿಸ್ಕೊಂಡು ಸ್ಥಾಪನೆ ಆಗ್ತೀನಿ. ನೀನು ನನ್ನ ಮದ್ವೆ ಮಾಡ್ಕಂಡಿದ್ಕೆ ನಿನ್ನ ಬಲುಗಾಲು ಕುಯ್ದು ನಿನ್ನ ಬಾಯ್ಗೆ ಕಚ್ಚಿಸ್ತೀನಿ. ನಿನ್ನ ಕೊಬ್ಬು ಹೆಚ್ಚಾಗಿ ಬಂದು ನನ್ನ ಮದ್ವೆ ಆಗಿದ್ದಕ್ಕೆ ನಿನ್ನ ನೆಣ ತೆಗ್ದು ನಿನ್ನ ಮ್ಯಾಲೆ ದೀಪ ಹಚ್ಚಿಸ್ತೀನಿ. ನೀನು ಕೋಣನಾಗಿ ಹುಟ್ಟು" ಹೀಗೆ ಶಾಪವನ್ನು ನೀಡುತ್ತಾಳೆ ಮಾರಮ್ಮನಾದ ಗೌರಮ್ಮ. ಹಾಗೆಯೇ ತನ್ನ ಮಕ್ಕಳಿಗೆ ಹಿರೇ ಮಗ ದೃಷ್ಟಿಮರಿಯಾಗಿ, ಎರಡನೆಯವ ನಾನದ ಮರಿಯಾಗಿ ಮೂರನೆಯವ ಧೂಳು ಮರಿಯಾಗಿ, ನಾಲ್ಕನೆಯವ ಎಲ್ಲೆ ಮರಿಯಾಗಿ ನನಗೆ ಬಲಿಯಾಗಲಿ... ಕಿರೇ ಮಗ ಆಸಾಧಿಯಾಗಿ ಹುಟ್ಟಿ ನನ್ನ ಕಥೆನೆಲ್ಲ ಪ್ರಪಂಚಕ್ಕೆ ಹೇಳ್ತಾ ಹೋಗಲಿ."[೧೫] ಎಂದು ಶಾಪ ಕೊಟ್ಟಳು. ಮಾರಮ್ಮನ ಕಿರಿಯ ಮಗನೆ ಆಸಾದಿ.

ಎನ್.ಚಿನ್ನಸ್ವಾಮಿ ಸೋಸಲೆ ಅವರು ಹೇಳುವ ಹಾಗೆ ಆಸಾದಿಯ ಅರ್ಥ ಪ್ರಸಾದಿ, ಪೂಜಾರಿ ಹಾಗೂ ಈ ಪದ ಪರ್ಶಿಯನ್ ಮೂಲದಿಂದ ಬಂದಿರಬಹುದು, ಸಿರಾದಲ್ಲಿ ನವಾಬರು ಆಳ್ವಿಕೆ ಮಾಡುತ್ತಿದ್ದರಿಂದ ಈ ಪದ ಅಸ್ತಿತ್ವಕ್ಕೆ ಬಂದಿರಬಹುದೆಂದು ಅಭಿಪ್ರಾಯ ಪಡುತ್ತಾರೆ. "ಕರ್ನಾಟಕದ ಶಕ್ತಿ ದೇವತೆಗಳನ್ನು ಆರಾಧಿಸುವ ಅನೇಕ ಕಲಾವಿದ ಸಮುದಾಯಗಳಿವೆ. ಸವದತ್ತಿ, ಉಚ್ಚಂಗಿ, ದೇವರಗುಡ್ಡ, ಹುಲಿಗಿಗಳ ಜೋಗಮ್ಮ-ಜೋಗಪ್ಪಗಳು: ಬೀದರ ಭಾಗದಲ್ಲಿ ಭೂತೇರರು; ಉತ್ತರ ಕರ್ನಾಟಕದ ಗೊಂದಲಿಗರು; ಕರಾವಳಿಯ ಪಾಣೇರರು ಇತ್ಯಾದಿ. ಇವರಲ್ಲಿ ಮಧ್ಯ ಕರ್ನಾಟಕದ ಆಸಾದಿಗಳು ಒಬ್ಬರು."[೧೬] ಕರ್ನಾಟಕದ ಬೇರೆ ಬೇರೆ ಶಾಕ್ತರಾಧಕರಿಗೆ ಹೋಲಿಸಿದರೆ ಆಸಾದಿಗಳು ಎರಡು ಕಾರಣದಿಂದ ವಿಶಿಷ್ಟರಾಗಿ ಕಾಣುತ್ತಾರೆ.

ಮೊದಲನೆಯದಾಗಿ ತಳಸಮುದಾಯಗಳು ಮಾತ್ರ ಆಸಾದಿಗಳಾಗಿರುವುದು. ಕೃಷಿ ಕೇಂದ್ರಿತ ಜಾತಿ ಸಮಾಜದ ಸಾಂಪ್ರದಾಯಿಕ ಹಳ್ಳಿಗಳಲ್ಲಿ ತಳಸಮುದಾಯಗಳು ಒಂದು ಭಾಗವಾಗಿರುವುದನ್ನು ಗಮನಿಸಬಹುದು. ಗ್ರಾಮದೇವತೆಗಳಿಗೆ ಜಾತ್ರೆಯಲ್ಲಿ ಕೋಣ ಬಲಿ ಕೊಡುವುದು, ಅದರ ಮಾಂಸವನ್ನು ತಿನ್ನುವುದು, ಅದರ ಚರ್ಮ ಹದ ಮಾಡುವುದು, ಚರ್ಮದಿಂದ ಹಲಗೆ, ಬೇಸಾಯಕ್ಕೆ ಬೇಕಾದ ಮಿಣಿ, ಬಾರುಕೋಲು ಇತ್ಯಾದಿ ಕೃಷಿಗೆ ಸಂಬಂಧಿಸಿದ ಸಲಕರಣೆ ತಯಾರಿಸುವುದು ಇವರ ಪಾರಂಪರಿಕ ಉದ್ಯೋಗ. ಅವರ ಧಾರ್ಮಿಕ ಸೇವೆಗೂ ಆರ್ಥಿಕ

ಚಟುವಟಿಕೆಗೂ, ಆಹಾರ ಸಂಸ್ಕೃತಿಗೂ ನೇರ ಸಂಬಂಧಗಳಿರುವುದನ್ನು ಗಮನಿಸಬಹುದು. ರೂಢಿಯಲ್ಲಿದ್ದದ್ದು ಕಾಯ್ದೆಗಿಂತಲೂ ಹೆಚ್ಚು ಗಟ್ಟಿ ಇರುತ್ತದೆ ಎಂಬುದಕ್ಕೆ ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಒಂದು ಉದಾಹರಣೆಯನ್ನು ನೀಡಿದ್ದಾರೆ. "ಪ್ರತಿಯೊಂದು ಹಳ್ಳಿ ವರ್ಷ ಜಾತ್ರೆಯನ್ನು ಆಚರಿಸುತ್ತದೆ. ಹಳ್ಳಿಯ ಪರವಾಗಿ ಸಾಮಾನ್ಯವಾಗಿ ಕೋಣವನ್ನು ಖರೀದಿಸಲಾಗುತ್ತದೆ. ಅದನ್ನು ಊರೆಲ್ಲ ಸುತ್ತಾಡಿಸಿ ನಂತರ ಬಲಿ ಕೊಡಲಾಗುತ್ತದೆ. ಮತ್ತು ಅದರ ರಕ್ತವನ್ನು ಹಳ್ಳಿಯ ಸುತ್ತ ಸಿಂಪಡಿಸಲಾಗುವುದು. ಕೊನೆಗೆ ಅದರ ಮಾಂಸವನ್ನು ಹಳ್ಳಿಯ ತುಂಬ ಹಂಚಲಾಗುವುದು. ಪ್ರತಿಯೊಬ್ಬ ಬ್ರಾಹ್ಮಣ ಮಾಂಸ ಸೇವಿಸಲಿ, ಬಿಡಲಿ, ತನ್ನ ಪಾಲಿನ ಮಾಂಸವನ್ನು ತೆಗೆದುಕೊಳ್ಳಬೇಕಾಗುತ್ತದೆ. ಇದು ಯಾವ ಸ್ಮೃತಿಯಲ್ಲಿಯೂ ಬರೆದಿರುವುದಿಲ್ಲ."[೧೭] ಪ್ರತಿ ಗ್ರಾಮದೇವತೆಯ ಹಬ್ಬದಲ್ಲೂ ಈ ಆಚರಣೆ ರೂಢಿಯಲ್ಲಿದೆ.

ಆಸಾದಿಗಳು ದೇವರನ್ನು ತಾಯಿ ಎಂದು ಕರೆಯುವುದು ಮತ್ತು ಅವಳನ್ನು ದೈಹಿಕವಾಗಿ ಭೋಗಿಸುವ ಹಾಡುಗಳನ್ನು ಹಾಡುವುದು ಮೇಲ್ನೋಟಕ್ಕೆ ಮತ್ತು ನಮ್ಮ ಸಾಮಾಜಿಕ ರೂಢಿಯ ದೃಷ್ಟಿಕೋನಕ್ಕೆ ವಿಚಿತ್ರವೂ, ವೈರುಧ್ಯವೂ ಆದ ವಿದ್ಯಮಾನದಂತೆ ಕಾಣುತ್ತದೆ. ಆದರೆ ಶಾಕ್ತಪಂಥದ ತಾತ್ವಿಕ ಹಿನ್ನೆಲೆಯಿಂದ ನೋಡಿದರೆ ಇದು ವಿಚಿತ್ರವೂ, ವೈರುದ್ಯವೂ ಆದ ಸಂಗತಿಯಲ್ಲ. ಗುಡಿಗಳಲ್ಲಿ ಅದರಲ್ಲಿಯೂ ರಥಗಳಲ್ಲಿ ಲೈಂಗಿಕ ಮಿಲನದ ಶಿಲ್ಪಗಳು ಮೊದಲಿನಿಂದಲೂ ಇರುವುದನ್ನು ಗಮನಿಸಬಹುದು. ಶಂಕರಾಚಾರ್ಯರು ತಮ್ಮ 'ಸೌಂದರ್ಯ ಲಹರಿ'ಯಲ್ಲಿ ಹೆಣ್ಣಿನ ಅಂಗಾಂಗಗಳನ್ನು ವರ್ಣನೆ ಮಾಡುತ್ತಾರೆ. ಬನಶಂಕರಿ ಜಾತ್ರೆಯಲ್ಲಿ ಕಿಸುಗಾಲಗೊಂಬೆಯ ಆಚರಣೆಯೂ ಇದಕ್ಕೆ ಪೂರಕವಾಗಿದೆ. ಇಲ್ಲಿ ಗಂಡು ಹೆಣ್ಣಿನ ನಗ್ನಗೊಂಬೆಗಳನ್ನು ಪರಸ್ಪರ ಬಿಗಿದು ಕಟ್ಟಿ ತೇರಿನ ಕೆಳಗೆ ಮಾರುವರು. ಅದನ್ನು ಹೊಸದಾಗಿ ಮದುವೆಯಾದವರು, ಮದುವೆಯಾಗಿ ಮಕ್ಕಳಾಗದವರು ಒಯ್ದು ತೂಗುವರು. ಈ ರೀತಿಯಾಗಿ ಪ್ರಾಚೀನ ಜಾತ್ರೆಗಳು ಲೈಂಗಿಕ ಮಿಲನದ ಜಾಗಗಳು ಆಗಿದ್ದವು ಎಂದು ವಿದ್ವಾಂಸರು ಹೇಳುತ್ತಾರೆ.

ಎನ್.ಚಿನ್ನಸ್ವಾಮಿ ಸೋಸಲೆ ಅವರು 'ದಲಿತರ ಬದುಕು-ಮೆಲುಕು' ಕೃತಿಯಲ್ಲಿ ಪ್ರಾಚೀನ ಜಾತ್ರೆಗಳು ಲೈಂಗಿಕ ಮಿಲನದ ಜಾಗಗಳು ಕೂಡ ಆಗಿದ್ದವು ಎಂಬುದಕ್ಕೆ ಉದಾಹರಣೆಗಳ ಮೂಲಕ ಆಳವಾದ ವಿಶ್ಲೇಷಣೆ ಮಾಡಿದ್ದಾರೆ. ಅವರ ಪ್ರಕಾರ "ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನ ಬಿಳಿಗಿರಿರಂಗನ ಬೆಟ್ಟ, ಹಾವೇರಿ ಜಿಲ್ಲೆಯ ಬ್ಯಾಡಗಿ ತಾಲ್ಲೂಕಿನ ಕೆಂಗೊಂಡ, ಕಲಬುರಗಿ ಜಿಲ್ಲೆಯ ಭೂಪಾಲ, ತ್ಯಾಗನೂರು ಗ್ರಾಮಗಳನ್ನು ಹೆಸರಿಬಹುದು. ಚಿತ್ರದುರ್ಗದ ಒಂದು ಕಡೆ ಒಂದು ಬೆಟ್ಟ ಕ್ಷೇತ್ರದಲ್ಲಿ, ಮೈಸೂರು ಜಿಲ್ಲೆಯ ನಂಜನಗೂಡಿನಲ್ಲಿ, ತುಮಕೂರಿನ ದೇವರಾಯನ ಬೆಟ್ಟದಲ್ಲಿ ಹಾಗೂ ಮಂಡ್ಯ ಜಿಲ್ಲೆಯ ಮಳವಳ್ಳಿಯಲ್ಲಿನ ಒಂದು

ದೇವಾಲಯದ ಜಾತ್ರೆಯಲ್ಲಿ ಇಂತಹ ಆಚರಣೆಗಳು ಇವೆ ಎಂಬುದರ ಬಗ್ಗೆ ಮೌಖಿಕ ಮಾಹಿತಿಗಳಿವೆ."[೧೮] ಎಂದು ಉಲ್ಲೇಖ ಮಾಡಿದ್ದಾರೆ. ರಾಜ್ಯದ ಪ್ರಮುಖ ಪ್ರವಾಸಿ ತಾಣವಾದ ಬಿಳಿಗಿರಿರಂಗನ ಬೆಟ್ಟ ಪ್ರದೇಶದ ಬಿಳಿಗಿರಿ ರಂಗನಾಥನ ಜಾತ್ರೆಯಲ್ಲಿ ನಡೆದಿರುವ ಬಿದಿರುಮೆಳೆ ಉತ್ಸವವನ್ನು ಗಮನಿಸಬಹುದು. ಈ ಜಾತ್ರೆಯಲ್ಲಿ ಸೋಲಿಗರಲ್ಲಿ ಹಲವರು ಒಂದು ವಿಲಕ್ಷಣವಾದ ಸಂಪ್ರದಾಯವನ್ನು ಅನುಸರಿಸುತ್ತಾರೆ. ಇದಕ್ಕೆ ಬಿದಿರು ಮೆಳೆ ಉತ್ಸವ ಎಂದು ಹೆಸರು. "ತಮ್ಮ ಸಂಬಂಧಿ ಅಂದರೆ ಭಾವನಾದ ರಂಗನಾಥನ ಮನಸಂತೋಷಕ್ಕಾಗಿ ಈ ಉತ್ಸವ ಆಚರಿಸುತ್ತಿದ್ದೇವೆ"[೧೯] ಎಂಬುದು ಸೋಲಿಗರ ಬಲವಾದ ನಂಬಿಕೆ. ಈ ಹಿನ್ನೆಲೆಯಲ್ಲಿ ಆಸಾದಿ ಪದಗಳನ್ನು ಅರ್ಥ ಮಾಡಿಕೊಳ್ಳಬೇಕಾಗಿದೆ.

ಕರ್ನಾಟಕದ ಅಮ್ಮನ ಜಾತ್ರೆಗಳ ಆಚರಣೆ ಮತ್ತು ಸಾಹಿತ್ಯವನ್ನು ನೋಡುವ ದೃಷ್ಟಿಕೋನವನ್ನು ಸರಿಯಾಗಿ ಗಮನಿಸಬೇಕಿದೆ. ಶಾಕ್ತಪಂಥದ ಪಂಚತತ್ವ (ಮತ್ಸ್ಯ, ಮುದ್ರಾ, ಮೈಥುನ, ಮಾಂಸ, ಮದ್ಯ)ಗಳಲ್ಲಿ ಮೈಥುನವೂ ಒಂದು. ಈ ಮಿಥುನ ತತ್ವವನ್ನೇ ಆಸಾಧಿಗಳು ತಮ್ಮ 'ಬೈಯುವ' ಪದಗಳಲ್ಲಿ ವ್ಯಕ್ತಪಡಿಸುತ್ತಿರಬಹುದು ಎಂದು ಊಹಿಸಬಹುದು. ಈ ಊಹೆ ಕೂಡ ನಿಜವೇ ಆಗಿದ್ದರೆ ಬೈಗುಳ, ಅಶ್ಲೀಲ ಎಂಬುವವು ಜನಪದರ ಬದುಕನ್ನು ಬ್ರಾಹ್ಮಣೀಕರಣದ ಶಿಷ್ಟನೆಲೆಯಲ್ಲಿ ನೋಡುವ ಹೊರಗಿನ ಪರಿಭಾಷೆಗಳೇ ಹೊರತು, ಅವು ಆ ಪಂಥದ ಒಳಗಿನ ದೃಷ್ಟಿಕೋನವಲ್ಲ.

ಕೊಡಗಿನಲ್ಲಿರುವ ತಳಸಮುದಾಯದ ಒಂದು ವರ್ಗ 'ಬೈಗುಳ ಹಬ್ಬ' ಆಚರಣೆಯಲ್ಲಿ ತೊಡಗಿರುವುದು ಇಂದಿಗೂ ಕಂಡುಬರುತ್ತದೆ. ಪ್ರತಿವರ್ಷ ಮೇ ತಿಂಗಳಲ್ಲಿ ಕೊಡಗಿನ ದೇವರಪುರ, ಪೊನ್ನಂಪೇಟೆ, ನಿಟ್ಟೂರು, ಕರ್ಮಾದ, ಪಾಲಿಬೆಟ್ಟ, ನಾಗರಹೊಳ್ಳೆ, ರಾಜಾಪುರ ಸಮೀಪದ ಮಾಕಲ್ಲು ಅರಣ್ಯ, ತಿತಿಮತಿ ಮುಂತಾದ ಕಡೆಗಳಲ್ಲಿ ಈ ಆಚರಣೆಯಿದೆ. ಲೈಂಗಿಕ ಕ್ರಿಯೆಗಳಿಗೆ ಸಂಬಂಧಿಸಿದ ಬೈಗುಳಗಳು ಇಲ್ಲಿ ಧಾರಾಳವಾಗಿ ಬಳಕೆಯಾಗುತ್ತವೆ. ದೇವರುಗಳಿಗೂ ಕೂಡ ತಮ್ಮ ಬೈಗುಳಗಳು ಧಾರಾಳವಾಗಿ ಬಳಕೆಯಾಗುತ್ತವೆ. ದೇವರುಗಳನ್ನು ಕೂಡ ತಮ್ಮ ಬೈಗುಳಗಳಿಗೆ ಗುರಿಮಾಡಿ ಆನಂದಿಸುವ ಈ ಜನರಿಗೆ ಈ ಬಗ್ಗೆ ಪಾಪದ ಭೀತಿಯಿಲ್ಲ."[೨೦] ದಕ್ಷಿಣ ಕೊಡಗಿನ ಗೋಣಿಕೊಪ್ಪ ಸುತ್ತಲಿನ ಹಿಂದುಳಿದ ವರ್ಗಗಳ ಹಾಗೂ ಬುಡಕಟ್ಟು ಜನರು ಪಾಲ್ಗೊಳ್ಳುವ ಈ ಹಬ್ಬ ಬೈಗುಳ ಹಬ್ಬ ಎಂದೇ ಹೆಸರಾಗಿದೆ. ದೇವರನ್ನು ಬಯ್ಯುವುದು ಹಬ್ಬದ ವಿಶೇಷ. "ಈ ಹಬ್ಬಕ್ಕೆ ಸಾಂಪ್ರದಾಯಿಕ ಮುಖವೂ ಇದೆ. ದೇವರಪುರದ ಸಣ್ಣುವಂಡ ಕುಟುಂಬಸ್ಥರ ಮೂಲ ಮನೆಯಿಂದ ಹಬ್ಬದ ದಿನ ಭದ್ರಕಾಳಿಯ ಉತ್ಸವ ಮೂರ್ತಿಯನ್ನು ಅಯ್ಯಪ್ಪ ದೇವಾಲಯಕ್ಕೆ ತಂದು ಪೂಜಿಸುತ್ತಾರೆ. ಆ ದಿನ ದೇವಸ್ಥಾನದಲ್ಲಿ ಸಣ್ಣುವಂಡ ಕುಟುಂಬದವರ

ಪರವಾಗಿ ಪೂಜೆ ಸಲ್ಲಿಸುವ ಪದ್ಧತಿ ಇದೆ. ಇಡೀ ದಿನ ಎದುರಿಗೆ ಸಿಕ್ಕವರಲ್ಲದೆ ದೇವರನ್ನೂ ಬಿಡದೆ ಬೈಯ್ಯುತ್ತಾ ನಲಿದು ಸಂಭ್ರಮಿಸುತ್ತಾರೆ."[೨೧] ಮಾರಮ್ಮ ದೇವತೆ ಅಲ್ಲದೆ ಕಾಳಿ ದೇವತೆಗೆ ಸಂಬಂಧಿಸಿದಂತೆ ಬೈಗುಳ ಹಬ್ಬ ಅಸ್ತಿತ್ವದಲ್ಲಿರುವುದನ್ನು ಕಾಣಬಹುದಾಗಿದೆ.

ಆಸಾದಿ ಪದಗಳು ವಾಸ್ತವದಲ್ಲಿ ಬೈಗುಳಗಳಲ್ಲ, ಅಶ್ಲೀಲವೂ ಅಲ್ಲ, ಬದಲಿಗೆ ಶಾಕ್ತ ಆಚರಣೆಯ ಪಳೆಯುಳಿಕೆಗಳು. ಮಾರಮ್ಮ ಜಾತ್ರೆಯಲ್ಲಿ ಶಾಕ್ತಪಂಥದ ಪಂಚತತ್ವಗಳಲ್ಲಿನ ಮಾಂಸ ಮತ್ತು ಮದ್ಯ ಸೇವನೆ ಯಥೇಚ್ಚವಾಗಿದೆ. ಜಾತ್ರೆಗೆ ಬರುವ ನೂರಕ್ಕೆ ತೊಂಭತ್ತರಷ್ಟು ಭಕ್ತರು ಮಾಂಸಾಹಾರಿಗಳು. ಅವರು ಕುರಿ, ಕೋಳಿ ಕಡಿದು ಅಡುಗೆ ಮಾಡುತ್ತಾರೆ. ತೇರಿಗೆ ಕೋಳಿ ತೂರುವ ಆಚರಣೆ ಮಾಡುತ್ತಾರೆ. ಎಡೆಯ ಪೂಜೆಯಲ್ಲಿ ಮದ್ಯವನ್ನು ಇಡುತ್ತಾರೆ. ಆಸಾದಿಗಳು ಮಾಡುವ ಬಾನದ ಆಚರಣೆಯಲ್ಲಿ ಮಡಕೆಯ ತುಂಬ ತೆಂಗಿನ ಅಥವಾ ಈಚಲ ಹೆಂಡವನ್ನು ತುಂಬಿ ಘಟೆಯನ್ನು ಹೊರುತ್ತಾರೆ. ಮರದಿಂದ ಬರುವ ದ್ರವವು ಹಾಲಿನ ಸಂಕೇತವಾಗಿದ್ದು ಅದನ್ನು ಕುಡಿಯುವುದು ಶಾಕ್ತರ ಮುಖ್ಯ ಆಚರಣೆ. ಮಾರಮ್ಮನ ಜಾತ್ರೆಗಳಲ್ಲಿ ತಳಸಮುದಾಯಗಳೇ ಮುಖ್ಯಸ್ಥಾನದಲ್ಲಿದ್ದ ಶಾಕ್ತಪಂಥೀಯ ಆಚರಣೆಗಳ ಗ್ರಾಮೀಣ ರೂಪಾಂತರದ ಅಭಿನಯವಾಗಿದೆ. ಹೆಣ್ಣಿನ ರಕ್ತವನ್ನು ಅಥವಾ ಕಡಿದ ಕೋಣನ ರಕ್ತವನ್ನು ಬಿತ್ತನೆಯ ಕಾಳಿನ ಜತೆ ಬೆರೆಸಿ ಹೊಲಕ್ಕೆ ಚೆಲ್ಲುವುದು, ಗ್ರಾಮದ ಸುತ್ತ ಚೆಲ್ಲುವುದು ಸಮೃದ್ಧಿಗಾಗಿ ಹಾಗೂ ಫಲವಂತಿಕೆಗಾಗಿ. ಗದ್ದೆ, ಹೊಲಗಳಲ್ಲಿ ಸಂಭೋಗ ಮಾಡುವುದು ಇವೆಲ್ಲ ಆದಿಮ ಆಚರಣೆಗಳಾಗಿವೆ.

ಜಾತ್ರೆಯಲ್ಲಿ ಬಳಕೆಯಾಗುವ ಬಾಳೆಕಂಬ, ಮಾವಿನ ಹೂವು, ಹೊಂಬಾಳೆ, ಕಳಸ, ಈಚಲ ಹೆಂಡ ತುಂಬಿದ ಘಟೆ, ಎಳನೀರು, ಎಳೆಯ ಮಕ್ಕಳನ್ನು ಕರೆದುಕೊಂಡು ಜಾತ್ರೆಗೆ ಬರುವ ವರ್ಣನೆಯ ಹಾಡುಗಳು, ದುಡಿಯುವ ಜನರ ಭಾಗವಹಿಸುವಿಕೆ, ಕೋಣಬಲಿ ಇವೆಲ್ಲವೂ ತಳಸಮುದಾಯಗಳಿಗೂ ಸ್ತ್ರೀ ದೇವತೆಗಳಿಗೂ ಇರುವ ಆಂತರಿಕ ಸಂಬಂಧ ಸೂಚಿಸುವ ಸಂಗತಿಗಳಾಗಿವೆ. ಎಲ್ಲ ಶಕ್ತಿ ದೇವತೆಗಳ ಮಿತ್ತುಗಳಲ್ಲಿ ಆಕೆ ಪುರುಷನೊಬ್ಬನ ಸಂಹಾರ ಮಾಡಿದ ಕಥೆಯಿದೆ. ಕರ್ನಾಟಕದ ಪೌರಾಣಿಕ ಮಿತ್ತುಗಳಲ್ಲಿ ಆಕೆ ಸುಳ್ಳು ಹೇಳಿದ ಪುರುಷ ಗಂಡನನ್ನು ಕೊಲ್ಲುವಳು. ಸವದತ್ತಿಯ ಎಲ್ಲಮ್ಮ ಕಾರ್ತವೀರ್ಯಾರ್ಜುನನನ್ನು ಕೊಲ್ಲುವಳು. ಮಾರಮ್ಮ ಕೋಣನನ್ನು (ಗಂಡ) ಕೊಂದವಳು. ಆಸಾದಿಗಳು ತಾವು ಬಾರಿಸುವ ಹಲಗೆಯು ಕೋಣದ ಮೈ ಚರ್ಮದಿಂದ ಮಾಡಿದ್ದು, ಅದನ್ನು ಬಾರಿಸುವುದು ಎಂದರೆ ಕೋಣನ ಸಂಹಾರ ಮಾಡಿ ವಿಜಯಯಾತ್ರೆ ಮಾಡಿದಂತೆ ಎಂದು ಹೇಳುತ್ತಾರೆ. ದೇಹದ ಅಂಗಾಂಗಳಿಂದ ಹಾಡು, ನಾದ ನುಡಿಸುವ ಸಂಗೀತದ ಉಪಕರಣವನ್ನು ತಯಾರಿಸಿ ನುಡಿಸುವುದು

ದಿಗ್ವಿಜಯದ ಸಂಕೇತ. ಇದು ಹೊರಡಿಸುವ ಅರ್ಥಗಳು ಒಂದು ನೆಲೆಯವು. ಆಸಾದಿಗಳು ಪುರುಷವಾದಿ ನಿಲುವುಗಳಲ್ಲಿರುವಂತೆ ಹೆಣ್ಣನ್ನು ದೇಹಕೇಂದ್ರಿತವಾಗಿ ನೋಡುವ ಮತ್ತು ಸಂಭ್ರಮಿಸುವ ವರ್ಣನೆಯ ಪದಗಳನ್ನು ಹಾಡುವುದು ಇನ್ನೊಂದು ನೆಲೆಯವು. ಇದನ್ನು ದೇಹಕೇಂದ್ರಿತವಾಗಿ ನೋಡುವ ದೃಷ್ಟಿಕೋನವೆನ್ನಬೇಕೇ ಅಥವಾ ಅವರ ಸ್ತ್ರೀಗಿರುವ ಸೃಷ್ಟಿ ಶೀಲತೆಯನ್ನು ಕುರಿತ ಹೆಗ್ಗಳಿಕೆ ಎನ್ನಬೇಕೇ ಎಂಬುದನ್ನು ಅವಲೋಕಿಸಬೇಕಾಗಿದೆ. ಈ ಎರಡೂ ನೆಲೆಗಳು ಆಳದಲ್ಲಿ ಎರಡು ದೃಷ್ಟಿಕೋನಗಳ ಪ್ರತಿನಿಧಿಗಳಾಗಿದ್ದು ಒಂದೇ ಜಾತ್ರೆಯಲ್ಲಿದೆ. ಹಲವಾರು ದೃಷ್ಟಿಕೋನವುಳ್ಳ ಕಥನಗಳು, ಆಚರಣೆಗಳು ಕಾಲಾಂತರದಲ್ಲಿ ಒಂದಾಗಿರುವುದರಿಂದ ಇವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟವಾಗುತ್ತಿದೆ.

**ಗಾವು ಸಿಗಿಯುವುದು**

ಗ್ರಾಮದೇವತೆಯ ಹಬ್ಬದಲ್ಲಿ ಗಾವು ಸಿಗಿಯುವುದು ಒಂದು ಭಯಂಕರವಾದ ಆಚರಣೆ. 'ಒಂದು ಕಪ್ಪು ಬಣ್ಣದ ಕುರಿಮರಿಯನ್ನು ಮನುಷ್ಯನೊಬ್ಬ ಹಲ್ಲುಗಳಿಂದ ಸಿಗಿದು ಅದರ ರಕ್ತವನ್ನು ಕುಡಿದು ಮಾಂಸ ತಿನ್ನುವುದು ಈ ಆಚರಣೆಯ ಮುಖ್ಯ ಕ್ರಿಯೆ. ತುಮಕೂರು ಜಿಲ್ಲೆಯಲ್ಲಿ ಮಧುಗಿರಿ ದಂಡಿನ ಮಾರಮ್ಮ, ತುರುವೇಕೆರೆ ತಾಲ್ಲೂಕು ಹುಲಿಕಲ್ ಗ್ರಾಮದೇವತೆ ಕೆಂಪಮ್ಮ, ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ಶೆಟ್ಟಿಕೆರೆಯ ಕೆಂಪಮ್ಮ, ಹುಳಿಯಾರು ದುರ್ಗಮ್ಮ, ಗುನ್ನಾಗರದ ಮಲ್ಲಮ್ಮ (ಕುಣಿಗಲ್ ತಾಲ್ಲೂಕು), ಗುಬ್ಬಿಯ ಕಾಳಘಟ್ಟಮ್ಮ, ಚೇಳೂರು ಹೋಬಳಿಯ ಬಿದರಿಗೆ ಸಮೀಪದಲ್ಲಿರುವ ಮಾದಾಪುರದ ಕಾವಲಿನಲ್ಲಿರುವ ಮಣ್ಣೆಮ್ಮ ಮದಾಪುರದಮ್ಮ ಜೋಡಿ ದೇವತೆಗಳು"[೨೨] ಮೊದಲಾದ ಗ್ರಾಮದೇವತೆಗಳ ಜಾತ್ರೆಯಲ್ಲಿ ಗಾವು ಸಿಗಿಯುವ ಆಚರಣೆ ರೂಢಿಯಲ್ಲಿದೆ. ಗಾವು ಸಿಗಿಯುವ ವ್ಯಕ್ತಿ ಸಾಮಾನ್ಯವಾಗಿ ನಾಯಕ ಜಾತಿಯವನು. ಇದು ಆತನ ವಂಶಪಾರಂಪರ್ಯವಾದ ಹಕ್ಕು. ಐವತ್ತು ವರ್ಷ ಆಗುವ ತನಕ ಇವರು ಗಾವು ಸಿಗಿಯುವ ಕ್ರಿಯೆಯಲ್ಲಿ ಭಾಗವಹಿಸುವರು.

"ಗಾವು ಸಿಗಿಯುವುದಕ್ಕೆ ಮೂರು ದಿನ ಮುಂಚಿತವಾಗಿ ಗಾವು ಸಿಗಿಯುವ ವ್ಯಕ್ತಿ ಉಪವಾಸವಿದ್ದು, ದಿನಕ್ಕೆ ಮೂರು ಏಲಕ್ಕಿಯನ್ನು ತಿನ್ನಬೇಕೆಂಬ ನಿಯಮವಿದೆ. ಆ ಸಂದರ್ಭದಲ್ಲಿ ಮೈಲಿಗೆಯಾಗುವಂತಿಲ್ಲ. ಈ ಮೂರು ದಿನದ ಅವಧಿಯಲ್ಲಿ ಹೆಂಡತಿಯಿಂದ ದೂರವಿದ್ದು, ಮಡಿಯಿಂದ ದೇವರಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಾನೆ. ಮನಃಶಾಸ್ತ್ರೀಯ ದೃಷ್ಟಿಯಿಂದ ನೋಡಿದಾಗ ವ್ಯಕ್ತಿ ಉಪವಾಸವಿದ್ದಾಗ ಅವನಿಗೆ ರೋಷ, ಆವೇಶ ಹೆಚ್ಚಾಗುತ್ತದೆ. ಈ ಹಿನ್ನೆಲೆಯಲ್ಲಿ ಗಾವು ಸಿಗಿಯುವ ವ್ಯಕ್ತಿಯ ಶಕ್ತಿ ಸಂಚಯನಕ್ಕಾಗಿಯೇ ಉಪವಾಸವಿರುವ ನಿಯಮವನ್ನು ಅನುಸರಿಸಿಕೊಂಡು ಬಂದಿರಬೇಕು."[೨೩] ಗಾವು ಸಿಗಿಯುವ ವ್ಯಕ್ತಿ

ಉಪವಾಸವಿರುವುದಕ್ಕೆ ಮೇಲಿನ ಕಾರಣವನ್ನು ಒಪ್ಪಬಹುದು. "ಉಗ್ರ ದೇವತೆಗಳ ಆರಾಧನೆಯಲ್ಲಿ ಆವೇಶಗೊಂಡ ಪೂಜಾರಿಯು ಕುರಿ ಅಥವಾ ಮೇಕೆ ಮರಿಯ ಕುತ್ತಿಗೆಯನ್ನು ಕಚ್ಚಿ ರಕ್ತ ಹೀರುವುದಕ್ಕೆ 'ಗಾವು' ಎನ್ನುತ್ತಾರೆ. ಇಡೀ ಆಚರಣೆಗೆ ಗಾವು ಕಟ್ಟುವುದು, ಗಾವು ಸಿಗಿಯುವುದು ಎಂದು ಕರೆಯಲಾಗುತ್ತದೆ."[೨೪] ಗಾವು ಸಿಗಿಯುವ ದಿನ ಬಲಿ ಕೊಡಬೇಕಾದ ಮೇಕೆ ಮರಿಯ ಕೊರಳಿಗೆ ಬೇವಿನ ಸೊಪ್ಪನ್ನು ಕಟ್ಟಿ ಗ್ರಾಮದೇವತೆಯ ಮುಂದೆ ಎಳೆದು ತರುತ್ತಾರೆ. ಈ ಮರಿಯನ್ನು ಊರಿನಲ್ಲಿ ಮೇಕೆ ಹಿಂಡು ಇರುವವರು ವರ್ಷಕ್ಕೊಬ್ಬರಂತೆ ಸರದಿ ಮೇಲೆ ಕೊಡಬೇಕೆಂಬ ನಿಯಮವಿದೆ.

ಈ ಆಚರಣೆ ಆದಿಮಾನವನ ಕಾಡು ಜೀವನವನ್ನು ನೆನಪಿಸುತ್ತದೆ. ಹಸಿಮಾಂಸ ತಿನ್ನುತ್ತಿದ್ದ ಆದಿಮಾನವನು ಅದನ್ನೇ ತನ್ನ ದೇವರಿಗೆ ಅರ್ಪಿಸುತ್ತಿದ್ದುದು ಇಂದು ಹಸಿ ಆಚರಣೆಯಾಗಿ ಉಳಿದುಕೊಂಡು ಬಂದಿದೆ. "ಗಾವು ಸಿಗಿಯುವ ಆಚರಣೆ ಕಾಡುಗೊಲ್ಲರಲ್ಲಿ ಇದೆ."[೨೫] "ಕಣಿವೇ ಮಾರಮ್ಮನ ಹಬ್ಬದಲ್ಲಿ ಗಾವು ಸಿಗಿಯುವವನು ನಾಯಕ ಜಾತಿಯ ವ್ಯಕ್ತಿ."[೨೬] ಎಂದು ಸಿದ್ದಲಿಂಗಯ್ಯ ಅವರು ಗ್ರಾಮದೇವತೆಗಳು ಕೃತಿಯಲ್ಲಿ ಉಲ್ಲೇಖ ಮಾಡಿದ್ದಾರೆ. "ತುಮಕೂರು ಜಿಲ್ಲೆಯಲ್ಲಿ ಊರ ಮಾರಮ್ಮನ ಜಾತ್ರೆಯಲ್ಲಿ ಗಾವು ಸಿಗಿಯುವ ಆಚರಣೆ ಅಸ್ತಿತ್ವದಲ್ಲಿದೆ."[೨೭] ಎಂದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಲಕ್ಷ್ಮಮ್ಮ ಎಂಬುವವರು ಮಾಹಿತಿ ನೀಡಿದ್ದಾರೆ. ಗುನ್ನಾಗೆರೆಯ ಎಲ್ಲಮ್ಮನ ಹಬ್ಬದಲ್ಲಿ ಗಾವು ಸಿಗಿಯುವವನು ಮಡಿವಾಳ ಜಾತಿಯವನು. ಈತನನ್ನು 'ಚೌಟಿಪತಯ್ಯ' ಎನ್ನುವರು. 'ಪೋತಲರಾಜ' ಎಂಬ ಹೆಸರಿಗೆ ಇದು ಪರ್ಯಾಯ ವಾದುದು. ಬೇರೆ ಬೇರೆ ಸ್ಥಳಗಳಲ್ಲಿ ವಿಭಿನ್ನ ಸಮುದಾಯದವರು ಗಾವು ಸಿಗಿಯುತ್ತಾರೆ ಎಂಬ ಅಂಶವನ್ನು ಮೇಲ್ಕಂಡ ಅಂಶಗಳಿಂದ ಗಮನಿಸಬಹುದಾಗಿದೆ.

### ೪.೨.೨. ಸಿಡಿಯ ಆಚರಣೆ

ಸಿಡಿಯ ಆಚರಣೆಯಲ್ಲಿ ಹಲವಾರು ಬಗೆಗಳಿವೆ. ತೊಟ್ಟಿಲು ಸಿಡಿ, ಬೆನ್ನು ಸಿಡಿ, ಗೊಂಬೆ ಸಿಡಿ ಹೀಗೆ ವಿವಿಧತೆಯನ್ನು ಕಾಣಬಹುದಾಗಿದೆ. ಸಿಡಿ ಆಡುವವರು ಮೊದಲೇ ಹರಕೆ ಮಾಡಿಕೊಂಡಿರುತ್ತಾರೆ. ಖಾಯಿಲೆಯಾದರೆ, ಮಕ್ಕಳಾಗದಿದ್ದರೆ ಹೀಗೆ ನಾನಾ ಕಂಟಕ ನಿವಾರಣೆಗಾಗಿ ಸಿಡಿ ಆಡುತ್ತೇವೆಂದು ಹರಕೆ ಹೊತ್ತುಕೊಳ್ಳುವರು. ತಮಕೂರು ಜಿಲ್ಲೆಯಲ್ಲಿ ತುರುವೇಕೆರೆ ತಾಲ್ಲೂಕು ಹುಲಿಕಲ್ ಕೆಂಪಮ್ಮ, ಚಿಕ್ಕನಾಯ್ಕನಹಳ್ಳಿ ತಾಲ್ಲೂಕಿನ ಹುಳಿಯಾರು ದುರ್ಗಮ್ಮ, ತಿಪಟೂರು ಕೆಂಪಮ್ಮ, ಗುನ್ನಾಗರದ ಎಲ್ಲಮ್ಮ ಗ್ರಾಮ ದೇವತೆಗಳಲ್ಲಿ ಸಿಡಿಯ ಆಚರಣೆ ರೂಢಿಯಲ್ಲಿದೆ.

ಗುನ್ನಾಗೆರೆಯ(ಕುಣಿಗಲ್ ತಾಲ್ಲೂಕು)ಎಲ್ಲಮ್ಮನ ಸಿಡಿ ಪ್ರಸಿದ್ಧವೂ, ಭಯಾನಕವೂ ಆಗಿದೆ. ಇದನ್ನು ಬೆನ್ನು ಸಿಡಿ ಎನ್ನಬಹುದು. "ಹರಸಿಕೊಂಡ ಭಕ್ತರನ್ನೆಲ್ಲಾ ಬೆನ್ನು ಸಿಡಿಯವರೆನ್ನುವರು. ಇಬ್ಬರನ್ನು ಮಾತ್ರ ಪಟ್ಟದ ಸಿಡಿಯವರೆಂದು ಗುರುತಿಸುವರು. ಈ ಇಬ್ಬರೂ ತೋಟಿಗಳು. ಊರಿನಲ್ಲಿ ಆ ವರ್ಷ ಯಾರೂ ಸಿಡಿ ಆಡದಿದ್ದರೂ ಇವರಿಬ್ಬರು ಮಾತ್ರ ಸಿಡಿ ಆಡಲೇಬೇಕು."[೨೮] ಈ ಕೆಲಸಕ್ಕಾಗಿ ಇವರಿಗೆ ತಲಾ ಒಂದೊಂದು ಎಕರೆ ಜಮೀನನ್ನು ಊರಿನವರು ಕೊಟ್ಟಿರುತ್ತಾರೆ. ಜೊತೆಗೆ ಪ್ರತಿವರ್ಷ ಒಂದು ಹೊರೆ ರಾಗಿಹುಲ್ಲು ಮತ್ತು ಭತ್ತದ ಹುಲ್ಲನ್ನು ಕೊಡಬೇಕು. ಸುಭಾಷ್‌ಚಂದ್ರ ನಾಟೀಕಾರ ಅವರು 'ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ' ಎಂಬ ಕೃತಿಯಲ್ಲಿ "ಗುನ್ನಾಗೆರೆ ಎಂಬ ಗ್ರಾಮದಲ್ಲಿ ಇಂದಿಗೂ ಬೆನ್ನು ಸಿಡಿಯಾಡುವವರು ಮುಖ್ಯವಾಗಿ ಹೊಲೆಯ ಮತ್ತು ಮಾದಿಗ ಸಮುದಾಯದವರು."[೨೯] ಎಂದು ಉಲ್ಲೇಖ ಮಾಡಿದ್ದಾರೆ. ಆ ದೇವತೆಯ ಜಾತ್ರೆಯಂದು ಬೆನ್ನ ಸಿಡಿಯಾಡುತ್ತಾರೆ. "ಸಿಡಿ ಆಡುವ ಹರಕೆ ಹೊತ್ತ ಭಕ್ತ ಆ ದಿನ ಸ್ನಾನ, ಮಡಿಗಳೊಂದಿಗೆ ಸಂಜೆಯವರೆಗೆ ಉಪವಾಸವಿದ್ದು, ಸಂಜೆಯ ಹೊತ್ತಿಗೆ ಹೆಂಡ ಕುಡಿದು, ವೀರಗಚ್ಚೆ ಹಾಕಿ, ಕೋರೆಪೇಟ ಧರಿಸಿ, ಅಂಗವಸ್ತ್ರವನ್ನು ಹೊದೆದು ಹರೆದೋಣಿ ಮೊರೆತಕ್ಕೆ ತಕ್ಕಂತೆ ಆವೇಶಭರಿತನಾಗಿ ಕುಣಿಯುತ್ತ ದೇವಸ್ಥಾನದ ಹತ್ತಿರ ಬರುತ್ತಾನೆ. ರಾತ್ರಿ ೮ ಗಂಟೆ ಸುಮಾರಿಗೆ ಆ ದೇವರಿಗೆ ಎದುರಾಗಿ ಅಂಗಾತ ಮಲಗಿಕೊಳ್ಳುವನು. ಆಗ ತಲೆತಲಾಂತರದಿಂದ ನಡೆದು ಬಂದ ಪರಿಪಾಠದಂತೆ ಆಯಾ ಕಾರ್ಯವಂಶಸ್ಥ ಹಿರಿಯ ಪರಿಣಿತರು ಬೆನ್ನು ಸಿಡಿಯಾಡುವವನ ಬೆನ್ನು (ಹುರಿ) ನರವನ್ನು ಹಿಡಿದು, ಶಸ್ತ್ರದಿಂದ ಅವನ ಹಿಂದಿನ ಭಾಗಕ್ಕೆ ಚುಚ್ಚಿ ಕಬ್ಬಿಣದ ಕೊಂಡಿಗಳನ್ನು ನರಕ್ಕೆ ಸಿಕ್ಕಿಸುವರು."[೩೦]

ಇನ್ನೊಂದು ಭಾಗದ ಬೆನ್ನ ನರಕ್ಕೆ ಚುಚ್ಚಿ ಆ ನಂತರ ಅವನ ಮೇಲೆ ದೇವರ ತೀರ್ಥ ಪ್ರೋಕ್ಷಿಸುವರು. ಆತ ಮೇಲೆದ್ದು ದೇವತೆಗೆ ಕೈಮುಗಿದು ಆನಂತರ ಅವನ ಒಂದು ಕೈಯಲ್ಲಿ ಹೊಂಬಾಳೆಯನ್ನು ಇನ್ನೊಂದು ಕೈಯಲ್ಲಿ ಕತ್ತಿಯನ್ನು ಕೊಟ್ಟು ಬೆನ್ನಿಗೆ ನಾಟಿಕೊಂಡಿರುವ ಕಬ್ಬಿಣದ ಕೊಕ್ಕೆಗಳಿಗೆ ಹೊಂದಿಕೊಂಡಿರುವ ಸರಪಳಿಗಳನ್ನು ತುಸು ಬಿಗಿಯಾಗಿ ಹಿಡಿದುಕೊಂಡು ಮುನ್ನಡೆಸುವರು. ಕೆಂಡಕಾರುತ್ತ ಸಿದ್ಧವಾಗಿರುವ ಕೊಂಡವನ್ನು ಆತನಿಂದ ಹಾಯಿಸಿದ ಅನಂತರ, ಸಿಡಿಕಂಬವನ್ನು ನೆಲದತ್ತ ಬಗ್ಗಿಸುವರು. ಕಲ್ಲು ಕಂಬದ ನಡುವೆ ನೆಟ್ಟ ತಿರುಗುಣಿಗೆ ಅಡ್ಡಲಾಗಿ ಏತದ ಮರದಂತೆ ಕಾಣುವ ದಪ್ಪ ಮರದ ಮುಂದಿನ ತುದಿಗೆ ಸಿಕ್ಕಿಸಿದ ಕಬ್ಬಿಣದ ಕೊಂಡಿಗೆ ಸಿಡಿಯಾಡುವವನ ಬೆನ್ನ ಸರಪಳಿಗಳನ್ನು ಸಮಾನಾಂತರವಾಗಿ ಕಟ್ಟಿ, ಸಿಡಿಕಂಬವನ್ನು ಭೂಮಿಗೆ ಸಮಾನಾಂತರವಾಗಿ ಮೇಲಕ್ಕೆ ಏರಿಸುವರು. ಆಗ ಸಿಡಿ ಕಂಬಕ್ಕೆ ಬೆನ್ನು ಒಂದಾಗಿ ನೇತುಬಿದ್ದು

ಸಿಡಿಯಾಡುವನು. ತನಗಾದ ನೋವಿನ ಪರಿವೇ ಇಲ್ಲದೆ ಅಟ್ಟಹಾಸದಿಂದ ಕತ್ತಿಯನ್ನು ಎಡಬಲಕ್ಕೆ ಬೀಸುತ್ತ ದೇವತೆಗೆ ಕತ್ತಿ ಮೇಲೆತ್ತಿ ಕೈಮುಗಿಯುತ್ತಾನೆ.

"ಬೆನ್ನಿನ ಚರ್ಮಕ್ಕೆ ಕೊಕ್ಕೆ ಸಿಕ್ಕಿಸಿ ತೇರು ಎಳೆಸುತ್ತಾರೆ. ತಮಟೆ, ಡೋಲು, ಬಡಿದು, ಬಡಿದು ಅದೇನು ತೊಂದರೆ ಆಯ್ತು ಅಂತ ಗೊತ್ತಾಗೋಕಿಲ್ಲ."[೩೧] ಅವನ ನೋವು ಇತರರಿಗೆ ತಿಳಿಯದ ಹಾಗೆ ತಮಟೆ ಹಾಗೂ ಡೋಲನ್ನು ಜೋರಾಗಿ ಬಾರಿಸುತ್ತಾರೆ.

ಸಿಡಿಕಂಬ ಮೆಲ್ಲಗೆ ತಿರುಗಲಾರಂಭಿಸುತ್ತದೆ. ಎಡದಿಂದ ಬಲಕ್ಕೆ, ಬಲದಿಂದ ಎಡಕ್ಕೆ ಮೂರಾವರ್ತಿ ತಿರುಗಿಸಿ ಆನಂತರ ಸಿಡಿಯಾಡುವವನನ್ನು ಸಿಡಿಕಂಬದಿಂದ ಕೆಳಗಿಳಿಸುತ್ತಾರೆ. ಅಲ್ಲಿಂದ ಆತನನ್ನು ದೇವರೆದುರು ಕರೆದೊಯ್ದು ಅಲ್ಲಿ ಬೆನ್ನಿಗೆ ಸಿಕ್ಕಿಸಿದ ಕೊಂಡಿಗಳನ್ನು ತೆಗೆದು ಗಾಯಗಳಿಗೆ ದೇವರ ಬಂಡಾರವನ್ನು (ಅರಿಷಿಣ, ಕುಂಕುಮ ಮಿಶ್ರಣ) ಹಚ್ಚಿ ಬಿಳಿ ಬಟ್ಟೆಯನ್ನು ಕಟ್ಟುತ್ತಾರೆ. ಸಿಡಿ ಆಡಿದವರು ಮಾರನೆಯ ದಿನ ಗ್ರಾಮಸ್ಥರ ಮನೆಗಳಿಗೆ ಹೋಗಿ ದಿನಸಿ, ಹಣ, ಹೊಸ ಬಟ್ಟೆಗಳನ್ನು ವಸೂಲಿ ಮಾಡುತ್ತಾರೆ. ಇವರ ಸಂಗ್ರಹಣೆ ಅನೇಕ ತಿಂಗಳುಗಳವರೆಗೆ ನಡೆಯುತ್ತದೆ. ಬೆನ್ನಿನ ಗಾಯವು ವಾಸಿಯಾಗುವವರೆಗೆ ಬಟ್ಟೆ ಹಾಕುವಂತಿಲ್ಲ. ಒಂದು ಪಂಚೆಯನ್ನು ಉಟ್ಟುಕೊಂಡು ದುಪ್ಪಟವನ್ನು ಹೊದ್ದುಕೊಂಡಿರುತ್ತಾರೆ. ಆರೋಗ್ಯ ಸುಧಾರಿಸುವ ತನಕ ಕೆಲಸಕ್ಕೆ ಹೋಗಲು ಸಾಧ್ಯವಾಗುವುದಿಲ್ಲವಾದ್ದರಿಂದ ಊರಿನವರು ಇವರ ಸಂಸಾರ ನಿರ್ವಹಣೆಗೆ ನೆರವಾಗುತ್ತಾರೆ.

"ಮೊದಲು ಈ ಗ್ರಾಮದಲ್ಲಿ ಒಕ್ಕಲಿಗರು ಸಿಡಿಯಾಡುತ್ತಿದ್ದರೆಂದೂ, ಒಂದು ಕೆಂಪು ಪೇಟವನ್ನು ಕೊಡುವುದರ ಮೂಲಕ ಈ ಆಚರಣೆಯನ್ನು ತಳಸಮುದಾಯಗಳಿಗೆ ವರ್ಗಾಯಿಸಲಾಯಿತೆಂದೂ ಹೇಳುವರು. ಘನತೆಯ ಸಂಕೇತವಾದ ಈ ಕೆಂಪು ಪೇಟವನ್ನು ತಳಸಮುದಾಯವರು ಮಾರಿ ಹಬ್ಬದ ದಿನ ಗುಡಿಗೆ ಹೋಗಿ ಹಿಂದಿರುಗಿಸುವರು."[೩೨] "ಮಾನವನ ರಕ್ತ ಭೂ ದೇವಿಗೆ ಸಮರ್ಪಣೆಯಾಗದೆ ಬೆಳೆ ಹುಲುಸಾಗುವುದಿಲ್ಲ ಎಂಬ ನಂಬಿಕೆಯ ಹಿನ್ನೆಲೆಯಲ್ಲಿ ಜಾತ್ರೆಯಲ್ಲಿ ಸಿಡಿಯಾಡುವ ಸಂಪ್ರದಾಯ ಹಲವೆಡೆ ಇದೆ."[೩೩] ಈ ಪದ್ಧತಿ ಶಾಕ್ತೇಯರಿಂದ ಬಂದಿರಬಹುದು ಎಂದು ಮಂಜುನಾಥ ಬೇವಿನಕಟ್ಟಿಯವರು ಅಭಿಪ್ರಾಯಪಟ್ಟಿದ್ದಾರೆ. ಗ್ರಾಮದೇವತೆಗಳ ಜಾತ್ರೆಯಲ್ಲಿ ಆಚರಿಸುವ ಆಚರಣೆಗಳಲ್ಲಿ 'ಸಿಡಿ' ಮಹತ್ವವಾದುದು. ಕೆಲವೆಡೆ ಎಲ್ಲಮ್ಮನ ಹಬ್ಬದಲ್ಲಿ ಸಿಡಿ ಆಡುವುದೇ ಪ್ರಧಾನ ಆಚರಣೆ. ಈ ಆಚರಣೆಯಲ್ಲಿ ಹಿಂಸೆಯೇ ಪ್ರಧಾನವಾಗಿ ಕಂಡರೂ, ಜನ ಮಾತ್ರ ಅದನ್ನು ಸೇವೆ ಎಂದೇ ಪರಿಗಣಿಸುತ್ತಾರೆ.

### ೪.೨.೩. ಕೊಂಡ ಹಾಯುವುದು

ಈ ಆಚರಣೆಯನ್ನು "ಕೆಂಡ ಹಾಯುವುದು" ಎಂದೂ ಹೇಳುವರು. ಕೆಲವು ಕಡೆ ಅಗ್ನಿಕೊಂಡ ಎನ್ನುವರು. ಕೊಂಡ ಹಾಯುತ್ತೇವೆಂದು ಹರಕೆ ಕಟ್ಟಿಸಿಕೊಂಡ ಜನ ಪೂಜಾರಿಯ ಜೊತೆಯಲ್ಲಿ ಬೆಂಕಿಯ ಮೇಲೆ ಓಡುವುದೇ ಕೆಂಡ ಹಾಯುವ ಆಚರಣೆ. ತುಮಕೂರು ಜಿಲ್ಲೆಯಲ್ಲಿ ಮಧುಗಿರಿ ದಂಡಿನಮಾರಮ್ಮನ ಜಾತ್ರೆ, ನಾಗಸಂದ್ರದ ಕೆಂಪಮ್ಮನ ಜಾತ್ರೆ, ಹಂದನಕೆರೆ ದುರ್ಗಮ್ಮನ ಜಾತ್ರೆ, ಉಜ್ಜನಿ ಚೌಡಮ್ಮನ ಜಾತ್ರೆ, ಕಾಳಘಟ್ಟಮ್ಮನ ಜಾತ್ರೆ, ಗುಬ್ಬಿ ಬಸವಾ ಪಟ್ಟಣದ ಕರಿಯಮ್ಮನ ಜಾತ್ರೆ ಮೊದಲಾದ ಗ್ರಾಮದೇವತೆ ಹಬ್ಬಗಳಲ್ಲಿ ಕೊಂಡ ಹಾಯುವ ಆಚರಣೆ ಅಸ್ತಿತ್ವದಲ್ಲಿದೆ. ಜನ ತಮ್ಮ ಬದುಕಿನಲ್ಲಿ ಬರಬಹುದಾದ ರೋಗ-ರುಜಿನ ಲಾಭ, ನಷ್ಟಕ್ಕೂ ಮಾರಿಯ ಕೃಪೆಯೇ ಕಾರಣ ಎಂದು ನಂಬುವುದು ಕಂಡುಬರುತ್ತದೆ. ಅದಕ್ಕೆ ಅನುಗುಣವಾಗಿ ಈ ಸಮಸ್ಯೆಗಳಿಂದ ಪಾರಾಗಲು ಮತ್ತು ಈ ಹಿಂದೆ ಅಂಥ ತೊಂದರೆಗಳಿಗೆ ಒಳಗಾಗಿದ್ದರೆ, ನಿವಾರಣೆಗಾಗಿ ಈ ರೀತಿಯ ಆಚರಣೆಗಳನ್ನು ತಳಸಮುದಾಯಗಳು ಆಚರಿಸುತ್ತ ಬಂದಿವೆ.

೨೦೧೬ರ ಮಾರ್ಚ್ ತಿಂಗಳಲ್ಲಿ ತುಮಕೂರು ಜಿಲ್ಲೆಯ, ತಾಲ್ಲೂಕಿನ ಹೆತ್ತೇನಹಳ್ಳಿ ಗ್ರಾಮದಲ್ಲಿ ಮುಜರಾಯಿ ಇಲಾಖೆಗೆ ಸೇರಿದ ಮಾರಮ್ಮ ದೇಗುಲದಲ್ಲಿ ಜಾತ್ರಾ ಮಹೋತ್ಸವ ಅಂಗವಾಗಿ ಅಗ್ನಿಕೊಂಡ ನಡೆಯಿತು. ಹೆತ್ತೇನಹಳ್ಳಿಯ ಸುತ್ತಲಿನ ಸುಮಾರು ೮ ಗ್ರಾಮಗಳ ಸಾವಿರಾರು ಸಂಖ್ಯೆಯ ಜನರು ಈ ಜಾತ್ರೆಗೆ ಬರುತ್ತಾರೆ. "ಈ ಜಾತ್ರೆಯಲ್ಲಿ ಕೊಂಡ ಹಾಯುವ ವೇಳೆ ಗಾಯಗೊಂಡ ಮೂವರು ಮೃತಪಟ್ಟರು. ದುರ್ಘಟನೆಯಲ್ಲಿ ೧೦೧ ಮಂದಿ ಗಾಯಗೊಂಡು, ೫೦ ಮಂದಿ ಶಾಶ್ವತ ಅಂಗವೈಕಲ್ಯಕ್ಕೆ ಒಳಗಾದರು."[೩೪] ಇಲ್ಲಿ ಪ್ರಮುಖವಾಗಿ ಗಮನಿಸಬೇಕಾದ ವಿಚಾರವೆಂದರೆ ಕೊಂಡ ಹಾಯಿಸುವಾಗ ಮೃತಪಟ್ಟವರೆಲ್ಲ ತಳಸಮುದಾಯದವರು. ಯಾವುದೇ ಗ್ರಾಮದೇವತೆಯ ಹಬ್ಬಗಳಲ್ಲಿ ಆಚರಣೆಗಳನ್ನು ಕಾರ್ಯ ರೂಪಕ್ಕೆ ತರುವವರು ತಳಸಮುದಾಯಗಳು. ಈ ಆಚರಣೆಗಳನ್ನು ಪುರಾಣಗಳ ಮೂಲಕ ಹೇರಿರುವವರು ಮೇಲ್ವರ್ಗಗಳು. ತಮ್ಮ ಮನರಂಜನೆಗಾಗಿ ಪುರಾಣಗಳ ಮೂಲಕ ಆಚರಣೆಗಳನ್ನು ಹೇರಿದ್ದಾರೆ.

### ೪.೨.೪. ಮಡೆಸ್ನಾನ

ಮೇಲ್ಜಾತಿಯವರು ಉಂಡ ಎಂಜಲಿನ ಮೇಲೆ ದಲಿತರು ಉರುಳಾಟ ನಡೆಸುವುದು ಎಂಜಲನ್ನು ಮೈಗೆ ಒರೆಸಿಕೊಳ್ಳುವುದು ಮುಂತಾದ ಅಮಾನವೀಯ ಆಚರಣೆಗಳನ್ನು ಕುರಿತು ಎನ್.ಚಿನ್ನಸ್ವಾಮಿ ಸೋಸಲೆ ಅವರು ಅಧ್ಯಯನ ಮಾಡಿದ್ದಾರೆ. "ಮಡೆಸ್ನಾನ ಆಚರಣೆ

ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ನಾಗಲಮಡಿಕೆ ಎಂಬಲ್ಲಿರುವ ಸುಬ್ರಹ್ಮಣ್ಯ ದೇವಸ್ಥಾನದಲ್ಲಿ ನಡೆಯುವ ಜಾತ್ರೆಯಲ್ಲಿ ಇದೆ."[೩೫] ಸಂತಾನಕ್ಕಾಗಿ, ಕಾಯಿಲೆಗಳನ್ನು ಗುಣಪಡಿಸುವುದಕ್ಕಾಗಿ ತಳಸಮುದಾಯದವರು ಹರಕೆ ಹೊರುತ್ತಾರೆ. ಇಲ್ಲಿ 'ಬ್ರಾಹ್ಮಣರಿಂದ ಹಿಡಿದು ದಲಿತರವರೆಗೂ ಎಲ್ಲರೂ ಮಡೆಸ್ನಾನ ಮಾಡುತ್ತಾರೆ. ಸುಮಾರು ೫೦೦ ವರ್ಷಗಳಿಂದಲೂ ಈ ಆಚರಣೆ ಅಸ್ತಿತ್ವದಲ್ಲಿದೆ."[೩೬] ಸುಬ್ರಹ್ಮಣ್ಯ ಮತ್ತಿತರ ಕಡೆಗೆ ಬ್ರಾಹ್ಮಣರು ಉಂಡ ಎಲೆಯ ಮೇಲೆ ತಳಸಮುದಾಯದವರು ಉರುಳುತ್ತಾರೆ. ನಾಗಲಮಡಿಕೆಯಲ್ಲಿ ಎಲೆಯನ್ನು ಹೊರುತ್ತಾರೆ. "ತುರುವೇಕೆರೆ ಪಟ್ಟಣದ ಬೇಟೆರಾಯಸ್ವಾಮಿ ದೇವಸ್ಥಾನದಲ್ಲಿ ಮಡೆ ಮಡೆಸ್ನಾನ ಅಸ್ತಿತ್ವದಲ್ಲಿದೆ. ಇಲ್ಲಿ ಊಟ ಮಾಡಿ ಬಿಟ್ಟ ಎಂಜಲು ಎಲೆ ಮೇಲೆ ಬ್ರಾಹ್ಮಣ ಸಮುದಾಯವರು ಉರುಳುತ್ತಾರೆ."[೩೭] ಉತ್ತರ ಪಿನಾಕಿನಿ ನದಿ ದಡದಲ್ಲಿ ನಡೆಯುವ ಜಾತ್ರೆಯಲ್ಲಿ ಸುಬ್ರಹ್ಮಣ್ಯ ಸ್ವಾಮಿ ದೇವಸ್ಥಾನದಲ್ಲಿ ಬ್ರಾಹ್ಮಣರು ಊಟ ಮಾಡಲು ಆರಂಭಿಸಿದ ಕೂಡಲೇ ದೇವಾಲಯದ ಸುತ್ತ ನೆರೆದ ತಳಸಮುದಾಯದವರು ಪೈಪೋಟಿ ನಡೆಸಿ ಆವರಣದ ಗೋಡೆ ಹಾರಿ ಬ್ರಾಹ್ಮಣರಿಂದ ಎಂಜಲೆಲೆಯನ್ನು ಕಸಿದುಕೊಂಡು ತಲೆಯ ಮೇಲೆ ಹೊತ್ತು ಮೈಗೆ ಹಚ್ಚಿಕೊಳ್ಳುತ್ತಾರೆ. ಈ ರೀತಿಯ ಆಚರಣೆಗಳು ಮೇಲ್ಜಾತಿಯ ಶ್ರೇಷ್ಠತೆಯನ್ನು ಉಳಿಸಿಕೊಳ್ಳುವ ಪ್ರಯತ್ನವೆನ್ನಬಹುದಾಗಿದೆ. ಆ ಮೂಲಕ ತಳಸಮುದಾಯಗಳ ಅಜ್ಞಾನವನ್ನು ದುರ್ಬಳಕೆ ಮಾಡಲಾಗುತ್ತಿದೆ.

**೪.೨.೫. ಜನಿವಾರ ಶಾಸ್ತ್ರ**

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಉಜ್ಜನಿಯ ಚೌಡಮ್ಮನ ಜಾತ್ರೆಯಲ್ಲಿ ಹೊಲೆಯ ಸಮುದಾಯದವರಿಗೆ ಜನಿವಾರ ಹಾಕುವ ಆಚರಣೆಯನ್ನು ಆಚರಿಸುತ್ತಾರೆ. "ದೇವತೆಯ ಜಾತ್ರೆಗೆ ಕಂಬ ಇಕ್ಕುವ ದಿನ ಬೆಳಿಗ್ಗೆ ಆರು ಜನ ಹೊಲೆಯ ಸಮುದಾಯದವರಿಗೆ ಜನಿವಾರ ಹಾಕಲಾಗುತ್ತದೆ. ಈ ಅವಧಿಯಲ್ಲಿ ಬಾಯಿಗೆ ಬಟ್ಟೆ ಕಟ್ಟಿಕೊಳ್ಳುತ್ತಾರೆ. ಇದಕ್ಕೆ ಕಾರಣ ಹೆಚ್ಚು ಮಾತನಾಡದೆ ಮೌನವಾಗಿರಬೇಕೆಂಬ ನಿಯಮದ ಪಾಲನೆ."[೩೭] ಅವರು ಯಾವ ಕಾರಣಕ್ಕೂ ಮನೆಗೆ ಹೋಗಬಾರದು. ಅವರ ಜಾತಿಯವರನ್ನು ಮುಟ್ಟಿಸಿಕೊಳ್ಳಬಾರದು. ಸಂಪೂರ್ಣವಾಗಿ ಹಬ್ಬ ಮುಗಿದ ಮೇಲೆಯೇ ಅವರು ತಮ್ಮ ಮನೆಗಳಿಗೆ ಹಿಂದಿರುಗಬೇಕು. ಹಿ.ಚಿ.ಬೋರಲಿಂಗಯ್ಯ ಅವರು "ಇದು ದೇಶದಲ್ಲೇ ವಿಶಿಷ್ಟ ಸಂಪ್ರದಾಯ, ಹೊಲೆಯರು ಜನಿವಾರ ಧರಿಸಿ ಬ್ರಾಹ್ಮಣರಾಗುವ ಅಪೂರ್ವ ಸನ್ನಿವೇಶ ಈ ಹಬ್ಬದಲ್ಲಿ ಬರುತ್ತದೆ. ನಿರ್ದಿಷ್ಟವಾಗಿ ನಿಯಮಿಸಿದ ಆರು ಜನ ಹೊಲೆಯರು ಈ ಬದಲಾವಣೆಗೆ ಒಳಗಾಗುತ್ತಾರೆ. ಈ ಸಂಪ್ರದಾಯ ಜಾತೀಯತೆಗೆ ಒಂದು ಸವಾಲು ಎನ್ನಬಹುದು."[೩೯] ಎಂದು ವಿವರಿಸುತ್ತಾರೆ. ಇಲ್ಲಿ ಮುಖ್ಯವಾಗಿ ಜಾತಿ ಶ್ರೇಷ್ಠತೆ ಹಾಗೂ ಎರಡು ಜಾತಿಗಳ ತಾತ್ಕಾಲಿಕ ಬದಲಾವಣೆಯನ್ನು ಗುರುತಿಸಬಹುದು. ಇಲ್ಲಿನ

ಮೂಲ ನಿವಾಸಿಗಳ ದೇವತೆಯಾದ ಚೌಡಮ್ಮ ಸಂಪೂರ್ಣವಾಗಿ ವೈದಿಕೀಕರಣ ಗೊಂಡಿರುವುದನ್ನು ಗಮನಿಸಬಹುದು.

**ದೇವಾಲಯ ಪ್ರವೇಶ**

ಇದುವರೆಗೂ ತಳಸಮುದಾಯಗಳಿಗೆ ಗ್ರಾಮೀಣ ಪ್ರದೇಶಗಳಲ್ಲಿ ದೇವಾಲಯದ ಪ್ರವೇಶವನ್ನು ನಿಷೇಧಿಸಲಾಗಿದೆ. ಇದಕ್ಕೆ ಮುಖ್ಯವಾದ ಉದಾಹರಣೆಯನ್ನು ಉಜ್ಜನಿ ಚೌಡಮ್ಮನ ಜಾತ್ರೆಯಲ್ಲಿ ಕಾಣಬಹುದು. ಕೊಂಡ ಹಾಯ್ದು ಬರುವ ಆರು ಜನ 'ಬ್ರಾಹ್ಮಣರೆನಿಸಿಕೊಂಡ' ಹೆಬ್ಬಾರೆ ಗುಡ್ಡರಿಗೆ ದೇವಸ್ಥಾನದ ಹಜಾರದೊಳಕ್ಕೆ ಪ್ರವೇಶವಿಲ್ಲ. ಕೆಂಡದಲ್ಲಿ ಓಡಿ ಆವೇಶ ಭರಿತರಾಗಿ ದೇವಸ್ಥಾನದ ಒಳಗೆ ನುಗ್ಗಲು ಆ ಆರು ಜನರೂ ಪ್ರಯತ್ನಿಸುತ್ತಾರೆ. ಹಾಗೆ ಆವೇಶದಿಂದ ಅವರು ಒಳನುಗ್ಗಲು ಪ್ರವೇಶಿಸಿದಷ್ಟೂ ಅವರನ್ನು ಬಾಗಿಲಲ್ಲೇ ತಡೆಯುವ ಪ್ರಯತ್ನಗಳಾಗುತ್ತವೆ. ಸವರ್ಣೀಯ ವ್ಯಕ್ತಿಗಳು ಬಾಗಿಲಲ್ಲಿ ನಿಂತು ಅವರನ್ನು ನಿಯಂತ್ರಿಸುತ್ತಾರೆ. ಈ ರೀತಿಯ ಆಚರಣೆ ಪ್ರತಿವರ್ಷವೂ ನಡೆಯುತ್ತದೆ. ಈ ಆಚರಣೆ ಘರ್ಷಣೆಯ ಸಂಕೇತ ಇರಬಹುದೇ? ಕಾರಣವೆಂದರೆ ಯಾವುದೇ ಆಚರಣೆ ಆರಾಧನೆಗಳು ನೂರಾರು ವರ್ಷಗಳ ದೀರ್ಘ ಕಾಲದಲ್ಲಿ ಹಲವು ರೀತಿಯ ಬದಲಾವಣೆಗೆ ಒಳಗಾಗುತ್ತಾ ಆಯಾ ಕಾಲದ ಸಾಮಾಜಿಕ ಮೌಲ್ಯಗಳನ್ನು ಪ್ರತಿಬಿಂಬಿಸುತ್ತಿರುತ್ತವೆ. ಅದು ಪ್ರಾಚೀನ ವ್ಯವಸ್ಥೆಯ ಪಳೆಯುಳಿಕೆಯ ರೀತಿಯೂ ಇರಬಹುದು. ಅಥವಾ ಹೇರಲ್ಪಟ್ಟ ಸಾಮಾಜಿಕ ಮೌಲ್ಯವು ಇರಬಹುದು.

ಡಿ.ಆರ್.ನಾಗರಾಜ್ ಅವರು ಈ ಆಚರಣೆಯನ್ನು ಕುರಿತು ಹೀಗೆ ಹೇಳಿದ್ದಾರೆ. "ಹರಿಜನರು ಜನಿವಾರ ಹಾಕಿ ನಿರ್ದಿಷ್ಟ ಅವಧಿಗೆ ಬ್ರಾಹ್ಮಣರಾಗುವುದು. ಮತ್ತೆ ಇನ್ನೊಂದು ಕಡೆ ಹರಿಜನರು ಆವೇಶದಿಂದ ಗುಡಿಗೆ ನುಗ್ಗಲು ಪ್ರಯತ್ನಿಸುತ್ತಾರೆ. ಅವರನ್ನು ಸವರ್ಣೀಯರು ತಡೆದು ನಿಲ್ಲಿಸುತ್ತಾರೆ. ಹರಿಜನರಿಗೆ ಕೊಟ್ಟ ಬ್ರಾಹ್ಮಣ್ಯದ ಮಿತಿ ಇದು. ಜನಿವಾರ ಕಳಚುವವರೆಗೆ ಅವರು ತಮ್ಮ ಜಾತಿಯೊಂದಿಗೆ ಯಾವುದೇ ರೀತಿಯ ಸಂಬಂಧವನ್ನು ಇಟ್ಟುಕೊಳ್ಳಬಾರದು. ಈ ಆಚರಣೆ ಒಂದು ಬಂಡುಕೋರ ರಿಚುಯಲ್ ಇರಬಹುದು ಎಂಬುದು ಸ್ಪಷ್ಟವಾಗುತ್ತದೆ."[೪೦]

ಸಿದ್ದಲಿಂಗಯ್ಯ ಅವರು ಈ ಆಚರಣೆಯನ್ನು ಕುರಿತು "ತುಳಿಯಲ್ಪಟ್ಟ ಜಾತಿಗಳ ಜನ ವಿವಿಧ ಆಚರಣೆಗಳ ಮೂಲಕ ಶೋಷಕ ಸಮಾಜಕ್ಕೆ ತಮ್ಮ ಪ್ರತಿಭಟನೆ ಸಲ್ಲಿಸಿದ್ದಾರೆ. ಉಜ್ಜನಿ ಚೌಡಮ್ಮನ ಹಬ್ಬದಲ್ಲಿ ಆರು ಜನ ಹೊಲೆಯರಿಗೆ ಜನಿವಾರ ಧಾರಣೆ ಮಾಡಿದ ನಂತರ ಅವರ ಮೇಲೆ ದೇವತೆ ಬರುತ್ತದೆ. ಅವರು ಚೌಡಮ್ಮನ ಗುಡಿಯನ್ನು ನುಗ್ಗಲು ಓಡುತ್ತಾರೆ. ಆದರೆ ಗುಡಿಯ ಬಾಗಿಲಿನಲ್ಲೇ ಮೇಲುಜಾತಿಯ ಜನ ಈ ದೇವರುಗಳನ್ನು ತಡೆಯುತ್ತಾರೆ.

ದೇವರು ಮೈದುಂಬಿದ್ದರೂ ಮೈದುಂಬಲು ಆರಿಸಿಕೊಂಡಿರುವ ವ್ಯಕ್ತಿಗಳು ಹೊಲೆಯರಾಗಿರುವುದು ಇದಕ್ಕೆ ಕಾರಣ"[೪೧] ಎಂದು ವಿವರಿಸುತ್ತಾರೆ.

ಎಸ್.ಎಸ್.ಹಿರೇಮಠ ಅವರು ಈ ವಿಷಯವನ್ನು ಕುರಿತು "ಹರಿಜನರಿಗೆ ಜನಿವಾರ ಹಾಕುವ ವಿಧಿ ಊರಮ್ಮನನ್ನು ಬ್ರಾಹ್ಮಣಿಯೆಂದು ಸಾಧಿಸುವ ಹಟದ ಪರಮಾವಧಿಯಿದ್ದಂತಿದೆ. ಬಲಿ ಕೊಡುವುದು, ಮಾಂಸಾಹಾರ, ಮದ್ಯಗಳನ್ನು ನಿಷೇಧಿಸುವಲ್ಲಿ ಸಫಲರಾದ ವೈದಿಕರು ಪ್ರಬಲರಾದ ಹೊಲೆಯರಿಗೆ ಜನಿವಾರ ಹಾಕುವ ಒತ್ತಾಯಕ್ಕೆ ಒಳಗಾಗಿರುವುದು ಸ್ಪಷ್ಟವಿದೆ. ಇಲ್ಲಿ ಹೆಬ್ಬಾರಮ್ಮ, ಚೌಡಮ್ಮ, ಮಾರಮ್ಮರಿಗಿರುವ ಸಂಬಂಧವನ್ನು ಶೋಧಿಸಬೇಕಾಗಿದೆ. ದ್ರಾವಿಡಾಂಶಗಳ ಜತೆ ವೈದಿಕ ಪರಂಪರೆಯೂ ಸೇರಿದ್ದು ಚೌಡಮ್ಮನನ್ನು ದೇವಗಣ, ರಾಕ್ಷಸ ಗಣಗಳೆರಡಕ್ಕೂ ಸೇರಿದವಳೆಂದು ಹೇಳುವಲ್ಲಿ ಸ್ಪಷ್ಟವಿದೆ"[೪೨] ಎಂದು ವಿಶ್ಲೇಷಿಸಿದ್ದಾರೆ.

ಮೇಲ್ಕಂಡ ವಿದ್ವಾಂಸರುಗಳ ಅಭಿಪ್ರಾಯಗಳನ್ನು ಗಮನಿಸಿದಾಗ ಇಡೀ ಭಾರತೀಯ ಸಾಮಾಜಿಕ ವ್ಯವಸ್ಥೆ ಅನಾವರಣಗೊಳ್ಳುತ್ತದೆ. ಜಾತಿಯೂ, ಭೂಮಾಲೀಕತನವೂ ಯಜಮಾನಿಕೆ ನಡೆಸುತ್ತಿರುವ ಭಾರತೀಯ ಸಮಾಜದಲ್ಲಿ ಹೇರಲ್ಪಟ್ಟ ಆಚರಣೆಗಳಿಂದ ತಳಸಮುದಾಯಗಳು ಯಾವ ರೀತಿಯಾಗಿ ಅಸಮಾನತೆಗೆ, ಶೋಷಣೆಗೆ ಒಳಗಾಗಿವೆ ಎಂಬುದನ್ನು ಗಮನಿಸಬಹುದು.

**೪.೨.೬. ಬೇವಿನ ಸೀರೆ, ಬಾಯಿಗೆ ಬೀಗ**

ತುಮಕೂರು ಜಿಲ್ಲೆಯ ಉಗ್ರ ರೂಪದ ಗ್ರಾಮದೇವತೆಗಳ ಜಾತ್ರೆಯಲ್ಲಿ ಬೇವಿನ ಸೀರೆ, ಬಾಯಿಗೆ ಬೀಗ ಆಚರಣೆಗಳು ಅಸ್ತಿತ್ವದಲ್ಲಿವೆ. ಸಾಂಸ್ಕೃತಿಕ ನಾಯಕನಾದ ಮೈಲಾರನ ಜಾತ್ರೆಯಲ್ಲಿ ಬಾಯಿಗೆ ಬೀಗ ಹಾಕಿಸಿಕೊಳ್ಳುತ್ತಾರೆ. "ಹರಸಿಕೊಂಡವರು ತಾಮ್ರದ ತಂತಿಯಿಂದ ಎರಡೂ ಕೆನ್ನೆಯನ್ನು ತೂತು ಮಾಡಿಸಿಕೊಂಡು ಬಾಯಿಗೆ ಬೀಗ ಹಾಕಿಸಿಕೊಳ್ಳುವರು. ಈ ಸಂದರ್ಭದಲ್ಲಿ ಅವರು ಮಾತನಾಡಲು ಸಾಧ್ಯವಾಗುವುದಿಲ್ಲ"[೪೩] ಸಂತಾನಕ್ಕಾಗಿ, ಸಾಂಕ್ರಾಮಿಕ ರೋಗಗಳ ನಿವಾರಣೆಗಾಗಿ ಈ ಆಚರಣೆಗಳನ್ನು ಮಾಡುವುದು ಕಂಡುಬರುತ್ತದೆ.

**೪.೨.೭. ಬಸವಿ ಪದ್ಧತಿ**

ತುಮಕೂರು ಜಿಲ್ಲೆಯಲ್ಲಿ ವಸಾಹತು ಕಾಲಘಟ್ಟದಲ್ಲಿ ಬಸವಿ ಪದ್ಧತಿ ವ್ಯಾಪಕವಾಗಿ ಅಸ್ತಿತ್ವದಲ್ಲಿತ್ತು ಎಂಬುದಕ್ಕೆ ಮೌಖಿಕ ಆಕರಗಳು ಮಾಹಿತಿ ಒದಗಿಸುತ್ತವೆ. "ಕಷ್ಟ ಬಂದಾಗ, ನನಗೆ ಹೆಣ್ಣುಮಗು ಹುಟ್ಟಿದರೆ ನಿನ್ನ ಹೆಸರಿನಾಗೆ ದೇವರಿಗೆ ಬಿಡ್ತಿನಿ ಎಂದು ಹರಕೆ ಮಾಡಿಕೊಳ್ಳುತ್ತಾರೆ. ಹೆಣ್ಣು ಮಗು ಸ್ವಲ್ಪ ಬೆಳೆದ ನಂತರ ದೇವರಿಗೆ ಬಿಟ್ಟಿದ್ದೀವಿ, ದೇವಸ್ಥಾನದಲ್ಲಿ

ಇರು ಎಂದು ಬೀದಿಗೆ ಬಿಡುತ್ತಾರೆ. ಯಾವ ವ್ಯಕ್ತಿಗೆ ಬರ್ಲಿ, ಏನಾದ್ರು ಆಗ್ಲೀ ದೇವರು ಸೇವೆ ಎಂದು ಸುಮ್ಮನೆ ಅನುಭವಿಸಬೇಕು."[೪೪] ಈ ರೀತಿಯ ಮೌಢ್ಯಕ್ಕೆ, ಶೋಷಣೆಗೆ ತಳಸಮುದಾಯದ ಹೆಣ್ಣುಮಕ್ಕಳು ಬಲಿಯಾಗುತ್ತಿದ್ದಾರೆ. ಕರ್ನಾಟಕದ ವಿವಿಧ ಭಾಗಗಳಲ್ಲಿ ವಿವಿಧ ಹೆಸರುಗಳಲ್ಲಿ ತಳಸಮುದಾಯಗಳ ಮಹಿಳೆಯರ ಮೇಲೆ ಲೈಂಗಿಕ ಶೋಷಣೆ ನಡೆಯುತ್ತಾ ಬಂದಿದೆ. ಎಲ್ಲಮ್ಮನಂತಹ ಹೆಣ್ಣು ಗ್ರಾಮೀಣ ದೇವತೆಗಳು, ಹನುಮಂತ ಮುಂತಾದ ಗಂಡು ದೇವರುಗಳ ಹೆಸರಿನಲ್ಲಿ ತಳಸಮುದಾಯಗಳ ಹೆಣ್ಣುಮಕ್ಕಳನ್ನು ಲೈಂಗಿಕ ದಾಸ್ಯಕ್ಕೆ, ವೇಶ್ಯಾವಾಟಿಕೆಗೆ ತಳ್ಳಲಾಗುತ್ತಿದೆ. ಚಿಕ್ಕನಾಯಕನಹಳ್ಳಿ ತಾಲ್ಲೂಕು ಕಂದಿಕೆರೆ ಎಂಬ ಗ್ರಾಮದಲ್ಲಿ ರೇಣುಕಾ ಎಲ್ಲಮ್ಮನ ಜಾತ್ರೆ ನಡೆಯುತ್ತದೆ. ಪಾತಪ್ಪನ ಉತ್ಸವ ಈ ಜಾತ್ರೆಯ ಒಂದು ಭಾಗ. "ಪಾತಪ್ಪ ಎಂಬ ದೇವರು ಅರಿಶಿಣ ಲೇಪಿತ ವ್ಯಕ್ತಿಯೊಬ್ಬನ ಮೈಮೇಲೆ ಬರುತ್ತದೆ. ಪಾತಪ್ಪನಿಗೆ ಸೂಳೆಯ ಸಹವಾಸ. ಆ ಸೂಳೆಯು ಕಂದಿಕೆರೆ ಗ್ರಾಮದಲ್ಲಿಯೇ ಇದ್ದಾಳೆ. ಹರಿಜನ ಕೋಮಿನ ವಯಸ್ಸಾದ ಸೂಳೆಗೆ ಅಂದು ವಿಶೇಷ ಅಲಂಕಾರ. ವಂಶಪಾರಂಪರ್ಯವಾಗಿ ಆ ಮನೆಯಲ್ಲಿ ಯಾರಾದರೂ ಒಬ್ಬಳು ಹೆಣ್ಣು ಮಗುವನ್ನು ಬಸವಿ ಬಿಡುವುದು ಇಲ್ಲಿನ ಸಂಪ್ರದಾಯ. ಈ ಉತ್ಸವದಲ್ಲಿ ಪಾತಪ್ಪನು ಸೂಳೆಯನ್ನು ಲೈಂಗಿಕವಾಗಿ ಪ್ರಚೋದಿಸುತ್ತಾ ಎಲ್ಲಮ್ಮಳ ಗುಡಿಯ ಬಳಿಗೆ ಕರೆತರುತ್ತಾನೆ."[೪೫] ಈ ರೀತಿಯದೇ ಮತ್ತೊಂದು ಆಚರಣೆ ಸೀಬಿ ನರಸಿಂಹಸ್ವಾಮಿ ಜಾತ್ರೆಯಲ್ಲಿ ದೇವರು ಸೂಳೆ ಮನೆಗೆ ಹೋಗುವುದು. ಈ ಆಚರಣೆಗಳು ದೇವದಾಸಿ ಪದ್ಧತಿಯನ್ನು ಪರೋಕ್ಷವಾಗಿ ಬೆಂಬಲಿಸುತ್ತವೆ. ಎನ್.ಚಿನ್ನಸ್ವಾಮಿ ಸೋಸಲೆ ಅವರು ಈ ಆಚರಣೆಯನ್ನು ಕುರಿತು ವಿಸ್ತೃತವಾಗಿ ವಿಶ್ಲೇಷಿಸಿದ್ದಾರೆ. "ದೇವಾಲಯಗಳನ್ನು ಶುಭ್ರವಾಗಿಸಲು ದೇವದಾಸಿಯರೆಂಬ ಒಂದು ವರ್ಗವನ್ನೇ ಸೃಷ್ಟಿಸಿದರು. ಇವರ ಮೋಜಿಗೆ ಬಸವಿಯರು ಹಾಗೂ ಗೆಜ್ಜೆಕಟ್ಟಿ ಕುಣಿಯುವ ಬಸವಿಯರನ್ನು ಸೃಷ್ಟಿಸಿದರು. ದಲಿತ ವರ್ಗವೇ ಇದಕ್ಕೆ ಅರ್ಪಿತವಾಗಬೇಕೆಂದು ತಾವೇ ಹೇಳುವ ಮಾತನ್ನು ಅವರೇ ಸೃಷ್ಟಿಸಿ, ಪೋಷಿಸುತ್ತಿದ್ದ ಜೀವವಿಲ್ಲದ ದೇವರ ಬಾಯಿಯಿಂದ ಹೇಳಿಸಿ ದಲಿತರನ್ನು ಹಗಲು ಕಂಡ ಬಾವಿಗೆ ರಾತ್ರಿ ಬೀಳುವಂತೆ ಮಾಡಿದರು. ಆ ಮೂಲಕ ಭಾರತದ ಅನಿಷ್ಟ ಸಂಸ್ಕೃತಿಗೆ ಮುನ್ನುಡಿ ಬರೆದರು."[೪೬] ಈ ರೀತಿಯಾಗಿ ದೇವದಾಸಿ ಎಂಬ ಪದ್ಧತಿ ತಳಸಮುದಾಯದ ಹೆಣ್ಣುಮಕ್ಕಳನ್ನು ಬಲಿ ತೆಗೆದುಕೊಂಡಿತು. ತುಮಕೂರು ಜಿಲ್ಲೆಯಲ್ಲಿ ಬಸವಿ ಪದ್ಧತಿ ಇತ್ತು ಎಂಬುದಕ್ಕೆ ವಕ್ತೃಗಳು ಮಾಹಿತಿ ನೀಡಿದ್ದಾರೆ.

"ತಿಪಟೂರು ತಾಲ್ಲೂಕು ಕುಂದೂರಿನಲ್ಲಿ ದೇವರಿಗೆ ಬಿಡುವ ಪದ್ಧತಿ ವಸಾಹತು ಕಾಲಘಟ್ಟದಲ್ಲಿ ಇತ್ತು."[೪೭] ಎಂದು ಕುಂದೂರು ತಿಮ್ಮಯ್ಯ ಅವರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

"ಕೊರಟಗೆರೆ ತಾಲ್ಲೂಕಿನಲ್ಲೂ ಈ ಪದ್ಧತಿ ಇತ್ತು."[೪೮] ಎಂದು ದೊಡ್ಡತಿಮ್ಮಯ್ಯ ಅವರು ಹೇಳಿದ್ದಾರೆ. "ಮಧುಗಿರಿ ತಾಲ್ಲೂಕಿನಲ್ಲಿ ಇತ್ತು"[೪೯] ಎಂದು ಕೃಷ್ಣಮೂರ್ತಿ ಅವರು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಮಾಹಿತಿ ನೀಡಿದ್ದಾರೆ.

"ಪ್ರತಿಯೊಂದು ಗ್ರಾಮದಲ್ಲಿ ಈ ರೀತಿ ವ್ಯವಸ್ಥೆ ಇತ್ತು"[೫೦] ಅವರನ್ನು ಬಸವಿಯರು ಎಂದು ಕರೆಯುತ್ತಿದ್ದರು. ಜಾತ್ರೆ ಸಂದರ್ಭದಲ್ಲಿ ಅವರಿಗೆ ಪ್ರಮುಖ ಸ್ಥಾನ ಸಮಾಜದಲ್ಲಿ ಇತ್ತು ಎಂಬುದನ್ನು ಗಮನಿಸಬಹುದು. ಇಂದಿಗೂ ಆ ವಂಶದವರು ಇರುವುದನ್ನು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗಮನಿಸಲಾಗಿದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಬ್ರಿಟೀಷರು ದೇವದಾಸಿ ಪದ್ಧತಿ ನಿಷೇಧ ಕಾನೂನನ್ನು ಜಾರಿಗೆ ತಂದರು. ಈ ಕಾನೂನಿನ ಪ್ರಭಾವದಿಂದಾಗಿ ತುಮಕೂರು ಜಿಲ್ಲೆಯಲ್ಲಿ ಬಹುತೇಕವಾಗಿ ಈ ಪದ್ಧತಿ ನಾಶವಾಗಿದೆ.

ಗ್ರಾಮ ದೇವತೆಗಳ ಹಬ್ಬದಲ್ಲಿ ಆಚರಣೆಗಳನ್ನು ಗಮನಿಸಿದರೆ ಭೂ ಮಾಲೀಕರು ಹಾಗೂ ತಳಸಮುದಾಯಗಳು ಮಾಡುವ ಕೆಲಸಗಳೆಂದರೆ; "ತಳಸಮುದಾಯಗಳು ಸಾರು ಹಾಕುವುದು, ಹಲಗೆ ಬಾರಿಸುವುದು, ಕೋಣ ಕಡಿಯುವುದು, ಸಿಡಿಯಾಡುವುದು, ಬಸವಿಯರನ್ನು ಬಿಡುವುದು, ಊರ ಮೇಲ್ಜಾತಿಯವರ ಮನೆಗಳಿಗೆ ಹೋಗಿ ದವಸ-ಹಣ ಎತ್ತುವುದು, ಆಸಾದಿಯ(ಬೈಗುಳದ) ಪದಗಳನ್ನು ಹಾಡುವುದು, ಮಾರಿಯನ್ನು ಪೂಜಿಸುವುದು ಇತ್ಯಾದಿ; ಸವರ್ಣೀಯರು ಗುಡಿಯ ಆಭರಣ-ಆದಾಯಗಳ ಉಸ್ತುವಾರಿ ನಡೆಸುವುದು, ಕೋಣ ಕೊಡಿಸುವುದು, ಕೋಣ ಕಡಿಯುವವನ ಸರದಿಯನ್ನು ನೇಮಿಸುವುದು, ಅವರಿಗೆ ದವಸ-ಹಣ ಕೊಡಿಸುವುದು, ಜೀತದಾಳುಗಳಿಗೆ ಹೊಸಬಟ್ಟೆ ಕೊಡಿಸುವುದು ಒಟ್ಟಿನಲ್ಲಿ ಹಬ್ಬದ ಇಡೀ ವ್ಯವಸ್ಥೆ ಮಾಡುವವರಾಗಿದ್ದಾರೆ. ಒಂದು ವರ್ಗವು ವಿನಯದಿಂದ ಸೇವೆಯನ್ನು ಸಮರ್ಪಿಸಿ ಇನಾಮನ್ನು ಪಡೆದು ಕೃತಜ್ಞವಾಗುವುದು; ಮತ್ತೊಂದು ವರ್ಗ ಆ ಸೇವೆಗಳನ್ನು ಸ್ವೀಕರಿಸಿ ದಾನಗಳನ್ನು ಕೊಟ್ಟು ಔದಾರ್ಯವನ್ನು ಮೆರೆಯುವುದು."[೫೧]

ಹಿಂದಿನಿಂದಲೂ ಬ್ರಾಹ್ಮಣ್ಯ ಶಕ್ತಿಗಳು ಕಾಯಂಗೊಳ್ಳಲು ಅನೇಕ ಬಗೆಯ ಸಂಸ್ಥೆಗಳನ್ನು ಕಟ್ಟಿದವು. ತಳವರ್ಗಗಳಿಗೆ ತಮ್ಮ ಹಣೆಬರಹ ಎಂದು ನಂಬಿಸುವ ಕೆಲಸದಲ್ಲಿ ಈ ಸಂಸ್ಥೆಗಳು ಪ್ರಭಾವ ಬೀರುತ್ತಲೇ ಬಂದಿವೆ. ಇಂದಿಗೂ ಬೆತ್ತಲೆ ಸೇವೆ, ದೇವದಾಸಿ, ಅಸ್ಪೃಶ್ಯತೆ, ಮಡೆಸ್ನಾನ, ಸಿಡಿ ಆಚರಣೆ ಮೊದಲಾದ ದುರಾಚಾರಗಳನ್ನು ಪೋಷಿಸಿಕೊಂಡು ಬರಲಾಗಿದೆ. ವೈಯುಕ್ತಿಕ ಹಿತ, ಸಂಬಂಧಿಕರ ಹಿತ, ಕುಟುಂಬದವರ ಹಿತ ಹಾಗೂ ಸಾಮೂಹಿಕ ಜನತೆಯ ಹಿತವನ್ನು ಕಾಪಾಡುವುದರಲ್ಲಿ ನಂಬಿಕೆ ಇಟ್ಟುಕೊಂಡು ಅಮಾನವೀಯ ಆಚರಣೆಗಳನ್ನು ಆಚರಿಸುವುದು ಕಂಡುಬರುತ್ತದೆ. ಬಂಡವಾಳಶಾಹಿ ವರ್ಗ, ಜಮೀನ್ದಾರಿ ವರ್ಗ ಇಂತಹ ಆಚರಣೆಗಳಲ್ಲಿ

ತೊಡಗುವುದಿಲ್ಲ. ಕಾರಣವೆಂದರೆ ಅವರು ಶಿಕ್ಷಣವನ್ನು ಪಡೆದಿದ್ದಾರೆ. ಪೌಷ್ಠಿಕ ಸಮತೋಲನ ಆಹಾರವನ್ನು ಸೇವಿಸಿ ದೈಹಿಕ ತೊಂದರೆಗಳಿಂದ ಮುಕ್ತರಾಗಿರುವ ಕಾರಣಕ್ಕೆ ಬದುಕಿನಲ್ಲಿರುವ ಅರ್ಥಹೀನವಾದ ಮೂಢನಂಬಿಕೆಗಳಿಗೆ ಅವರು ಬಲಿಯಾಗುವುದಿಲ್ಲ. ಅಜ್ಞಾನದಿಂದ, ಕೂಡಿರುವ, ಬಡತನದಿಂದ ಬದುಕು ದುರ್ಬಲವಾಗಿರುವ ತಳಸಮುದಾಯದವರು ಇಂತಹ ಅಮಾನವೀಯ ಆಚರಣೆಗಳಲ್ಲಿ ತೊಡಗುತ್ತಾರೆ. ಆಕಸ್ಮಿಕವಾಗಿ ತಾವಿಟ್ಟುಕೊಂಡಿರುವ ನಂಬಿಕೆ ಈಡೇರದಿದ್ದರೆ ಅದು ತಮ್ಮ ಹಣೆಯ ಬರಹವೆಂದು ಭಾವಿಸುವರೇ ಹೊರತು ಮೂಢನಂಬಿಕೆ ಎಂದು ಭಾವಿಸುವುದಿಲ್ಲ.

ಜಾತಿವಾದವನ್ನು ಪುಷ್ಟೀಕರಿಸುವ ಉದ್ದೇಶದಿಂದ ತಳಸಮುದಾಯಗಳನ್ನು ಕಂದಾಚಾರಗಳಿಗೆ ದೂಡಿರುವ ಸನ್ನಿವೇಶಗಳಿವೆ. ಅಮಾಯಕರನ್ನು ದೇವರು ಧರ್ಮದ ಹೆಸರಿನಲ್ಲಿ ಲೂಟಿ, ಕೊಳ್ಳೆಹೊಡೆಯುತ್ತಿರುವ ಸಮಾಜವನ್ನು ಕಾಣಬಹುದಾಗಿದೆ. ರಾಷ್ಟ್ರೀಯ ಕಾನೂನು ಶಾಲೆ ರೂಪಿಸಿರುವ ಮೂಢನಂಬಿಕೆ ವಿರೋಧಿ ಕರಡು ಮಸೂದೆ ಈಗಾಗಲೇ ಸರಕಾರದ ಮುಂದೆ ಪ್ರಸ್ತಾಪಿತವಾಗಿದೆ. ಅದರ ಬಗ್ಗೆ ಪರ-ವಿರೋಧ ಚರ್ಚೆಗಳು ವ್ಯಾಪಕವಾಗಿ ನಡೆಯುತ್ತಿವೆ. ಕನಿಷ್ಠ ಮುಜರಾಯಿ ವ್ಯಾಪ್ತಿಗೆ ಒಳಪಡುವ ದೇವಾಲಯಗಳಲ್ಲಿ ಇರುವ ಮೂಢನಂಬಿಕೆ ಆಚರಣೆಗಳನ್ನು ನಿಷೇಧಿಸುವುದು ಸರಕಾರದ ಪ್ರಥಮ ಕರ್ತವ್ಯವಾಗಬೇಕಿದೆ. ಮಗು ಸಾಮಾಜೀಕರಣ ಹೊಂದುವಾಗ ಮೂಢನಂಬಿಕೆಗಳನ್ನು ಮೈಗೂಡಿಸಿಕೊಂಡೇ ಬೆಳೆಯುತ್ತದೆ. ಆದ್ದರಿಂದ ಶಾಲೆ-ಕಾಲೇಜು, ವಿಶ್ವವಿದ್ಯಾಲಯಗಳಲ್ಲಿ ಮೌಢ್ಯತೆ ವಿರುದ್ಧ ಪಠ್ಯಕ್ರಮಗಳು ರಚನೆಯಾಗಬೇಕು. ಅಲ್ಲದೆ ಸರಕಾರಿ ಕಛೇರಿ ಇಲಾಖೆಗಳಲ್ಲಿ ಮೌಢ್ಯ ಆಚರಣೆಗಳನ್ನು ತಡೆಗಟ್ಟುವ ನಿಟ್ಟಿನಲ್ಲಿ ಸರಕಾರ ಆದಷ್ಟು ಬೇಗ ಮೂಢನಂಬಿಕೆ ಪ್ರತಿಬಂಧಕ ವಿಧೇಯಕವನ್ನು ಜಾರಿಗೊಳಿಸಬೇಕಿದೆ.

**ಕೊನೆ ಟಿಪ್ಪಣಿಗಳು**

೧. ಬೋರಲಿಂಗಯ್ಯ ಹಿ.ಚಿ., **ಉಜ್ಜನಿ ಚೌಡಮ್ಮ ಗ್ರಾಮದೇವತೆ ಅಧ್ಯಯನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧, ಪು.೫

೨. ಅದೇ, ಪು.೫

೩. ಕೋಸಾಂಬಿ ಡಿ.ಡಿ (ಲೇ)., ವೇಣುಗೋಪಾಲ್ ಟಿ.ಎಸ್., ಶೈಲಜಾ (ಅನು)., **ಪುರಾಣ ಮತ್ತು ವಾಸ್ತವ**, ಚಿಂತನ ಪುಸ್ತಕ, ಬೆಂಗಳೂರು, ೨೦೧೩, ಪು.೧೫೭

೪. ಚೆನ್ನಣ್ಣ ವಾಲೀಕಾರ, **ಹೈದ್ರಾಬಾದ್ ಕರ್ನಾಟಕದ ಗ್ರಾಮದೇವತೆಗಳ ಜಾನಪದೀಯ ಅಧ್ಯಯನ,** ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಗುಲಬರ್ಗಾ, ೧೯೯೮, ಪು.೪೫

೫. ಚಿಕ್ಕಣ್ಣ ಯಣ್ಣೆಕಟ್ಟೆ, **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,** ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸಿರಾ, ೨೦೦೧, ಪು.೧೭೧

೬. ಕೋಸಾಂಬಿ ಡಿ.ಡಿ(ಲೇ)., ವೇಣುಗೋಪಾಲ್ ಟಿ.ಎಸ್., ಶೈಲಜಾ (ಅನು)., **ಪುರಾಣ ಮತ್ತು ವಾಸ್ತವ,** ಚಿಂತನ ಪುಸ್ತಕ, ಬೆಂಗಳೂರು, ೨೦೧೩, ಪು.೧೬೦-೧೬೧

೭. ಚಿಕ್ಕಣ್ಣ ಯಣ್ಣೆಕಟ್ಟೆ, **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,** ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸಿರಾ, ೨೦೦೧, ಪು.೧೭೯

೮. ಚಿಕ್ಕತಿಮ್ಮಕ್ಕ, ದಾಸಾಲುಕುಂಟೆ, ವ್ಯವಸಾಯಗಾರರು

೯. ನಾಗರಾಜ ಓ., **ತುಮಕೂರು ಜಿಲ್ಲೆಯ ಗ್ರಾಮದೇವತೆಗಳು,** ಸಿರಾ ಪಬ್ಲಿಷಿಂಗ್ ಹೌಸ್, ಮೈಸೂರು, ೨೦೦೭, ಪು. ೩೦೧

೧೦. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ,** ಅಂಕಿತ ಪುಸ್ತಕ, ಬೆಂಗಳೂರು, ೨೦೧೫, ಪು.೭೨

೧೧. ಅದೇ, ಪು.೭೨

೧೨. ಚಿಕ್ಕಣ್ಣ ಯಣ್ಣೆಕಟ್ಟೆ, **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,** ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸಿರಾ, ೨೦೦೧, ಪು.೧೮೩

೧೩. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ,** ಅಂಕಿತ ಪುಸ್ತಕ, ಬೆಂಗಳೂರು, ೨೦೧೫, ಪು.೫೨

೧೪. ನರಸಿಂಹಮೂರ್ತಿ ಎಂ.ಎಲ್., **ಮಧುಗಿರಿಯ ದಂಡಿನ ಮಾರಮ್ಮ,** ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ೧೯೯೫, ಪು.೩೭-೩೮

೧೫. ನಾಗರಾಜ್ ಜಿ.ಎನ್.(ಲೇ)., **ದಲಿತ ದೇವತೆ ಮಾರಮ್ಮನೇ ದಲಿತರ ಬಲಿ ತೆಗೆದುಕೊಂಡಳೇ?, ಸಂವಾದ,** ಸೆಪ್ಟಂಬರ್ ೨೦೧೫, ಪು.೩೧

೧೬. ಅದೇ, ಪು.೩೪

೧೭. ಪ್ರಧಾನ್ ಗುರುದತ್ತ (ಪ್ರಸಂ)., **ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು,** ಸಂಪುಟ-೭, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ೨೦೧೦, ಪು.೨೫೦

೧೮. ಚಿನ್ನಸ್ವಾಮಿ ಸೋಸಲೆ ಎನ್., **ದಲಿತರ ಬದುಕು-ಮೆಲುಕು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨, ಪು.೧೬೨

೧೯. ಅದೇ, ಪು. ೧೬೩

೨೦. ಅದೇ, ಪು. ೧೭೪

೨೧. ಪ್ರಜಾವಾಣಿ, ದಿನಪತ್ರಿಕೆ ೦೨.೦೬.೨೦೧೧

೨೨. ಚಿಕ್ಕಣ್ಣ ಯಣ್ಣೆಕಟ್ಟೆ, **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ,** ಗಡಿನಾಡ ಜಾನಪದ ಸಂಪರ್ಕ ಕೇಂದ್ರ, ಸಿರಾ, ೨೦೦೧, ಪು.೨೧೪

೨೩. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ,** ಅಂಕಿತ ಪುಸ್ತಕ, ಬೆಂಗಳೂರು, ೨೦೧೫, ಪು.೯೮

೨೪. ಮಂಜುನಾಥ ಬೇವಿನಕಟ್ಟಿ, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪು.೬೭

೨೫. ಶಿವಣ್ಣ ಬೆಳವಾಡಿ ಎಸ್.(ಲೇ)., ಸೋಮು ಭಾಸ್ಕರಾಚಾರ್ (ಪ್ರಸಂ)., **ಬುಡಕಟ್ಟು ಸಮುದಾಯಗಳ ಆಚರಣೆಯ ನೆಲೆಗಳು,** ತುಮಕೂರು ಸಿರಿ(ಸ್ಮರಣ ಸಂಚಿಕೆ), ತುಮಕೂರು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ತುಮಕೂರು, ೨೦೧೫, ಪು.೧೨೯

೨೬. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ,** ಅಂಕಿತ ಪುಸ್ತಕ, ಬೆಂಗಳೂರು, ಪು.೧೦೨

೨೭. ಲಕ್ಷ್ಮಮ್ಮ, **ದಾಸಾಲುಕುಂಟೆ,** ವ್ಯವಸಾಯಗಾರರು

೨೮. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ,** ಅಂಕಿತ ಪುಸ್ತಕ, ಬೆಂಗಳೂರು, ಪು.೧೦೨

೨೯. ಸುಭಾಷ್‌ಚಂದ್ರ ನಾಟೀಕಾರ, **ಕರ್ನಾಟಕದಲ್ಲಿ ಸಿಡಿ ಸಂಪ್ರದಾಯ,** ಸಾಹಿತ್ಯ ನಂದನ, ಬೆಂಗಳೂರು, ೨೦೧೧, ಪು.೮೭

೩೦. ಅದೇ, ಪು.೮೭

೩೧. ಗೋಪಾಲ ನಾಯಕ್ ಎ.ಆರ್., **ಕಲಾದೇವಿ (ನಿರ್ಮಾಣ)**, ಹೊಸಪೇಟೆ ಆಕಾಶವಾಣಿ, ೨೦೧೭

೩೨. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ**, ಅಂಕಿತ ಪುಸ್ತಕ, ಬೆಂಗಳೂರು, ೨೦೧೫, ಪು.೧೦೩

೩೩. ಮಂಜುನಾಥ ಬೇವಿನಕಟ್ಟಿ, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪು.೧೯೫

೩೪. ಪ್ರಜಾವಾಣಿ ದಿನಪತ್ರಿಕೆ, ಮಾರ್ಚ್ ೯, ೨೦೦೬

೩೫. ಚೆನ್ನಸ್ವಾಮಿ ಸೋಸಲೆ ಎನ್., **ದಲಿತರ ಬದುಕು ಮೆಲುಕು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨, ಪು.೧೯೬

೩೬. **ವಿಜಯ ಕರ್ನಾಟಕ ದಿನಪತ್ರಿಕೆ**, ೧೭.೦೧.೨೦೧೬

೩೭. **ಪ್ರಜಾವಾಣಿ ದಿನಪತ್ರಿಕೆ**, ೨೧.೦೩.೨೦೧೬

೩೮. ಮಂಜುನಾಥ ಬೇವಿನಕಟ್ಟಿ, **ಕರ್ನಾಟಕ ಜನಪದ ಸ್ತ್ರೀ ದೈವಗಳ ಸಾಂಸ್ಕೃತಿಕ ಪದಕೋಶ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯, ಪು.೨೧೬

೩೯. ಬೋರಲಿಂಗಯ್ಯ ಹಿ.ಚಿ., **ಉಜ್ಜನಿ ಚೌಡಮ್ಮ ಗ್ರಾಮದೇವತೆ ಅಧ್ಯಯನ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೧, ಪು.೪೪

೪೦. ಅದೇ, ಪು.೧೬

೪೧. ಅದೇ, ಪು.೧೬

೪೨. ಅದೇ, ಪು.೧೭

೪೩. ಸಿದ್ದಲಿಂಗಯ್ಯ, **ಗ್ರಾಮದೇವತೆಗಳು ಜಾನಪದೀಯ ಅಧ್ಯಯನ**, ಅಂಕಿತ ಪುಸ್ತಕ, ಬೆಂಗಳೂರು, ೨೦೧೫, ಪು.೧೦೪

೪೪. ಗೋಪಾಲ ನಾಯಕ್ ಎ.ಆರ್., **ಕಲಾದೇವಿ (ನಿರ್ಮಾಣ)**, ಹೊಸಪೇಟೆ ಆಕಾಶವಾಣಿ, ೨೦೧೭

೪೫. ಚಿಕ್ಕಣ್ಣ ಯಣ್ಣೆಕಟ್ಟೆ, **ತುಮಕೂರು ಜಿಲ್ಲೆ ಜಾನಪದೀಯ ಅಧ್ಯಯನ**, ಗಡಿನಾಡ ಜಾನಪದ

ಸಂಪರ್ಕ ಕೇಂದ್ರ, ಸಿರಾ, ೨೦೦೧, ಪು.೨೧೪

೪೬. ಚಿನ್ನಸ್ವಾಮಿ ಸೋಸಲೆ ಎನ್., **ದಲಿತರ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು**, ಗೀತಾಂತಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ೨೦೧೫, ಪು.೧೬೩

೪೭. ತಿಮ್ಮಯ, ಕುಂದೂರು

೪೮. ದೊಡ್ಡ ತಿಮ್ಮಯ್ಯ, ಕುರಂಕೋಟೆ

೪೯. ಕೃಷ್ಣಮೂರ್ತಿ, ದಾಸಾಲುಕುಂಟೆ, ಶಿಕ್ಷಕರು

೫೦. ಕೃಷ್ಣಮೂರ್ತಿ, ಪಾವಗಡ, ತಾಲ್ಲೂಕು ದಲಿತ ಜಾಗೃತಿ ಸಮಿತಿಯ ಉಪಾಧ್ಯಕ್ಷರು

೫೧. ರಹಮತ್ ತರೀಕೆರೆ, **ಪ್ರತಿಸಂಸ್ಕೃತಿ**, ಅಭಿನವ ಪ್ರಕಾಶನ, ಬೆಂಗಳೂರು, ೨೦೧೩, ಪು.೭೫

## ಅಧ್ಯಾಯ: ಐದು

# ಮತಸ್ವೀಕಾರ

ಭಾರತೀಯ ಸಮಾಜ ಜಾತಿ ಪ್ರಧಾನವಾದದ್ದು. ಇಲ್ಲಿ ಸಾಮಾಜಿಕ ಸ್ಥಾನಮಾನಗಳು ನಿರ್ಧಾರವಾಗುವುದು ಆ ನೆಲೆಯಲ್ಲಿಯೇ. ಇದರಿಂದಾಗಿ ಇದು ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ಹೊಂದಿದೆ. ಪರಿಣಾಮವಾಗಿ ಜಾತಿ–ಜಾತಿಗಳ ನಡುವೆ ಮೇಲು–ಕೀಳೆಂಬ ಭಾವನೆಗಳು ಆಳವಾಗಿ ಬೇರೂರಿವೆ. ಈ ಸಮಾಜವನ್ನು ಎರಡು ಪ್ರಧಾನ ಸಂಸ್ಕೃತಿಗಳ ನೆಲೆಯಲ್ಲಿ ಗುರುತಿಸಬಹುದು. ಒಂದು ಆರ್ಯ ಸಂಸ್ಕೃತಿಯಾದರೆ ಮತ್ತೊಂದು ದ್ರಾವಿಡ ಸಂಸ್ಕೃತಿ. ಮೊದಲನೆಯದು ಪರಕೀಯ ಸಂಸ್ಕೃತಿ. ಎರಡನೆಯದು ಈ ನೆಲದ ಮೂಲ ನಿವಾಸಿಗಳ ಸಂಸ್ಕೃತಿ. ಈ ಎರಡು ಸಂಸ್ಕೃತಿಗಳ ಜನಸಮುದಾಯಗಳ ನಡುವೆ ಘರ್ಷಣೆ ನಡೆದು ಆರ್ಯರು ಜಯ ಗಳಿಸಿದ ಪರಿಣಾಮವಾಗಿ ಯಜಮಾನ್ಯ ಸಂಸ್ಕೃತಿ ಈ ಸಮಾಜದ ಮೇಲೆ ಗಾಢವಾದ ಪ್ರಭಾವ ಬೀರಲು ಅವಕಾಶವಾಯಿತು ಅನ್ನುವುದು ಒಂದಾದರೆ, ಮತ್ತೊಂದು ಚಿನ್ನಸ್ವಾಮಿ ಸೋಸಲೆ ಅವರು ಹೇಳುವ ಹಾಗೆ 'ದ್ರಾವಿಡರಿಗೆ ದುಡಿಮೆಯ ಯಾವ ವೃತ್ತಿಯೂ ಕೀಳಾಗಿರಲಿಲ್ಲ. ಎಲ್ಲ ವೃತ್ತಿಗಳೂ ಸಮಾಜ ವ್ಯವಸ್ಥೆಗೆ ಪೂರಕ ಮತ್ತು ಅವಶ್ಯಕವೆನ್ನುವ ಧೋರಣೆ ದ್ರಾವಿಡರದು. ಇಂಥ ದ್ರಾವಿಡ ವ್ಯವಸ್ಥೆ ನೆಲೆಗೊಂಡ ಸಂದರ್ಭದಲ್ಲಿ ಭಾರತದ ಮೇಲೆ, ದ್ರಾವಿಡ ನಾಡಿನ ಮೇಲೆ ದಾಳಿ ಮಾಡಿದ ಆರ್ಯರು ತಾವು ನೆಲೆಯೂರಿ ಬದುಕಲು ವ್ಯವಸ್ಥೆಯಲ್ಲೇ ಮೇಲು–ಕೀಳೆಂಬ ತಾರತಮ್ಯತೆಯನ್ನು ಉಂಟು ಮಾಡಿದರು. ಹೀಗೆ ದ್ರಾವಿಡ ವ್ಯವಸ್ಥೆಯಲ್ಲೇ ಒಂದು ಶೋಷಿತ ವರ್ಗವನ್ನು ಹುಟ್ಟು ಹಾಕಿ ದುಡಿಯುವ ಸಮುದಾಯವನ್ನು ಕೀಳಾಗಿಸಬೇಕಾದದ್ದು ಆರ್ಯರ ಅಂದಿನ ಅವಶ್ಯಕತೆಯಾಗಿತ್ತು. ಈ ವರ್ಣ ಜಾತಿ, ಶೋಷಣೆ, ಶ್ರೇಣೀಕೃತ ವ್ಯವಸ್ಥೆಯನ್ನು ಆರ್ಯರು ನಿರ್ಮಿಸಿದ ಮೇಲೆ ಈ ಮಣ್ಣಿನ ಮೂಲನಿವಾಸಿಗಳಾದ ದ್ರಾವಿಡರ ಸಾಮಾಜಿಕ ವ್ಯವಸ್ಥೆಯಲ್ಲೊಂದು ಸಂಚಲನವನ್ನೇ ಉಂಟುಮಾಡಿತು.

ಹಿಂದೂ ಧರ್ಮದಲ್ಲಿರುವ ಚಾತುರ್ವರ್ಣ ವ್ಯವಸ್ಥೆಯ ಬಗ್ಗೆ ಗಮನಿಸುವುದಾದರೆ ವಿದ್ವಾಂಸರು ವಿಭಿನ್ನ ರೀತಿಯಲ್ಲಿ ಹೇಳಿಕೆಯನ್ನು ನೀಡಿದ್ದಾರೆ. ಹಿಂದೂ ಧರ್ಮದ ಕಾನೂನುಗಳನ್ನು ಹೇಳಿದ ಮನು ವರ್ಣಗಳಲ್ಲಿ ಕೇವಲ ನಾಲ್ಕು, ಐದನೆಯದು ಎಂದು ಮತ್ಯಾವುದಿಲ್ಲ ಎಂದು ಸ್ಪಷ್ಟವಾಗಿ ಹೇಳುತ್ತಾನೆ. ಗಾಂಧೀಜಿ ಅವರ ಸುಧಾರಣಾವಾದಿ ಮಿತ್ರರು ಅಸ್ಪೃಶ್ಯತೆಯನ್ನು ನಿರ್ಮೂಲನ ಮಾಡುವ ಉದ್ದೇಶದಿಂದ ಮನುವಿನ ಅರ್ಥವನ್ನು ತಪ್ಪು ತಿಳಿಯಲಾಗಿದೆ ಎಂದು ವಾದಿಸುತ್ತಾರೆ. ಅಸ್ಪೃಶ್ಯರು ನಾಲ್ಕು ವರ್ಣಗಳಲ್ಲಿ ಒಂದಾದ ಶೂದ್ರರಲ್ಲಿ ಬರುತ್ತಾರೆ ಎಂದು ಅರ್ಥೈಸುತ್ತಾರೆ.

ಅಂಬೇಡ್ಕರ್ ಅವರ ಪ್ರಕಾರ ಮನು "ತಳಸಮುದಾಯಗಳನ್ನು ಶೂದ್ರರೆಂದು ನಾಲ್ಕನೆಯ ವರ್ಣದಲ್ಲಿ ಉದ್ದೇಶಪೂರ್ವಕವಾಗಿ ಸೇರಿಸಿದ್ದಾರೆ. ಐದನೆಯ ವರ್ಣವನ್ನು ನಿರ್ಮಿಸಿಲ್ಲ. ಮೂಲತಃ ನಾಲ್ಕೇ ವರ್ಣಗಳು ಇದ್ದು ಪುರಾತನರು ಕಟ್ಟಿದ ಈ ಒಂದು ಸಮಾಜದ ಸೌಧದಲ್ಲಿ ತಳಸಮುದಾಯಗಳನ್ನು ಐದನೆಯ ವರ್ಣವೆಂದು ನಿರ್ಮಾಣ ಮಾಡಿ ಗುರುತಿಸುವುದು ಅವರ ಉದ್ದೇಶವಾಗಿರಲಿಲ್ಲ. ಅದಕ್ಕೆಂದೇ ನಾಲ್ಕೇ ವರ್ಣಗಳಿಗೆ ಜಾತಿಗಳನ್ನು ಸೀಮಿತಗೊಳಿಸಿದರು. ಉದ್ದೇಶಪೂರ್ವಕವಾಗಿ ಅವರನ್ನು ಹಿಂದೂ ಸಮಾಜದ ಸಂಘಟನೆಯಿಂದ ಹೊರಗೆ ಇಟ್ಟ."[೧] ಅವರನ್ನು ವರ್ಣಬಾಹ್ಯರೆಂದು ಕರೆಯುತ್ತಾರೆ. ತಳಸಮುದಾಯಗಳು ಹಿಂದೂ ಸಮಾಜದಲ್ಲಿ ಪ್ರವೇಶಿಸಲು ಅವರಿಗೆ ನಿಷೇಧ ವಿಧಿಸಿರುವುದನ್ನು ಗಮನಿಸಬಹುದು. ಸುಧಾರಣೆಗೆ ಅಲ್ಲಿ ಅವಕಾಶವಿಲ್ಲ. ಅವರನ್ನು ಸಮಾಜದಿಂದ ಯಾವಾಗಲೂ ದೂರದಲ್ಲಿ ಇಡಲಾಗಿದೆ. ಸಮಾಜದ ಭಾಗವಾಗಿ ಪರಿವರ್ತಿತವಾಗುವ ಅವಕಾಶವಿಲ್ಲವಾಗಿದೆ.

ಗೋಲ್ವಾಲ್ಕರ್ ಅವರು ತಮ್ಮ ಬಂಚ್ ಆಫ್ ಥಾಟ್ಸ್(ವಿಚಾರ ಗುಚ್ಛ) ಕೃತಿಯಲ್ಲೂ "ಬ್ರಾಹ್ಮಣ ತಲೆ, ರಾಜಾ ಕೈಗಳು, ವೈಶ್ಯ ತೊಡೆ ಹಾಗೂ ಶೂದ್ರ ಕಾಲುಗಳು. ಇದರರ್ಥ ಈ ರೀತಿಯ ಚಾರ್ತುವರ್ಣ ವ್ಯವಸ್ಥೆ ಇರುವವರು"[೨] ಅಂದರೆ ಹಿಂದೂಗಳು ಗೋಲ್ವಾಲ್ಕರ್ ಅವರ ಹೇಳಿಕೆಯನ್ನು ಗಮನಿಸಿದಾಗ ತಿಳಿದುಬರುವ ಅಂಶವೆಂದರೆ ಚಾರ್ತುವರ್ಣ ವ್ಯವಸ್ಥೆಯಲ್ಲಿ ಇರುವವರು ಮಾತ್ರ ಹಿಂದೂಗಳು. ವರ್ಣ ವ್ಯವಸ್ಥೆಯಿಂದ ಹೊರಗುಳಿದವರು ಅಂದರೆ ತಳಸಮುದಾಯಗಳು ಇಂದಿನ ಅರ್ಥದಲ್ಲಿ ಅಸ್ಪೃಶ್ಯರು ಅಥವಾ ದಲಿತರು ಹಿಂದೂಗಳಲ್ಲ ಎಂಬುದು.

ತುಮಕೂರು ಜಿಲ್ಲೆಯಲ್ಲಿ ಮತ ಸ್ವೀಕಾರಕ್ಕೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯವನ್ನು ಕೈಗೊಂಡ ಸಂದರ್ಭದಲ್ಲಿ ಕಂಡುಬಂದವು. ಪ್ರಮುಖ ಅಂಶಗಳು

* ತಳಸಮುದಾಯಗಳೇ ಹೆಚ್ಚು ಮತ ಸ್ವೀಕಾರ ಮಾಡಿರುವುದು.
* ಇತರೆ ಸಮುದಾಯಗಳ ಶೋಷಣೆ, ದಬ್ಬಾಳಿಕೆ ಹಾಗೂ ಜಾತೀಯತೆಯಿಂದ ಹೊರ ಬಂದು ಮತ ಸ್ವೀಕಾರ ಮಾಡಿರುವಂಥದ್ದು.
* ಮತ ಸ್ವೀಕಾರ ಮಾಡಿದ ತಳಸಮುದಾಯಗಳು ಸಾಮಾಜಿಕ ಸಮಾನತೆಯನ್ನು ಪಡೆಯದೆ, ಅದೇ ಜಾತಿಯ ಹೆಸರಿನಲ್ಲಿ ಅಂದರೆ ದಲಿತ ಕ್ರಿಶ್ಚಿಯನ್ ಎಂಬ ಪ್ರತ್ಯೇಕ ಸಮುದಾಯವಾಗಿ ಬದುಕುತ್ತಿರುವುದು.

ಮೇಲ್ಕಂಡ ಫಲಿತಗಳನ್ನು ಗಮನಿಸಿದಾಗ ತಿಳಿದುಬರುವಂತಹ ಅಂಶವೆಂದರೆ "ಹಿಂದೂ ಸಮಾಜ ಅಸಮಾನತೆಯ ತವರು"[೩] ಎಂಬುದು. ಹಿಂದೂ ಧರ್ಮದಲ್ಲಿ ತಳಸಮುದಾಯಗಳು ಹುಟ್ಟಿನಿಂದಲೇ ಜಾತಿಯ ಹೆಸರಿಟ್ಟು ಶೋಷಣೆಗೆ ಒಳಗಾಗುತ್ತಿವೆ. ಭಾರತದ ಸಂದರ್ಭದಲ್ಲಿ ಮತಾಂತರ ನಾಲ್ಕು ಬಗೆಯದ್ದಾಗಿರುತ್ತದೆ. "ಮೊದಲನೆಯದು ಸ್ವ-ಇಚ್ಛೆಯಿಂದ ತನಗೆ ಬೇಕಾದ ಇಷ್ಟವಾದ, ವಿಶ್ವಾಸವಿರುವ ಧರ್ಮವನ್ನು ಆಯ್ಕೆ ಮಾಡಿಕೊಂಡು ಮತಾಂತರಗೊಳ್ಳುವುದು. ಎರಡನೆಯದು ಸಾಮಾಜಿಕ ಸಂದರ್ಭಗಳಿಂದ ಜಾತಿಪದ್ಧತಿ, ಅಸ್ಪೃಶ್ಯತೆಯಂತಹ ಆಚರಣೆಗಳಿಂದ ಬೇಸತ್ತು, ಬಿಡುಗಡೆಗಾಗಿ ಬೇರೆ ಧರ್ಮಕ್ಕೆ ಮತಾಂತರಗೊಳ್ಳುವುದು, ಮೂರನೆಯದು ಪ್ರೇರಣೆಯಿಂದ ಬೇರೆ ಧರ್ಮಕ್ಕೆ ಮತಾಂತರಗೊಳ್ಳುವುದು."[೪] ಭಾರತದ ಸಂದರ್ಭದಲ್ಲಿ ಎರಡನೆಯ ಮತ್ತು ಮೂರನೆಯ ಕಾರಣಗಳಿಂದ ಹೆಚ್ಚಿನದಾಗಿ ಮತಾಂತರಗಳಾಗಿವೆ.

ತಳಸಮುದಾಯಗಳು ತಮ್ಮ ಸೇವೆಗಾಗಿಯೇ ಹುಟ್ಟಿ ಬಂದಿವೆಯೆಂದು ವೈದಿಕ ಧರ್ಮ ಹಾಗೂ ಜಮೀನ್ದಾರಿ ಪ್ರಭುತ್ವ ನಂಬಿಕೊಂಡಿವೆ. "ಬುಡಕಟ್ಟು ಜನರನ್ನು ಕಾಡುಕಳ್ಳರೆಂದು ದೂರೀಕರಿಸಿದೆ."[೫] ವಿಪರ್ಯಾಸವೆಂದರೆ ಇವರನ್ನೆಲ್ಲಾ 'ಹಿಂದೂ' ಎಂಬ ಚೌಕಟ್ಟಿನಲ್ಲಿ ಒಗ್ಗೂಡಿಸುವ ಜಾಣ ತಂತ್ರದ ಪ್ರಯತ್ನವನ್ನು ಪ್ರತಿಯೊಬ್ಬರು ಅರ್ಥ ಮಾಡಿಕೊಳ್ಳಬೇಕಾದ ಅನಿವಾರ್ಯ ಎಂದಿಗಿಂತಲೂ ಇಂದು ಅತ್ಯಗತ್ಯವಾಗಿದೆ. ಮತಾಂತರದ ವಾದ ವಿವಾದಗಳಲ್ಲಿ ಯಾವನೇ ಒಬ್ಬ ಹಿಂದೂ ಕೂಡ ಹಿಂದೂ ಧರ್ಮದಲ್ಲಿ ಯಾವ ದೋಷವಿದೆ ಎಂದು ಸಿದ್ಧ ಮಾಡಿ ತೋರಿಸಲು ಯಾವ ಅಸ್ಪೃಶ್ಯರನ್ನೂ ಆಹ್ವಾನಿಸಲಿಲ್ಲ. ಹಿಂದೂವಿಗೆ ಒಬ್ಬ ಅಸ್ಪೃಶ್ಯ ಯಾವ ರೀತಿಯ ಪ್ರಶ್ನೆಗಳನ್ನು ಹಾಕುತ್ತಾನೆಂಬುದನ್ನು ಅಂಬೇಡ್ಕರ್ ಅವರು ಸಂಪುಟ ೫ರಲ್ಲಿ ಈ ರೀತಿ ಚರ್ಚಿಸುತ್ತಾರೆ. "ಹಿಂದೂ ಧರ್ಮ ಅಸ್ಪೃಶ್ಯರನ್ನು ಮನುಷ್ಯ ಎಂದು ಗುರುತಿಸುತ್ತದೆಯೇ? ಅವರ ಸಮಾನತೆಯನ್ನು ಅದು ಒಪ್ಪಿಕೊಳ್ಳುತ್ತದೆಯೇ? ಸ್ವಾತಂತ್ರ್ಯದ ಲಾಭಗಳನ್ನು ಅವರಿಗೂ ವಿಸ್ತರಿಸುತ್ತದೆಯೇ? ಕನಿಷ್ಠ ಪಕ್ಷ ಅಸ್ಪೃಶ್ಯರು ಮತ್ತು ಹಿಂದೂಗಳ ನಡುವೆ ಸೌಹಾರ್ದ

ಸಂಬಂಧವನ್ನಾದರೂ ಬೆಳೆಸಿಕೊಳ್ಳಲು ಬೋಧಿಸುತ್ತದೆಯೇ? ಅಸ್ಪೃಶ್ಯರು ತಮ್ಮ ಕರುಳ ಬಳ್ಳಿ ಎಂದು ಹಿಂದೂ ಧರ್ಮ ನಿಯಮಗಳಲ್ಲಿ ಸಾರುತ್ತದೆಯೇ? ಅಸ್ಪೃಶ್ಯರನ್ನು ಇತ್ತ ಪಶುಗಳೂ ಅಲ್ಲ, ಅತ್ತ ಮನುಷ್ಯರೂ ಅಲ್ಲ ಎನ್ನುವ ಹಾಗೆ ನಡೆಸಿಕೊಳ್ಳುವುದು ಮಾನವ ಧರ್ಮವೇ ಎಂದು ಹಿಂದೂಗಳಿಗೆ ತಿಳಿಸುತ್ತದೆಯೇ? ಅಸ್ಪೃಶ್ಯರನ್ನು ಕೇವಲ ಮನುಷ್ಯರಂತಾದರೂ ಪರಿಗಣಿಸಲು ಹೇಳುತ್ತದೆಯೇ? ಅವರ ಜೊತೆ ಸ್ನೇಹಪರ ನಡವಳಿಕೆಯನ್ನು ತಮ್ಮಲ್ಲಿ ಅಳವಡಿಸಿಕೊಳ್ಳಲು ಆದೇಶಿಸುತ್ತದೆಯೇ? ಅಸ್ಪೃಶ್ಯರ ಜೊತೆ ಸಾತ್ವಿಕವಾಗಿ ವರ್ತಿಸಲು ಬೋಧಿಸುತ್ತದೆಯೇ? ಅಸ್ಪೃಶ್ಯರನ್ನು ಪ್ರೀತಿಯಿಂದ ಕಾಣಲು ಗೌರವಿಸಲು ಮತ್ತು ಅವರಿಗೆ ಅನ್ಯಾಯ ಬಗೆಯದಿರಲು ಹಿಂದೂಗಳಿಗೆ ವಿವರಿಸಿ ತಿಳಿಸುತ್ತದೆಯೇ? ಕೊನೆಯದಾಗಿ ಹಿಂದೂ ಧರ್ಮ, ಮೇಲು-ಕೀಳುಗಳಿಲ್ಲದಂತೆ ಜೀವನ ಮೌಲ್ಯವನ್ನು ಸಾರ್ವತ್ರೀಕರಣಗೊಳಿಸುತ್ತದೆಯೇ?"[೬] ಹೀಗೆ ಹಲವಾರು ಅಂಶಗಳನ್ನು ಕುರಿತು ಡಾ.ಬಿ.ಆರ್.ಅಂಬೇಡ್ಕರ್ ಅವರು ಚರ್ಚಿಸಿದ್ದಾರೆ.

ಮೇಲಿನ ಎಲ್ಲಾ ಪ್ರಶ್ನೆಗಳಿಗೂ ಯಾವ ಹಿಂದೂ ಸಕಾರಾತ್ಮಕ ಉತ್ತರ ಕೊಡುವ ಧೈರ್ಯ ಮಾಡಲಾರ. ಇದಕ್ಕೆ ವ್ಯತಿರಿಕ್ತವಾಗಿ ಹಿಂದೂಗಳಿಂದ ಅಸ್ಪೃಶ್ಯರ ಮೇಲಾಗುವ ಎಲ್ಲ ಅನ್ಯಾಯಗಳಿಗೂ ಹಿಂದೂ ಧರ್ಮದ ಸಮ್ಮತಿ ಇರುವುದನ್ನು ಕಾಣಬಹುದು. ಎಲ್ಲವೂ ಹಿಂದೂ ಧರ್ಮದ ಹೆಸರಿನಲ್ಲಿ ನಡೆಯುತ್ತದೆ. ಹಿಂದೂ ಧರ್ಮದ ಹೆಸರಿನಲ್ಲಿಯೇ ನ್ಯಾಯ ಸಮ್ಮತವೆನಿಸುತ್ತದೆ.

"ಸಮಾಜದಲ್ಲಿ ಸಮಾನತೆಯನ್ನು ಕಾಣಲು ದಲಿತರ ಕಾಲೋನಿಗಳಿಗೆ ಹೋಗುತ್ತಿದ್ದೇನೆ. ಹಿಂದೂ ಸಮಾಜದಲ್ಲಿ ಅಸಮಾನತೆ ತಾಂಡವವಾಡುತ್ತಿದೆ. ಯಾವುದೇ ಹಿಂದುಳಿದ ವರ್ಗದ ತುಳಿತಕ್ಕೆ ಒಳಗಾದ ಸಮುದಾಯವನ್ನು ಕಡೆಗಣಿಸದೇ ಅವರನ್ನು ಸಮಾನತೆಯಿಂದ ಕಾಣಬೇಕು. ದಲಿತರನ್ನು ಅಪಮಾನಿಸಿದರೆ ಹಿಂದೂ ಸಮಾಜವನ್ನು ಅವಮಾನಿಸಿದಂತೆ. ಈ ವರ್ಗಗಳ ಏಳಿಗೆಗೆ ದುಡಿಯಬೇಕಾಗಿದೆ. ದಲಿತರ ಕೇರಿಗಳಿಗೆ ಪಾದಯಾತ್ರೆ ಮಾಡುವುದರ ಜೊತೆಗೆ ದಲಿತ ಸಮಾಜದವರನ್ನು ನಮ್ಮ ಮಠಕ್ಕೆ ಆಹ್ವಾನಿಸುತ್ತೇವೆ"[೭] ಎಂದು ಪೇಜಾವರ ಮಠದ ವಿಶ್ವೇಶ್ವರ ತೀರ್ಥ ಸ್ವಾಮೀಜಿ ಹೇಳಿದ್ದಾರೆ. ಇದಕ್ಕೆ ಪೂರಕವಾಗಿ ದಲಿತ ಚಿಂತಕರಾದ ಚಿನ್ನಸ್ವಾಮಿ ಸೋಸಲೆ ಅವರು ದಲಿತರು ಮತ್ತು ಮತಾಂತರ: ಒಂದು ಚರ್ಚೆ ಎಂಬ ಲೇಖನದಲ್ಲಿ ಪೇಜಾವರ ಸ್ವಾಮಿಗಳು ದಲಿತರ ಕಾಲೋನಿಗೆ ಭೇಟಿ ನೀಡಿದ ಮಾತ್ರಕ್ಕೆ ಜಾತೀಯತೆ ಹೋಗಲಾರದು. ಹಿಂದೂ ಧರ್ಮದಲ್ಲಿ ಜಾತಿ ಬೇರುಗಳಿರುವುದು ಧರ್ಮದ ಮೂಲದಲ್ಲಿ' ಎಂದು ಹೇಳುತ್ತಾರೆ.

ದಲಿತರ ಕಾಲೋನಿಯಲ್ಲಿ ಪೇಜಾವರ ಮಠದ ವಿಶ್ವೇಶ್ವರತೀರ್ಥ ಸ್ವಾಮೀಜಿ ಪಾದಯಾತ್ರೆ ಮಾಡುವುದರಿಂದ ದಲಿತ ಸಮಾಜದವರನ್ನು ಅವರ ಮಠಕ್ಕೆ ಆಹ್ವಾನಿಸುವುದರಿಂದ ಸಮಾಜ

ದಲ್ಲಿರುವ ಅಸ್ಪೃಶ್ಯತೆ, ಅಸಮಾನತೆಯನ್ನು ಹೋಗಲಾಡಿಸಲು ಸಾಧ್ಯವೇ? ಬದಲಾಗಬೇಕಾಗಿರುವುದು ಜಾತಿವಾದಿಗಳ, ಮತಾಂಧರ ಮನಸ್ಸುಗಳು.

“ಧರ್ಮಜ್ಯೋತಿ ಕಾರ್ಯಕ್ರಮ’ವನ್ನು ಪೀಠದ ವತಿಯಿಂದ ಆಂಧ್ರ ಪ್ರದೇಶದಲ್ಲಿ ಕೈಗೊಳ್ಳಲಾಗಿದೆ. ಹೊಸಪೇಟೆಯಲ್ಲೂ ಆರಂಭಿಸಲಾಗಿದ್ದು, ಸಮಾಜದಲ್ಲಿ ಸಮಾನತೆ ತರುವ ಮೂಲಕ ಬಲಿಷ್ಠ ಸುಸಂಸ್ಕೃತ ಸಮಾಜ ನಿರ್ಮಿಸುವುದು ಈ ಕಾರ್ಯಕ್ರಮದ ಉದ್ದೇಶವಾಗಿದೆ” ಎಂದು ಹಂಪಿ ವಿದ್ಯಾರಣ್ಯ ಭಾರತೀ ಸ್ವಾಮೀಜಿ ಅವರು ದಲಿತರೊಬ್ಬರ ಮನೆಯಲ್ಲಿ ದೀಪ ಹಚ್ಚುವ ಮೂಲಕ ‘ಧರ್ಮಜ್ಯೋತಿ’ ಕಾರ್ಯಕ್ರಮಕ್ಕೆ ಚಾಲನೆ ನೀಡಿದ್ದರು. ದಲಿತರೊಬ್ಬರ ಮನೆಯಲ್ಲಿ ದೀಪ ಹಚ್ಚುವುದಕ್ಕೂ ಮೊದಲು ವಿದ್ಯಾರಣ್ಯ ಪೀಠದ ವಿದ್ಯಾರಣ್ಯ ಭಾರತೀ ಸ್ವಾಮೀಜಿ ಅವರು ಅಸಮಾನತೆಯನ್ನುಂಟುಮಾಡುತ್ತಿರುವ ಮನಸ್ಸುಗಳಲ್ಲಿ ಧರ್ಮದ ಜ್ಯೋತಿಯನ್ನು ಹಚ್ಚುವ ಕೆಲಸಗಳು ಆಗಬೇಕು ಎಂದು ಹೇಳಿದ್ದರು.

ಶಿವರಾತ್ರಿ ಅಂಗವಾಗಿ ಸ್ಥಳೀಯ ಹಿಂದೂ ಹಿತರಕ್ಷಣಾ ಸಮಿತಿಯು ಹುಬ್ಬಳ್ಳಿಯ ಸೋನಿಯಾಗಾಂಧಿ ನಗರದ ಸುಮಾರು ೩೦ ಮನೆಗಳಲ್ಲಿ ಕುಂದಗೋಳ ಹನುಮನಹಳ್ಳಿಯ ಶಿವಬಸವ ಸ್ವಾಮೀಜಿಯವರ ಪಾದಪೂಜೆ ಕಾರ್ಯಕ್ರಮ ನಡೆಯಿತು. ಸುಮಾರು ೧೧ ಮನೆಗಳಲ್ಲಿ ಅನ್ಯ ಧರ್ಮದ ದೇವರಿಗೆ ಸಂಬಂಧಿಸಿದ ವಸ್ತುಗಳು ಕಂಡುಬಂದಿವೆ. ಅವುಗಳನ್ನು ತೆಗೆಯುವಂತೆಯೂ, ಹಿಂದೂ ಧರ್ಮದ ಆಚರಣೆಗಳನ್ನು ಮಾತ್ರ ಪಾಲಿಸುವಂತೆಯೂ ಸ್ವಾಮೀಜಿ ಸೂಚಿಸಿದ್ದಾರೆ. ಐದು ಮನೆಗಳ ನಿವಾಸಿಗಳು ಚಿತ್ರ ಕ್ಯಾಲೆಂಡರ್‌ಗಳನ್ನು ಸ್ವಾಮೀಜಿ ಜೋಳಿಗೆಗೆ ಹಾಕಿದ್ದಾರೆ” ಎಂದು ಹಿತರಕ್ಷಣಾ ಸಮಿತಿಯ ಹನುಮಂತಪ್ಪ ದೊಡ್ಡಮನಿ ತಿಳಿಸಿದ್ದರು.

ಈ ರೀತಿಯ ‘ಘರ್ ವಾಪಸಿ’ ಕಾರ್ಯಕ್ರಮಗಳು ನಡೆಯುತ್ತಿವೆ. ಘರ್ ವಾಪಸಿ ಅನ್ನುವಂಥದ್ದು ದಯಾನಂದ ಸರಸ್ವತಿ ಅವರ ಕಾಲದಿಂದಲೂ ನಡೆಯುತ್ತಾ ಬಂದಿದೆ. ತಳ ಸಮುದಾಯಗಳನ್ನು ಹಿಂದೂ ಧರ್ಮಕ್ಕೆ ಮರು ಮತಾಂತರ ಮಾಡುವುದಾದರೆ ಹಿಂದೂ ಧರ್ಮದಲ್ಲಿರುವಂತಹ ಯಾವ ಜಾತಿಗೆ ಸೇರಿಸುತ್ತಾರೆ. ಹಿಂದೂ ಧರ್ಮ ನಿಂತಿರುವುದು ಜಾತಿಯ ಆಧಾರದಲ್ಲಿ ಎಂಬ ವಿಚಾರವನ್ನು ಕುರಿತು ಆಲೋಚಿಸಬೇಕಾಗಿದೆ.

ಶುದ್ಧೀಕರಣ ಪ್ರಕ್ರಿಯೆ ಅನ್ನುವಂತಹದ್ದು ದಯಾನಂದ ಸರಸ್ವತಿ ಅವರ ಕಾಲದಿಂದಲೂ ನಡೆದುಕೊಂಡು ಬಂದಿರುವುದನ್ನು ಗಮನಿಸಬಹುದಾಗಿದೆ. ಶುದ್ಧೀಕರಣವನ್ನು ಕುರಿತು ಅಂಬೇಡ್ಕರ್ ಅವರು ಈ ರೀತಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. “ಶುದ್ಧೀಕರಣದ ಮೂಲಕ ಶ್ರದ್ಧಾನಂದರು ಹಿಡಿದು ತಂದ ಮಲ್ಕಾನಾದಂಥ ಗುಂಪಿನಿಂದ, ಹಿಂದೂ ಸಮಾಜದಲ್ಲಿ ಮತ್ತೊಂದು ಜಾತಿ ಬಂದು ಸೇರಿತೇ ಹೊರತು ಬೇರೇನೂ ಸಾಧಿಸಲಾಗದು. ಜಾತಿಗಳು ಹೆಚ್ಚಿದಷ್ಟೂ ಪ್ರತ್ಯೇಕತೆ

ಹೆಚ್ಚುತ್ತದೆ ಮತ್ತು ಹಿಂದೂ ಧರ್ಮಕ್ಕೆ ಸ್ಥಿರತೆ ಬರುತ್ತದೆ. ಜಾತಿ ವಿನಾಶದ ಮೂಲಕ ಸಂಘಟನೆ ಸಾಧ್ಯವಾದರೆ ಶುದ್ಧಿ ಅನಗತ್ಯ"[೧೦] ಹಾಗೆಯೇ ಮುಂದುವರೆದು ಅಂಬೇಡ್ಕರ್ ಅವರು ಮತಾಂತರ ಹಾಗೂ ಹಿಂದೂ ಧರ್ಮವನ್ನು ಕುರಿತು ಟೀಕಿಸುತ್ತಾರೆ.

ಹಿಂದೂ ಧರ್ಮಕ್ಕೆ ಪರಿವರ್ತನೆಗೊಂಡವರಿಗೆ ಹಿಂದೂ ಸಮಾಜದಲ್ಲಿ ಏನಾದರೂ ಸ್ಥಾನವಿದೆಯೇ? ಇದು ಹಿಂದೂ ಸಮಾಜ ವ್ಯವಸ್ಥೆ, ಜಾತಿಗಳ ವಿಶಿಷ್ಟ ಗುಣಲಕ್ಷಣವಾಗಿದೆ. "ಪ್ರತಿ ಜಾತಿಯಲ್ಲೂ ಸಕುಲ ವಿವಾಹ ಪದ್ಧತಿಯೇ ಇದ್ದು ಪರಸ್ಪರ ವೈರುಧ್ಯ ಹಾಗೆ ಮುಂದುವರೆದಿದೆ. ಹಿಂದೂ ಧರ್ಮ ಅನೇಕ ಜಾತಿಗಳ ಕೂಟವಾಗಿದ್ದು, ಪ್ರತಿಯೊಂದು ತನ್ನ ಸುತ್ತ ಬೇಲಿ ಕಟ್ಟಿಕೊಂಡಿರುವುದರಿಂದ ಮತಾಂತರಿಗೆ ಅಲ್ಲಿ ಸ್ಥಾನವಿಲ್ಲ. ಏಕೆಂದರೆ ಯಾವ ಜಾತಿಯಲ್ಲೂ ಅವನಿಗೆ ಪ್ರವೇಶವಿಲ್ಲ."[೧೧] ಹಿಂದೂ ಧರ್ಮ ನಿಂತಿರುವುದು ಜಾತಿಯ ಆಧಾರದಲ್ಲಿ. ಜಾತಿ ನಾಶವಾದರೆ ಹಿಂದೂ ಧರ್ಮವೇ ನಾಶವಾಗುತ್ತದೆ. ಪ್ರತಿಯೊಂದು ಜಾತಿಯೂ ತನ್ನದೇ ಆದ ಪ್ರತ್ಯೇಕ ವ್ಯವಸ್ಥೆಯನ್ನು ಹೊಂದಿದೆ. ಜಾತಿ ಅನ್ನುವಂತಹದ್ದು ಹುಟ್ಟಿನ ಆಧಾರದಿಂದಲೇ ನಿರ್ಧಾರವಾಗುತ್ತದೆ.

ಮತ ಸ್ವೀಕಾರವನ್ನು ಕುರಿತು ಅಂಬೇಡ್ಕರ್ ಅವರು ಈ ರೀತಿ ಅಭಿಪ್ರಾಯಪಟ್ಟಿದ್ದಾರೆ. "ಹಿಂದೂಗಳ ದಬ್ಬಾಳಿಕೆ ದೌರ್ಜನ್ಯಗಳನ್ನು ಅಸ್ಪೃಶ್ಯರು ಪರಿಣಾಮಕಾರಿಯಾಗಿ ಎದುರಿಸ ಬೇಕಾದರೆ, ಅವರು ಬೇರೊಂದು ಸಮುದಾಯದ ಜೊತೆಗೆ ಬಾಂಧವ್ಯ ಬೆಳೆಸಿಕೊಳ್ಳುವುದು ಒಂದು ಅತ್ಯುತ್ತಮ ವಿಮೆಯಾಗಿದೆ. ಅಸ್ಪೃಶ್ಯರು ತಮ್ಮ ಪ್ರತ್ಯೇಕ ದೂರವನ್ನು ಕೊನೆಗೊಳಿಸಬೇಕಾದರೆ ಜಾತಿಯನ್ನು ಮಾನ್ಯ ಮಾಡದೆ ಬೇರೊಂದು ಸಮುದಾಯವನ್ನು ಸೇರಲೇಬೇಕು. ಮತಾಂತರ ಅಸ್ಪೃಶ್ಯತೆಯ ಸಮಸ್ಯೆಯನ್ನು ಪರಿಹರಿಸಲು ಸಾಧ್ಯ"[೧೨] ತಳಸಮುದಾಯಗಳು ತಮಗೆ ಯಾವ ಧರ್ಮದಲ್ಲಿ ಸಮಾನತೆ ಸಿಗುತ್ತದೆಯೋ ಆ ಮತವನ್ನು ಸ್ವೀಕಾರ ಮಾಡುವುದರಲ್ಲಿ ಸ್ವಾತಂತ್ರ್ಯವಿದೆ. ಸಂವಿಧಾನಾತ್ಮಕ ಹಕ್ಕು ಇದೆ. ಅವರು ಬೇರೊಂದು ಧರ್ಮವನ್ನು ಸ್ವೀಕಾರ ಮಾಡಬಹುದು.

ಹಿಂದೂ ಧರ್ಮಕ್ಕೆ ಮೊದಲು ಪೆಟ್ಟು ಬಿದ್ದದ್ದು ಕ್ರಿ.ಪೂ. ೬ನೇ ಶತಮಾನದಲ್ಲಿ. ಭಾರತದ ನೆಲದ ಧರ್ಮವನ್ನಿಟ್ಟು ಕೊಂಡಿರುವ ಬೌದ್ಧ ಧರ್ಮದಿಂದ, ಎರಡನೆಯ ಆಪತ್ತು ಒದಗಿದುದು ಮೊಘಲರ ಆಳ್ವಿಕೆಯಲ್ಲಿ. ನಂತರ ಕ್ರಿಶ್ಚಿಯನ್ ಮತ ಪ್ರಚಾರದ ಮಿಷನರಿಗಳಿಂದ. ಪ್ರಪಂಚಲ್ಲಿಯೇ ದೊಡ್ಡದಾದ ಪ್ರಜಾಪ್ರಭುತ್ವದಡಿಯಲ್ಲಿ ಬದುಕುತ್ತಿದ್ದರೂ ತಳಸಮುದಾಯಗಳಿಗೆ ಸಮಾನತೆ ಎಂಬುದು ಗಗನ ಕುಸುಮವಾಗಿರುವುದನ್ನು ಕಾಣಬಹುದಾಗಿದೆ. ತಳಸಮುದಾಯಗಳ ಆತ್ಮಗೌರವದ

ಪ್ರತೀಕಗಳನ್ನು ವಿರೂಪಗೊಳಿಸುವಂತಹ ಅನ್ಯಾಯಗಳು ಆಗುತ್ತಿವೆ. ಬ್ರಾಹ್ಮಣ್ಯಶಾಹಿಯ ಸಂಸತ್ತು ಎನಿಸಿದ ದೇಗುಲ ವ್ಯವಸ್ಥೆಯಲ್ಲಿ ಇಂದಿನವರೆಗೂ ತಳಸಮುದಾಯಗಳ ಪರ ಪರಿವರ್ತನೆಗಳು ಆಗಿಲ್ಲದಿರುವುದನ್ನು ಗಮನಿಸಬಹುದಾಗಿದೆ.

ಇಂದು ಧರ್ಮದ ಹೆಸರಿನಲ್ಲಿ, ಮತಾಂತರದ ಹೆಸರಿನಲ್ಲಿ ಜನಸಾಮಾನ್ಯರ ಕೊಲೆಗಳು ಮಹಿಳೆಯರ ಮೇಲೆ ಸಾಮೂಹಿಕ ಅತ್ಯಾಚಾರಗಳು, ಆರಾಧನಾ ಸ್ಥಳಗಳ ಮೇಲೆ ಆಕ್ರಮಣಗಳು ನಡೆಯುತ್ತಿವೆ. ಇಡೀ ಊರಿಗೆ ಬೆಂಕಿ ಹಚ್ಚಿ ಜನರನ್ನು ನಿರಾಶ್ರಿತರನ್ನಾಗಿಸಿ ಶಿಬಿರಗಳಲ್ಲಿ ಬದುಕು ನೂಕುವಂತಹ ಪರಿಸ್ಥಿತಿಗೆ ಅವರನ್ನು ತಳ್ಳಲಾಗಿದೆ. ಒರಿಸ್ಸಾದಲ್ಲಿ ನಡೆದ ಘಟನೆ ಬ್ರಾಹ್ಮಣ್ಯದಿಂದ ಕೂಡಿರುವ ಜನರ ಕ್ರೌರ್ಯ ಮತಾಂಧತೆಗೆ ಒಂದು ಉದಾಹರಣೆ. ಮತಾಂತರದ ಆರೋಪವನ್ನು ಹೊರಿಸಿ ಕ್ರೈಸ್ತ ಧರ್ಮಗುರುಗಳ ಮೇಲೆ ಆಕ್ರಮಣ ಮಾಡಿದ್ದಲ್ಲದೆ ಕ್ರೈಸ್ತ ಸನ್ಯಾಸಿನಿಯನ್ನು ಹಗಲಲ್ಲೇ ಅತ್ಯಾಚಾರ ಮಾಡುವಷ್ಟು ಇವರ ಮನಸ್ಸುಗಳು ವಿಷಮಯಗೊಂಡಿದ್ದು ಹೇಗೆ?

ಮತಾಂತರ ವಿಷಯಕ್ಕೆ ಬಂದರೆ ಯಾಕೆ ತಳಸಮುದಾಯಗಳು ಮತಾಂತರಗೊಳ್ಳುತ್ತಿವೆ ಎಂಬುದು ವಿಶ್ಲೇಷಣೆಗೆ ಒಳಪಡಿಸಬೇಕಾದುದು ಮಹತ್ವವಾದ ವಿಷಯವಾಗಿದೆ. ಒಂದು ಸಮುದಾಯ ತಾನು ಬದುಕುತ್ತಿರುವ ಸಮುದಾಯದಲ್ಲೇ ನೆಮ್ಮದಿಯಿಂದ ಬದುಕು ಸಾಗಿಸುವ ವಾತಾವರಣ ಇದ್ದರೆ ತಮ್ಮ ಧಾರ್ಮಿಕ ನಂಬಿಕೆಯನ್ನು ಬದಲಾಯಿಸಲು ಸಿದ್ಧರಾಗುತ್ತಾರೆಯೇ? ತಾನು ಹುಟ್ಟಿ ಬೆಳೆದ ಸಮಾಜ, ಧಾರ್ಮಿಕ ನಂಬಿಕೆ, ಸಂಸ್ಕೃತಿ ಎಲ್ಲವನ್ನು ತ್ಯಜಿಸಿ ಆ ಸಮುದಾಯ ಇನ್ನೊಂದು ಧಾರ್ಮಿಕ ನಂಬಿಕೆಯತ್ತ ವಾಲಬೇಕಾದರೆ ಆ ಸಮುದಾಯ ಸಮಾಜದಲ್ಲಿ ಅಂತಹ ನೋವುಂಡಿರಬೇಕಲ್ಲವೆ? ಮೊದಲಾದ ಅಂಶಗಳನ್ನು ಚರ್ಚೆಗೆ ಒಳಪಡಿಸಬೇಕಾಗಿದೆ.

ಜಾತಿಯ ಏಣಿ ಮೆಟ್ಟಲಿನ ತಳಭಾಗದಲ್ಲಿರುವ ತಳಸಮುದಾಯಗಳು ತಮ್ಮ ಮೇಲಾಗುತ್ತಿರುವ ಮಾನಸಿಕ ದೌರ್ಜನ್ಯ ಹಾಗೂ ದೈಹಿಕ ಹಲ್ಲೆಗಳಿಂದ ಪಾರಾಗುವ ಏಕೈಕ ಮಾರ್ಗವಾಗಿ ಮತಾಂತರಗೊಳ್ಳುತ್ತಿವೆ. ಮತಾಂತರ ಅನ್ನುವಂಥದ್ದು ಸ್ವಾಭಿಮಾನದ ಸಂಕೇತವಾಗಿರುವುದನ್ನು ಗಮನಿಸಬಹುದಾಗಿದೆ. ಅಂಬೇಡ್ಕರ್ ಅವರು ಮತಾಂತರವನ್ನು ಕುರಿತು ತಳಸಮುದಾಯಗಳಿಗೆ ಸಂದೇಶಗಳನ್ನು ನೀಡಿದರು. ಅವುಗಳೆಂದರೆ;

೧. ಮನುಷ್ಯತ್ವ ಸಂಪಾದಿಸುವುದಕ್ಕಾಗಿ

೨. ಸಂಘಟನೆ ಮಾಡಿಕೊಳ್ಳುವುದಕ್ಕಾಗಿ

೩. ಸಾಮರ್ಥ್ಯ ಸಂಪಾದಿಸಿಕೊಳ್ಳುವುದಕ್ಕಾಗಿ

೪. ಸಮಾನತೆಗಾಗಿ

೫. ಸ್ವಾತಂತ್ರ್ಯಕ್ಕಾಗಿ ಮತ ಸ್ವೀಕಾರ ಮಾಡಬೇಕು ಎಂದು ಹೇಳುತ್ತಾರೆ.

ಮತಾಂತರ ಕುರಿತಂತೆ ಸರ್ಕಾರ ಸಂವಿಧಾನದ ೭೫ನೇ ವಿಧಿಯನ್ವಯ ಪ್ರತಿಯೊಬ್ಬ ನಾಗರಿಕರೂ ತಮಗಿಷ್ಟವಾದ ಧರ್ಮದಲ್ಲಿ ವಿಶ್ವಾಸವಿರಿಸಲು, ಅದನ್ನನುಸರಿಸಿ ಜೀವಿಸಲು, ಪ್ರಚಾರ ಮಾಡಲು ಮೂಲಭೂತ ಅವಕಾಶವಿದೆ. ತಾನು ಯಾವ ಧರ್ಮದಲ್ಲಿ ವಿಶ್ವಾಸವಿಡಬೇಕು. ಯಾವ ಜೀವನ ಕ್ರಮವನ್ನು ಪಾಲಿಸಬೇಕು ಎಂಬುದು ಆಯಾ ವ್ಯಕ್ತಿಯ ಸ್ವತಂತ್ರ ಆಯ್ಕೆಗೆ ಬಿಟ್ಟ ವಿಚಾರ ಮತ್ತು ಹಕ್ಕು ಕೂಡ ಆಗಿದೆ. ಅದನ್ನು ಪ್ರಶ್ನಿಸುವ, ವಿರೋಧಿಸುವ ಹಕ್ಕು ಯಾರಿಗೂ ಇಲ್ಲ. ಪ್ರತಿಯೊಬ್ಬ ಭಾರತೀಯನಿಗೂ ಸಂವಿಧಾನ ಧಾರ್ಮಿಕ ಸ್ವಾತಂತ್ರ್ಯವನ್ನು ನೀಡಿರುವುದನ್ನು ಕಾಣಬಹುದಾಗಿದೆ. ಭಾರತದಲ್ಲಿ ತಳಸಮುದಾಯಗಳು ಇಸ್ಲಾಂ, ಕ್ರಿಶ್ಚಿಯನ್ ಹಾಗೂ ಬೌದ್ಧ ಧರ್ಮಕ್ಕೆ ಮತಾಂತರಗೊಂಡಿದ್ದರೆ ಅದಕ್ಕೆ ಪ್ರಮುಖ ಕಾರಣ ಮತಸ್ವೀಕಾರ ಮಾಡಿದವರ ಸಾಮಾಜಿಕ ಸ್ಥಿತಿಗತಿಗಳು. ಸಮಾನತೆಗಾಗಿ, ನೆಮ್ಮದಿಗಾಗಿ ಹೊಸ ಧರ್ಮಗಳತ್ತ ತಳಸಮುದಾಯಗಳು ಆಕರ್ಷಿತಗೊಳ್ಳುತ್ತಿರುವುದನ್ನು ಗಮನಿಸಬಹುದಾಗಿದೆ. ಯಾವ ಧರ್ಮದಲ್ಲಿ ಸಮಾನತೆ ಇದೆಯೋ ಆ ಧರ್ಮವನ್ನು ಸ್ವೀಕರಿಸಲು ಸ್ವಾತಂತ್ರ್ಯವಿದೆ.

### ೫.೧. ಕ್ರೈಸ್ತ ಧರ್ಮ

ಸ್ವಾತಂತ್ರ್ಯಪೂರ್ವದಲ್ಲಿ ಕ್ರೈಸ್ತ ಮಿಶನರಿಗಳು ಅತ್ಯಂತ ರಭಸದ ಪ್ರಚಾರ ಮತ್ತು ಮತಾಂತರ ಕಾರ್ಯಕ್ರಮಗಳಲ್ಲಿ ನಿರತರಾಗಿರುತ್ತಿದ್ದುದನ್ನು ಹಳ್ಳಿಗಳಲ್ಲಿ ಸಹ ನೋಡಿದವರುಂಟು. ಬ್ರಿಟಿಷ್‌ರ ಪ್ರಭುತ್ವವು ಅವರಿಗೆ ಒಂದು ಬಗೆಯ ರಕ್ಷಣೆಯನ್ನು, ಪ್ರೋತ್ಸಾಹವನ್ನು ಕೊಡು ವಂತಿತ್ತೆಂಬುದೇ ಇದರ ಕಾರಣ. ಭಾರತವು ಸ್ವತಂತ್ರವಾದ ಬಳಿಕ ಮಿಶನರಿಗಳ ಪ್ರಚಾರವೂ ಪ್ರಭಾವವೂ ಕೆಲಮಟ್ಟಿಗೆ ಕಡಿಮೆಯಾಯಿತು. ಜಾತ್ಯಾತೀತ ಧೋರಣೆಯನ್ನು ಭಾರತ ಸರ್ಕಾರ ಹೊಂದಿರುವುದರಿಂದಾಗಿ ಮಿಶನರಿಗಳಿಗೆ ಪ್ರೋತ್ಸಾಹವು ಸರ್ಕಾರದ ಮಟ್ಟದಲ್ಲಿ ಸಿಗಲಿಲ್ಲ. ಆದರೆ ಮಿಶನರಿಗಳು ನಡೆಸುವ ಮತಾಂತರ ಮತ್ತಿತರ ಕಾರ್ಯಕ್ರಮಗಳು ಸಾರ್ವತ್ರಿಕವಾಗಿ ಚೈತನ್ಯವನ್ನು ಕಳೆದುಕೊಂಡಿವೆ ಎಂಬುದು ಇದರ ಅರ್ಥವಲ್ಲ. ದಾರಿದ್ರ್ಯ, ಅಸಂತುಷ್ಟಿ ಮತ್ತು ಅಜ್ಞಾನಗಳಿರುವಲ್ಲಿ ಕಮ್ಯುನಿಸಂ ಹೇಗೆ ಪ್ರಭಾವಶಾಲಿಯಾಗುತ್ತಿರುವುದೋ ಮಿಶನರಿಗಳು ಪ್ರತಿಪಾದಿಸುತ್ತಿರುವ "ಇವಾಂ ಜೆಲಿಸಂ"(ಅಂದರೆ ಧರ್ಮಪ್ರಚಾರ) ಸಹ ಅದೇ ರೀತಿಯ ವಾತಾವರಣದಲ್ಲಿ ತನ್ನ ಆದ್ಯತೆಯನ್ನು ಪ್ರದರ್ಶಿಸುತ್ತಿರುವುದು ಕಂಡುಬರುತ್ತದೆ.

**ಆಪಾದನೆಗಳ ವಿಚಾರಣೆ**

ಮಧ್ಯಪ್ರದೇಶದ ಸರ್ಕಾರವು ಮಿಶನರಿಗಳ ಮೇಲಿನ ಆಪಾದನೆಗಳನ್ನು ಕೇಳಿ ಬೇಸತ್ತು ೧೯೫೪ನೇ ಏಪ್ರಿಲ್‌ನಲ್ಲಿ ಒಂದು ವಿಚಾರಣಾ ಸಮಿತಿಯನ್ನು ನೇಮಿಸಿತು. "ನಾಗಪುರ ಹೈಕೋರ್ಟ್‌ನ ನಿವೃತ್ತ ಮುಖ್ಯ ನ್ಯಾಯಾಧೀಶರಾಗಿದ್ದ ಡಾ.ಎಂ.ಬಿ.ನಿಯೋಗಿ ಅವರು ಈ ಸಮಿತಿಯ ಅಧ್ಯಕ್ಷರಾಗಿದ್ದರು. ವರ್ಧಾದ ವಾಣಿಜ್ಯ ಕಾಲೇಜಿನ ಪ್ರಾಧ್ಯಾಪಕರಾದ ಶ್ರೀ ಎಸ್.ಕೆ.ಜಾರ್ಜ್ ಎಂಬುವರನ್ನೊಳಗೊಂಡು ಒಟ್ಟು ಐದು ಮಂದಿ ಇತರ ಸದಸ್ಯರೂ ಈ ಸಮಿತಿಯಲ್ಲಿದ್ದರು. ಈ ಸಮಿತಿಯು ಕಳೆದ ಎರಡು ವರ್ಷಗಳಲ್ಲಿ ೬೭ ಕೇಂದ್ರಗಳನ್ನು ಸಂದರ್ಶಿಸಿ, ೭೦೦ ಗ್ರಾಮಗಳ ೧೧೩೬೦ ಜನರನ್ನು ಭೇಟಿ ಮಾಡಿತು. ೩೭೫ ಜನರ ಲಿಖಿತ ಹೇಳಿಕೆಗಳನ್ನು ಪಡೆಯಿತು."[೧೩] ಭಾರತದಲ್ಲಿ ಅದರಲ್ಲೂ ಮುಖ್ಯವಾಗಿ ಮಧ್ಯಪ್ರದೇಶ ರಾಜ್ಯದಲ್ಲಿ, ಕ್ರೈಸ್ತ ಮಿಶನರಿಗಳು ನಡೆಸುತ್ತಿರುವ ಚಟುವಟಿಕೆಯನ್ನು ಸಂಪೂರ್ಣವಾಗಿ ಸಮಾಲೋಚಿಸಿ ೧೮೨ ಪುಟದಷ್ಟು ದೀರ್ಘವಾದ ಸರ್ವಾನುಮೋದನೆಯ ವರದಿಯನ್ನು ಸರಕಾರಕ್ಕೆ ಸಮಿತಿಯು ಒಪ್ಪಿಸಿರುತ್ತದೆ. ತನ್ನ ವರದಿಯಲ್ಲಿ ಸಮಿತಿಯು ಆಧುನಿಕ ಭಾರತದ ಜೀವನವನ್ನು ರೂಪಿಸುವುದರಲ್ಲಿ ಕ್ರೈಸ್ತ ಮಿಶನರಿಗಳು ವಹಿಸಿದ ಪಾತ್ರವನ್ನು ಮುಕ್ತಕಂಠದಿಂದ ಪ್ರಶಂಸಿಸಿದೆ; ಆದರೆ ಮಿಶನರಿಗಳು ಕೈಗೊಂಡಿರುವ ಮತಾಂತರ ಕಾರ್ಯಕ್ರಮವನ್ನು ಮಾತ್ರ ಅದು ಆಕ್ಷೇಪಿಸಿದೆ.

ಸಾಮಾನ್ಯ ಮಾತಿನಲ್ಲಿ ಧರ್ಮೋಪದೇಶವನ್ನು ಮಾಡುತ್ತಿರುವ ಮಿಶನರಿಗಳ ಕಾರ್ಯಕ್ರಮ ಗಳು "ಆಧ್ಯಾತ್ಮಿಕ ಉದ್ದೇಶಗಳಿಂದಲ್ಲ. ಪಾಶ್ಚಾತ್ಯರ ಶ್ರೇಷ್ಠತ್ವವನ್ನು ಪುನರುಜ್ಜೀವಿಸಿ ಕ್ರೈಸ್ತ ಜಗತ್ತನ್ನು ಸಂಸ್ಥಾಪಿಸುವ ಧ್ಯೇಯದಿಂದ ಪ್ರಚೋದಿತವಾಗಿದೆ"[೧೪] ಎಂದು ಸಮಿತಿಯು ಅಭಿಪ್ರಾಯಪಟ್ಟಿದೆ. ಕ್ರೈಸ್ತೇತರ ಸಮಾಜಗಳ ಐಕ್ಯಕ್ಕೆ ಅಪಾಯವನ್ನುಂಟುಮಾಡಿ ಅಲ್ಲಲ್ಲಿ ಕ್ರೈಸ್ತ ಗುಂಪುಗಳನ್ನು ಸೃಷ್ಟಿಸುವುದೇ ಮಿಶನರಿಗಳ ಗುರಿಯಾಗಿದೆ ಎಂದು ಸಮಿತಿಯು ಆರೋಪಿಸಿದೆ. ಆದಿವಾಸಿಗಳ ಸಾಮೂಹಿಕ ಮತಾಂತರವು ನೀಚ ಉದ್ದೇಶದಿಂದ ನಡೆಯುತ್ತಿದ್ದು ರಾಜ್ಯದ ಭದ್ರತೆಗೆ ತೀರ ಅಪಾಯಕಾರಿಯಾದ ಚಟುವಟಿಕೆ ಆಗಿದೆ ಎಂದು ಸಮಿತಿಯು ಭಾವಿಸಿದೆ. ಜಾಗತಿಕ ಇತಿಹಾಸದ ವಿಶಾಲವಾದ ಹಿನ್ನೆಲೆಯಲ್ಲಿ ಕ್ರೈಸ್ತ ಮಿಶನರಿಗಳ ಚಟುವಟಿಕೆಯನ್ನು ಸಮೀಕ್ಷಿಸಬೇಕಾಗಿದೆ ಎನ್ನುತ್ತಾ ಸಮಿತಿಯು ಸದ್ಯದ ಪರಿಸ್ಥಿತಿಯನ್ನು "ಕೆಥೋಲಿಕ್ ಚರ್ಚ್‌ನ್ನು ಪ್ರತಿನಿಧಿಸುವ ಪೋಪರ ಅಧಿಪತ್ಯ ಮತ್ತು ಅಮೇರಿಕದ ಪ್ರಜಾಪ್ರಭುತ್ವ ಇವೆರಡೂ ಕಮ್ಯುನಿಸಮ್ಮಿನ ಉಚ್ಚಾಟನೆಯ ಹೆಸರಿನಲ್ಲಿ ಕ್ರೈಸ್ತ ಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯಕ್ರಮವನ್ನು ಮುಂದೊತ್ತುವುದರಲ್ಲಿ ಭುಜಕ್ಕೆ ಭುಜವೊಡ್ಡಿ ನಡೆಯುವಂತಿದೆ; ಪೋಪರ ಅಧಿಪತ್ಯಕ್ಕೆ ಧಾರ್ಮಿಕ

ಸಾಮ್ರಾಜ್ಯವನ್ನು ವಿಸ್ತರಿಸುವ ಆಸೆ; ಅಮೇರಿಕದ ಪ್ರಜಾಪ್ರಭುತ್ವಕ್ಕೆ ಜಗತ್ತಿನ ಧುರೀಣತ್ವದ ಮೇಲೆ ಕಣ್ಣು"[೧೫] ಎಂಬುದಾಗಿ ಸಮಿತಿಯು ಸ್ಪಷ್ಟ ಮಾತುಗಳಲ್ಲಿ ತಿಳಿಸಿದೆ.

## ಹಿಂದುಳಿದವರೇ ಗುರಿ

ಕ್ರೈಸ್ತ ಮಿಶನರಿಗಳ ಚಟುವಟಿಕೆಯು ಅತ್ಯಂತ ವ್ಯಾಪಕ ಸ್ವರೂಪವನ್ನು ಹೊಂದಿದೆಯೆಂದೂ 'ರಾಜ್ಯದೊಳಗೊಂದು ರಾಜ್ಯ'ವೆಂಬ ರೀತಿಯಲ್ಲಿ ಅದು ಸಂಘಟನೆ ಹೊಂದಿದೆಯೆಂದೂ ಸಮಿತಿಯು ಎಚ್ಚರಿಸಿದೆ. "ಸದ್ಯಕ್ಕೆ ಭಾರತದಲ್ಲಿ ವಿದೇಶಗಳಿಂದ ಬಂದ ೪೮೦೦ ಕ್ರೈಸ್ತ ಮಿಶನರಿಗಳಿದ್ದಾರೆ; ೧೯೫೧ರಿಂದೀಚೆಗೆ ಈ ದೇಶಕ್ಕೆ ಬಂದವರ ಸಂಖ್ಯೆಯೇ ಐದುನೂರಕ್ಕಿಂತ ಹೆಚ್ಚಾಗಿದೆ. ಇದರಲ್ಲಿ ಮಧ್ಯಪ್ರದೇಶ ರಾಜ್ಯವೊಂದರಲ್ಲಿಯೇ ಸುಮಾರು ೪೦೦ ಮಂದಿ ಇದ್ದಾರೆ. ಸುಮಾರು ೩೦ ಬೇರೆ ಬೇರೆ ಕ್ರೈಸ್ತಧರ್ಮ ಪ್ರಸಾರ ಸಂಘಗಳು ಇಲ್ಲಿ ಕೆಲಸ ಮಾಡುತ್ತಿವೆ. ರಾಜ್ಯದ ೨೧೦ ಲಕ್ಷ ಪ್ರಜೆಗಳಲ್ಲಿ ಶೇಕಡ ೫೭ರಷ್ಟಿರುವ 'ಹಿಂದುಳಿದ' ವರ್ಗಗಳ ಜನರೇ ಈ 'ಆಕ್ರಮಣಕಾರಿ' ಧರ್ಮ ಪ್ರಚಾರದ ಗುರಿಯಾಗಿದ್ದಾರೆ"[೧೬] ಎಂದು ಸಮಿತಿ ವರದಿ ನೀಡಿದೆ. ಸಮಿತಿಗೆ ಕ್ರೈಸ್ತ ಸಮಾಜದ ಮೇಲೆ ದುರಾಭಿಪ್ರಾಯವಿದೆ ಎಂದು ಭಾವಿಸಲಾಗದು. ಏಕೆಂದರೆ ಮೊದಲೇ ಹೇಳಿದಂತೆ ಮತಾಂತರ ಮತ್ತು ರಾಜಕೀಯ ದುರುದ್ದೇಶಗಳನ್ನು ಬಿಟ್ಟು ಉಳಿದ ಬಗೆಯಲ್ಲಿ ಮಿಶನರಿಗಳು ನಡೆಸಿದ ಚಟುವಟಿಕೆಗಳಿಂದ ಭಾರತಕ್ಕೆ ಪ್ರಯೋಜನವಾಗಿದೆ ಎಂಬುದನ್ನು ತಾತ್ವಿಕವಾಗಿ ಒಪ್ಪಿಕೊಂಡಿದೆ.

ತುಮಕೂರು ಜಿಲ್ಲೆಯನ್ನು ತೆಗೆದುಕೊಂಡರೆ, ಇಲ್ಲಿಯ ವೈದ್ಯಕೀಯ ಚಿಕಿತ್ಸೆ, ಶಿಕ್ಷಣ, ಕೈಗಾರಿಕೆಗಳ ಕ್ಷೇತ್ರದಲ್ಲಿ ಮಿಶನರಿಗಳು ವಹಿಸಿದ ಪಾತ್ರ ಪ್ರಶಂಸಾರ್ಹ. ಕಿಟೆಲ್‌ರ ಕನ್ನಡ ನಿಘಂಟು ಹಾಗೂ ಅನೇಕ ಶಾಲಾ ಕಾಲೇಜುಗಳು ಮಿಶನರಿಗಳ ಸಾಹಸದ ದ್ಯೋತಕವಾಗಿದೆ. "ಆಸ್ಪತ್ರೆಗಳಲ್ಲೂ, ಆರೋಗ್ಯಧಾಮಗಳಲ್ಲೂ, ವೈದ್ಯಕೀಯ ನೆರವಿನೊಡನೆ ಧರ್ಮೋಪದೇಶವನ್ನು ನೀಡುತ್ತಿದ್ದರು. ಅನಾಥ ಬಾಲಕ-ಬಾಲಕಿಯರಿಗೆ ಹಾಗೂ ತಳಸಮುದಾಯಗಳಿಗೆ ಹಣಕಾಸಿನ ನೌಕರಿ ಹಾಗೂ ಮೇಲ್ಮಟ್ಟದ ಜೀವನದ ಆಸೆಯನ್ನು ತೋರಿಸಿ ಅವರನ್ನು ಮತಾಂತರಿಸುತ್ತಿದ್ದರು."[೧೭] ಮಿಶನರಿಗಳ ಕಾರ್ಯಗಳು ಗುಡ್ಡಗಾಡು ಪ್ರದೇಶಗಳಲ್ಲಿ ನಿರಾತಂಕವಾಗಿ, ನಿರಂತರವಾಗಿ ನಡೆಯಿತು. ಮಿಶನರಿಗಳು ಬುಡಕಟ್ಟುಗಳಿಗೆ ಆಧುನಿಕ ಜ್ಞಾನವನ್ನು, ವೈಜ್ಞಾನಿಕ ಚಮತ್ಕಾರಗಳ ಪರಿಚಯವನ್ನು ಒದಗಿಸಿಕೊಟ್ಟರು. ಶಾಲೆಗಳನ್ನು ಆಸ್ಪತ್ರೆಗಳನ್ನು ತೆರೆದರು. ಪರಿಣಾಮವಾಗಿ ಗುಡ್ಡಗಾಡು ಜನರಲ್ಲಿಯೇ ಕೆಲವು ಧುರೀಣರನ್ನು ಕಾಣುವಂತಾಯಿತು.

ಮಿಶನರಿಗಳು ಶಿಕ್ಷಣ ಮತ್ತು ವಿಜ್ಞಾನದ ಪ್ರಯೋಜನವನ್ನು ಕೊಡುವುದರ ಮೂಲಕ ತಳಸಮುದಾಯಗಳನ್ನು ಸಮಾಜದ ಮುಖ್ಯವಾಹಿನಿಗೆ ತರುವ ಪ್ರಯತ್ನವನ್ನು ಮಾಡಿದವು.

ಮಿಶನರಿಗಳು ತಮ್ಮ ಬರವಣಿಗೆಗಳಲ್ಲಿ ಜಾತಿ ವ್ಯವಸ್ಥೆಯನ್ನು ಖಂಡಿಸಿರುವುದನ್ನು ಕಾಣಬಹುದು. ಕ್ರೈಸ್ತ ಸಮಾಜದಲ್ಲಿ ಎಲ್ಲರೂ ಸಮಾನರು ಹಾಗೂ ಕ್ರೈಸ್ತ ಭ್ರಾತೃತ್ವದ ಆಧಾರದಲ್ಲಿ ಎಲ್ಲರೂ ಸಮನವಾಗಿ ಜೀವಿಸಬೇಕೆಂದು ಸಲಹೆ ನೀಡುವುದನ್ನು ನೋಡಬಹುದಾಗಿದೆ. ಡೆನಿಸ್ ಫೆರ್ನಾಡಿಸ್ ಅವರು ಕ್ರೈಸ್ತ ಮಿಶನರಿಗಳನ್ನು ಕುರಿತು ಈ ರೀತಿ ಹೇಳಿದ್ದಾರೆ.

ಸ್ಥಳೀಯರನ್ನು ಕ್ರೈಸ್ತರನ್ನಾಗಿಸುವ ಸಂದರ್ಭ ಬಂದಾಗ ಅವರು ಮೇಲ್ವರ್ಗದವರನ್ನು ಮೊದಲು ಓಲೈಸಲು ಪ್ರಯತ್ನಪಟ್ಟಿರುವುದು ಸ್ಪಷ್ಟವಾಗಿ ಕಾಣುತ್ತೇವೆ ಎಂದು ಹೇಳಿದ್ದಾರೆ. ಈ ಹೇಳಿಕೆಯನ್ನು ಸಮರ್ಥಿಸುವುದಕ್ಕೆ 'ಕರ್ನಾಟಕದಲ್ಲಿ ಕ್ರೈಸ್ತಧರ್ಮ' ಎಂಬ ಲೇಖನದಲ್ಲಿ ಕೆಲವು ಹೇಳಿಕೆಗಳನ್ನು ಉಲ್ಲೇಖ ಮಾಡಿದ್ದಾರೆ. "೧೮೪೪ರ ಬಾಸೆಲ್ ಮಿಷನ್ನಿನ ವರದಿಯಲ್ಲಿ ಮಂಗಳೂರಿನಲ್ಲಿ ಕ್ರೈಸ್ತರಾದವರ ಅಂಕಿ ಅಂಶಗಳನ್ನು ನೀಡುವಾಗ ತಮ್ಮಲ್ಲಿಗೆ ಬಂದು ಕ್ರೈಸ್ತರಾದವರಲ್ಲಿ ಯಾರೊಬ್ಬರೂ ಮೇಲ್ಜಾತಿಗೆ ಸೇರಿದವರಿಲ್ಲ, ಎಲ್ಲರೂ ಬಿಲ್ಲವ ಜಾತಿಗೆ ಸೇರಿದವರು ಎಂಬ ನಿರಾಶೆಯ ಮಾತುಗಳು ಕೇಳಿಬರುತ್ತವೆ."[೧೮]

"ತತ್ವಶಾಸ್ತ್ರವನ್ನು ಚೆನ್ನಾಗಿ ಅರ್ಥೈಸಲು ಬ್ರಾಹ್ಮಣರಿಗೆ ಮಾತ್ರ ಸಾಧ್ಯ ಹಾಗೂ ಕೆಳಜಾತಿಯ ತತ್ವಶಾಸ್ತ್ರ ಬರೇ ಹೊಟ್ಟೆ ತುಂಬಿಸುವುದು ಮಾತ್ರ ಎಂದು ಮಿಷನರಿಗಳು ನಂಬಿದ್ದವು. ಮುಂದೆ ಕೆಳಜಾತಿಯವರು ಮಾತ್ರ ಕ್ರೈಸ್ತರಾಗಲು ಮುಂದೆ ಬಂದರೆ ಮಿಷನ್ನಿನ ಪ್ರತಿಷ್ಠೆಗೆ ಧಕ್ಕೆ ಬರುವುದು ಮಾತ್ರವಲ್ಲದೆ, ಮೇಲ್ಜಾತಿಯವರು ಎಂದೂ ಕ್ರೈಸ್ತರಾಗಲು ಹತ್ತಿರ ಸುಳಿಯಲಾರರು ಎಂಬ ಭಯವೂ ಅವರನ್ನು ಕಾಡುತ್ತಿತ್ತು."[೧೯] ಇಲ್ಲಿ ಡೆನಿಸ್ ಫೆರ್ನಾಂಡಿಸ್ ಅವರು ಕೆಳಜಾತಿಯ ಜನರ ಸಾಮಾಜಿಕ ಸ್ಥಿತಿಗತಿಯ ಬಗ್ಗೆ ಅನುಕಂಪ ತೋರಿಸಿದರೂ, ಮಿಷನರಿಗಳು ಕೆಳ ಜಾತಿಯಿಂದ ಕ್ರೈಸ್ತರಾದವರನ್ನು ಇಷ್ಟಪಡದಿರಲು ಮಿಶನರಿಗಳ ಪೂರ್ವಪರವೂ ಒಂದು ಕಾರಣವಾಗಿದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ರಂಗರಾಜು ಅವರು "ಬ್ರಾಹ್ಮಣರು ಕೂಡ ಕ್ರೈಸ್ತರಾಗಿದ್ದಾರೆ"[೨೦] ಎಂದು ಹೇಳಿದ್ದಾರೆ.

ಒಟ್ಟಾರೆಯಾಗಿ ಹೇಳುವುದಾದರೆ ಮಿಶನರಿಗಳು ಮೇಲ್ವರ್ಗಗಳನ್ನು ಮತಾಂತರಿಸುವುದಕ್ಕೆ ಪ್ರಯತ್ನ ಪಟ್ಟವು ಎಂಬ ಅಂಶವನ್ನು ಗಮನಿಸಬಹುದಾಗಿದೆ.

"ಕ್ರೈಸ್ತರು ತಮ್ಮ ಮಿಶನರಿಗಳ ಮೂಲಕ ಅಸ್ಪೃಶ್ಯರ ಪ್ರಾಥಮಿಕ ಅವಶ್ಯಕಗಳಾಗಿದ್ದ ಆಹಾರ, ಬಟ್ಟೆ, ಆರೋಗ್ಯ, ಶಿಕ್ಷಣಕ್ಕೆ ಹೆಚ್ಚಿನ ಗಮನ ನೀಡಿದರು. ಶತಶತಮಾನಗಳಿಂದ ಶಿಕ್ಷಣದಿಂದ ವಂಚಿತರಾಗಿದ್ದವರಿಗೆ ಇವರೂ ವಿದ್ಯೆ ಕಲಿಯಬಹುದು ಎಂದು ತೋರಿಸಿಕೊಟ್ಟರು."[೨೧] ಕ್ರೈಸ್ತ ಮಿಶನರಿಗಳ ಶಾಲೆಗಳು ಜಾತಿ ಹಾಗೂ ಧರ್ಮಗಳನ್ನು ಮೀರಿ ನಿಂತವುಗಳು. ಎಲ್ಲರನ್ನೂ

ಒಂದೇ ಸೂರಿನಡಿ ಸೇರಿಸಿ ಪಾಠ ಹೇಳಿದ್ದು ೧೯ನೇ ಶತಮಾನದಲ್ಲಿ ಮಿಷನರಿಗಳ ಸಾಧನೆಯೆಂದೇ ಹೇಳಬಹುದು.

ತುಮಕೂರು ಜಿಲ್ಲೆಯಲ್ಲಿ ಚರ್ಚ್ ಮೊದಲು ಸ್ಥಾಪನೆಯಾದದ್ದು ಗುಬ್ಬಿಯಲ್ಲಿ. ತುಮಕೂರು ನಗರದಲ್ಲೇ ಒಟ್ಟು ಎಂಟು ಚರ್ಚ್‌ಗಳಿವೆ. "ವಸಾಹತುಶಾಹಿ ಕಾಲಘಟ್ಟದಲ್ಲಿ ಭೀಕರ ಬರಗಾಲ, ಪ್ಲೇಗು ಮೊದಲಾದ ಸಾಂಕ್ರಮಿಕ ರೋಗಗಳಿಂದ ಬೀದಿಯಲ್ಲಿ ಬಿದ್ದಿದ್ದ ನಿರ್ಗತಿಕರಿಗಾಗಿ ತುಮಕೂರಿನಲ್ಲಿ ಗಂಜಿ ಕೇಂದ್ರ್ರಗಳನ್ನು ತೆರೆದರು, ಸ್ವಉದ್ಯೋಗ ತರಬೇತಿಗಳನ್ನು ನೀಡಿದರು. ಸಣ್ಣಪುಟ್ಟ ಜಮೀನುಗಳನ್ನು ಕೊಟ್ಟಿದ್ದಾರೆ."[೨೨] ನರೋನ ಎಂಬುವವರು ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಅವರು ಮುಂದುವರೆದು, "ಇಲ್ಲಿನ ಮತಾಂತರಕ್ಕೆ ಮೂಲ ಕಾರಣ ಹಿಂದೂ ಧರ್ಮದಲ್ಲಿನ ಅಸಮಾನತೆ ಮತಾಂತರ ಆಗಿರುವವರಲ್ಲಿ ಶೇಕಡ ೯೯ರಷ್ಟು ಹಿಂದೂಧರ್ಮದಿಂದ ಬಂದಿರುವವರೆ ಆಗಿದ್ದಾರೆ."[೨೩] ಸಮಾನತೆಗಾಗಿ ತಳಸಮುದಾಯಗಳು ಮತಾಂತರ ಆಗಿರುವುದನ್ನು ಗುರುತಿಸಬಹುದು.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕ್ರೈಸ್ತಧರ್ಮವನ್ನು ಅನುಕರಿಸುತ್ತಿರುವಂತಹ ಹಾಗೂ ಕ್ರೈಸ್ತ ಧರ್ಮ ಸ್ವೀಕಾರ ಮಾಡಿದಂತಹ ಕೆಲವರನ್ನು ಭೇಟಿ ಮಾಡಿ ಸಂದರ್ಶಿಸಲಾಯಿತು.

ರಂಗರಾಜು ಅವರು ಕ್ರೈಸ್ತ ಧರ್ಮವನ್ನು ಕುರಿತು ಈ ರೀತಿ ಹೇಳಿದ್ದಾರೆ. "ನಾನು ಕರಿಗೌಡರ ಮನೆಯಲ್ಲಿ ಜೀತಕ್ಕೆ ಇದ್ದೆ. ಈ ಸಂದರ್ಭದಲ್ಲಿ ಊಟ ಮಾಡುವಾಗ ನೀರು ಕುಡಿಯುವಾಗ ಅಸ್ಪೃಶ್ಯತೆಯನ್ನು ಅನುಭವಿಸಿದ್ದೇನೆ. ಸಿಡದರಗಲ್ಲು ಎಂಬ ನಮ್ಮೂರಿನ ದೇವಾಲಯ ಪ್ರವೇಶ ಮಾಡಬೇಕೆಂದಾಗ ಯಾರೂ ಕೂಡ ಬೆಂಬಲವನ್ನು ಕೊಡಲಿಲ್ಲ. ನಾನು ಎದುರಿಸಿದ ನೋವು ನನ್ನ ಮಕ್ಕಳು ಅನುಭವಿಸಬಾರದು. ಮನಸ್ಸಿನಲ್ಲಿದ್ದ ಅನೇಕ ಪ್ರಶ್ನೆಗಳಿಗೆ ಬೈಬಲ್‌ನಲ್ಲಿ ಉತ್ತರ ಸಿಕ್ಕಿದೆ. ಕ್ರೈಸ್ತ ಧರ್ಮಕ್ಕೆ ಮನಸ್ಸಾಂತರವಾಗಿದ್ದೇನೆ. ಮುಂದೆ ಸಂಪೂರ್ಣವಾಗಿ ಕ್ರೈಸ್ತ ಧರ್ಮಕ್ಕೆ ಮತಾಂತರವಾಗುತ್ತೇನೆ"[೨೪] ಎಂದು ಹೇಳಿದ್ದಾರೆ.

ಲೋಕೇಶ್ ಅವರು ಕ್ರೈಸ್ತ ಧರ್ಮವನ್ನು ಯಾಕೆ ಅನುಸರಿಸುತ್ತಿದ್ದಾರೆ ಎಂಬುದಕ್ಕೆ ಕಾರಣಗಳನ್ನು ಈ ರೀತಿ ನೀಡಿದ್ದಾರೆ. "ಪ್ರಾಥಮಿಕ ಶಾಲೆಯಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ ಓದುವುದರಲ್ಲೂ, ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲೂ ಮೊದಲನೇ ಸ್ಥಾನದಲ್ಲಿರುತ್ತಿದ್ದೆ. ನಾನು ತಳಸಮುದಾಯದವನು ಎಂಬ ಕಾರಣಕ್ಕಾಗಿ, ಶಾಲೆಯ ಕಾರ್ಯಕ್ರಮಗಳಲ್ಲಿ ಚಹಾ ತರಿಸಿದರೆ, ಚಹಾ ಲೋಟಗಳನ್ನು ನನ್ನಿಂದ ಎತ್ತಿಡಿಸುತ್ತಿದ್ದರು. ನಗರಗಳಲ್ಲಿ ಮನೆ ಬಾಡಿಗೆ ಕೇಳಿದರೆ ತಳಸಮುದಾಯದವನು ಎನ್ನುವ ಕಾರಣಕ್ಕೆ ಕೊಡಲಿಲ್ಲ. ಆದರೆ ಒಬ್ಬ ಕ್ರೈಸ್ತ ಎಂದಾಗ ಸಿಗುವ

ಮರ್ಯಾದೆಯೇ ಬೇರೆ. ಆದ್ದರಿಂದಾಗಿ ಕ್ರೈಸ್ತ ಧರ್ಮವನ್ನು ಅನುಸರಿಸುತ್ತಿದ್ದೇನೆ"[೨೫] ಎಂದು ಹೇಳಿದ್ದಾರೆ.

ಪ್ರಕಾಶ್ ಎಂಬುವವರು ಕ್ರೈಸ್ತ ಧರ್ಮವನ್ನು ಅನುಸರಿಸುತ್ತಿರುವುದಕ್ಕೆ ಕಾರಣಗಳನ್ನು ಈ ರೀತಿ ನೀಡಿದ್ದಾರೆ. "ಸವರ್ಣೀಯವನಾದ ಬಹಳ ಪರಿಚಯವಿರುವ ವ್ಯಕ್ತಿಗೆ ಹಾಲು ಕೊಡಿ ಎಂದು ಕೇಳಿದಾಗ, ಹಿಂದಿನಿಂದ ನಡೆದುಕೊಂಡು ಬಂದಿರುವಂತೆ ನಿಮಗೆ ಹಾಲು ಕೊಟ್ಟರೆ ನಮ್ಮ ಹಸು ರಕ್ತ ಕರೆಯುತ್ತದೆ ಎಂದು ಹೇಳಿದಾಗ ನನಗೆ ನೋವಾಗಿತ್ತು. ಕ್ರೈಸ್ತ ಧರ್ಮದಲ್ಲಿ ನನಗೆ ನೆಮ್ಮದಿ ಸಿಕ್ಕಿದೆ"[೨೬] ಎಂದು ಹೇಳಿದ್ದಾರೆ. ತಿಮ್ಮಕ್ಕ ಎಂಬುವವರು "ಕ್ರೈಸ್ತ ಧರ್ಮವನ್ನು ಅನುಸರಿಸುತ್ತಿರುವುದರಿಂದ ಮನೆಯಲ್ಲಿ ಸಂತೋಷವಾಗಿದ್ದೇವೆ. ಅಲ್ಲಿ ಯಾರೂ ಬೇಧಭಾವ ಮಾಡಲ್ಲ, ಅಲ್ಲಿ ಸಮಾನತೆ ಇದೆ"[೨೭] ಎಂದು ಹೇಳಿದ್ದಾರೆ.

ತುಮಕೂರಿನಲ್ಲಿ ತಳಸಮುದಾಯಗಳ ಅಭಿವೃದ್ಧಿಗಾಗಿ ಕ್ರೈಸ್ತ ಮಿಶನರಿಗಳು ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡವು. "೧೮೭೭ರಿಂದ ೧೮೮೦ರ ವರೆಗೆ ಕ್ಷಾಮ ಬಂದಿತ್ತು. ಈ ಸಮಯದಲ್ಲಿ ವೆಸ್ಲಿಯನ್ ಮೆಥೋಡಿಸ್ಟ್ ಮಿಶನರಿಗಳು ಸರ್ಕಾರದ ಸಹಭಾಗಿತ್ವದಲ್ಲಿ ಜನರ ಸೇವೆಗೆ ಮುಂದಾದರು. ಮಕ್ಕಳಿಗಾಗಿ ಪ್ರತ್ಯೇಕ ಅನಾಥಶ್ರಮಗಳನ್ನು ತೆರೆದರು. ಕುಟುಂಬಗಳ ಜೀವನೋಪಾಯಕ್ಕೆ ಕುಶಲಕರ್ಮಿ ತರಬೇತಿಗಳನ್ನು ಪ್ರಾರಂಭಿಸಿದರು."[೨೮] ಇವರಿಂಗಾಗಿ ಪ್ರಾರಂಭಿಸಿದ ವಸತಿ ನೆಲೆಗಳೇ ಈಗಿನ ತುಮಕೂರು ನಗರದ ನಾಲ್ಕು ದಿಕ್ಕುಗಳಲ್ಲಿರುವ ಸಾಡೇಪುರ, ದೇವನೂರು, ಬೆತಲೂರು ಮತ್ತು ಕ್ರಿಶ್ಚಿಯನ್ ಸ್ಟ್ರೀಟ್.

ಕ್ರೈಸ್ತ ಮಿಷನರಿಗಳ ಸೇವೆ ಕ್ಷಾಮಕ್ಕಷ್ಟೇ ಸೀಮಿತಗೊಳ್ಳಲಿಲ್ಲ. ಶಿಕ್ಷಣ ಮತ್ತು ಔದ್ಯೋಗಿಕ ಕ್ಷೇತ್ರಗಳಲ್ಲಿ ಮುಂದುವರಿಯಿತು. ಲೇಖಕ ಎಡ್ವರ್ಡ್ ಅವರು ಉಲ್ಲೇಖಿಸಿರುವಂತೆ ತುಮಕೂರಿನಲ್ಲಿ "೧೮೯೦ರಲ್ಲೇ ಚಿಕ್ಕಪೇಟೆ ಶಾಲೆಗಳು, ಜಯಪುರ, ದಲಿತರ ಮತ್ತು ಮಂಡಿಪೇಟೆಯ ಕಾಲೋನಿಯಲ್ಲಿ ಒಂದೊಂದು ಶಾಲೆ ಇತ್ತು. ಬಸ್‌ಸ್ಟ್ಯಾಂಡ್, ಹೊರಪೇಟೆ ಮತ್ತು ಗೂಳೂರಿನಲ್ಲಿ ಶಾಲೆಗಳಿದ್ದವು."[೨೯] ಈ ಶಾಲೆಗಳು ಇಂದು ಅಸ್ತಿತ್ವದಲ್ಲಿಲ್ಲ. ಹೀಗೆ ಶಿಕ್ಷಣ ಹಾಗೂ ಸಮಾಜ ಸೇವೆಯ ಮೂಲಕ ಕ್ರೈಸ್ತ ಮಿಶನರಿಗಳು ಕ್ರೈಸ್ತಧರ್ಮ ಪ್ರಚಾರ ಮಾಡಿದವು.

## ಸ್ವಾತಂತ್ರ್ಯಪೂರ್ವದಲ್ಲಿ ಮತಾಂತರ

ಸ್ವಾತಂತ್ರ್ಯಪೂರ್ವದಲ್ಲಿ ಕ್ರೈಸ್ತ ಮಿಶನರಿಗಳ ಚಟುವಟಿಕೆಗಳಿಂದಾಗ ತುಮಕೂರು ಜಿಲ್ಲೆಯಲಲಿ ತಳಸಮುದಾಯಗಳು ಮತಾಂತರ ಹೊಂದಿದವು. "ಕ್ರಿ.ಶ.೧೮೩೭ರಲ್ಲಿಯೇ ಗುಬ್ಬಿಯ ಹತ್ತಿರವಿರುವ ಸಿಂಗೋನಹಳ್ಳಿಯಲ್ಲಿ ವಾಸ ಮಾಡುತ್ತಿದ್ದ ಯುವಕ ಚಿಕ್ಕ ಎಂಬುವನು ಕ್ರೈಸ್ತ ಮತಕ್ಕೆ ಮತಾಂತರ

ಹೊಂದಿ ಡ್ಯಾನಿಯಲ್ ಎಂದು ತನ್ನ ಹೆಸರನ್ನು ಬದಲಾಯಿಸಿಕೊಂಡನು. ಈತನೇ ಮತ ಸ್ವೀಕಾರ ಮಾಡಿದ ಕನ್ನಡ ಭಾರತೀಯ ಕ್ರೈಸ್ತರಲ್ಲಿ ಮೊದಲನೆಯವನು."[೩೦] ಆನಂತರ ಅವನ ಕುಟುಂಬ ಹೀಗೆ ಅನೇಕರು ಕ್ರೈಸ್ತಧರ್ಮಕ್ಕೆ ಮತಾಂತರ ಹೊಂದಿದರು. ಇದೇ ಸಂದರ್ಭದಲ್ಲಿ "ತಳಸಮುದಾಯದ ಲೀಲಮ್ಮ, ಮಲ್ಲಯ್ಯ ಹಾಗೂ ಉಪ್ಪಾರಹಳ್ಳಿ ನಿವಾಸಿ ಹುಚ್ಚಪ್ಪನ ಮುಖಾಂತರವಾಗಿ ಹಲವಾರು ಹಳ್ಳಿಗಳ ಜನರು ಕ್ರೈಸ್ತರ ವಿಚಾರಗಳಲ್ಲಿ ಆಸಕ್ತಿಯನ್ನು ಹೊಂದಿದ್ದರು ಎಂದು ತಿಳಿಯಲಾಗಿದೆ. ಮಳಕಟ್ಟೆ ಎಂಬ ಗ್ರಾಮದಿಂದ ೧೯೧೮ರಲ್ಲಿ ಸಿದ್ಧಲಿಂಗ ಎಂಬಾತನು ಗುಬ್ಬಿಗೆ ಹೋಗಿ ಡ್ಯಾನಿಯಲ್ ಎಂಬ ಹೆಸರಿನಿಂದ ಮತಾಂತರ ಹೊಂದಿದನು."[೩೧] ಹೀಗೆ ಕ್ರೈಸ್ತ ಧರ್ಮದ ವಿಚಾರಗಳು ಪ್ರಭಾವ ಬೀರಿ ತಳಸಮುದಾಯಗಳು ಮತಾಂತರ ಹೊಂದಿದವು.

### ೫.೨. ಬೌದ್ಧ ಧರ್ಮ

ಭಾರತ ಸರ್ಕಾರದ ಕಾನೂನು ಮಂತ್ರಿಗಳಾಗಿದ್ದ ಡಾ.ಬಿ.ಆರ್.ಅಂಬೇಡ್ಕರ್ ಅವರು "ತಮ್ಮ ಪತ್ನಿ ಸವಿತಾಬಾಯಿ ಹಾಗೂ ತಮ್ಮ ಅನುಯಾಯಿಗಳಾದ ಮೂರು ಲಕ್ಷ ಮಂದಿ ನಿಮ್ನ ವರ್ಗದವರೊಂದಿಗೆ ನಾಗಪುರದಲ್ಲಿ ಬೌದ್ಧ ಧರ್ಮವನ್ನು ಸ್ವೀಕರಿಸಿದರು."[೩೨] ಸವರ್ಣ ಹಿಂದೂಗಳು ತಮ್ಮನ್ನು ನಡೆಸಿಕೊಂಡ ಅಮಾನುಷ ರೀತಿಗಾಗಿ ಅವರು ನೊಂದು ಮಾತನಾಡಿದರು. ಹಿಂದುಳಿದ ಜಾತಿ ಅವರಿಗೆ ದೊರಕುವ ಪ್ರಯೋಜನಗಳು ಇನ್ನು ಮುಂದೆ ಬೌದ್ಧ ಮತಾವಲಂಬಿಗಳಾದ ಈ ನಿಮ್ನ ವರ್ಗದವರಿಗೆ ಸಿಗಲಾರವಲ್ಲವೆ ಎಂದು ಪ್ರಶ್ನಿಸಿದಾಗ, "ಇಂತಹ ಪ್ರಯೋಜನ ಪಡೆಯಲಿಕ್ಕಾಗಿ ಬ್ರಾಹ್ಮಣ ಜಾತಿಯವನು ನಿಮ್ನ ವರ್ಗದವನಾಗಲು ಸಿದ್ಧನಿದ್ದಾನೆಯೆ?"[೩೩] ಎಂದು ಅವರು ಕೇಳಿದರು. "ನಾವೀಗ ನಿಜ ಮಾನವರಾಗಬೇಕೆಂದು ಇದ್ದೇವೆ"[೩೪] ಎಂದೂ ಅವರು ಸಾರಿದರು.

ಅಸ್ಪೃಶ್ಯರೆಂದು ಪರಿಗಣಿಸಲ್ಪಟ್ಟ ತಳಸಮುದಾಯಗಳು ತಲೆ ತಲಾಂತರಗಳಿಂದ ಯಾತನಾಮಯ ಜೀವನವನ್ನು ನಡೆಸಿರುವುದು ಮತ್ತು ನಡೆಸುತ್ತಿರುವುದು ರಾಜ್ಯದ ಎಲ್ಲೆಡೆಗಳಲ್ಲೂ ಬೆಳೆದು ಬಂದಿದೆ. ಆದರೆ "ವರ್ಣಾಶ್ರಮ ಧರ್ಮದಂತೆ ಆ ಜನರು ಅದೇ ರೀತಿಯ ಕಷ್ಟ ಪರಂಪರೆಗಳಲ್ಲಿ ತೊಳಲಾಡುವುದು ಸ್ವಾಭಾವಿಕವೆಂದೂ, ಇತರರ ಸೇವೆ ಮಾಡಲೋಸುಗವೇ ಅವರ ಹುಟ್ಟಿನ ಕಾರಣವೆಂದೂ, ಊರಕೇರಿಯ ಹೊರಗಡೆ ಜನ ವಸತಿ ಇಲ್ಲದ ಕಡೆಗಳಲ್ಲೇ ಚಿಕ್ಕ ಗುಡಿಸಲುಗಳಲ್ಲಿವರು ವಾಸಿಸಬೇಕಾದುದೂ ಸೃಷ್ಟಿ ನಿಯಮ, ದೈವಸಂಕಲ್ಪ ಎಂಬ ಅಭಿಪ್ರಾಯದಿಂದ ತುಂಬಿದ ಜನರ ಸಂಖ್ಯೆಗೆ ಇಂದಿಗೂ ಕೊರತೆ ಇಲ್ಲ."[೩೫] ಈ ಆಧುನಿಕ ದಿನಗಳಲ್ಲಿ ಅಸ್ಪೃಶ್ಯತೆ ಎನ್ನುವುದು ಹೇಯವಾಗಿದೆ. ಹೊಲಸನ್ನು ತಿಂದು ಮನಬಂದಂತೆ ಅಲೆದಾಡುವ ನಾಯಿಯು

ತನ್ನ ಧನಿಯ ಬಳಿಯಲ್ಲಿ ಮನೆಯೊಳಗಡೆ ಅಲೆಯುವುದು ವಾಸ್ತವವಾಗಿದೆ. ಆದರೆ ಮನುಷ್ಯನಾಗಿ ಜನ್ಮವೆತ್ತಿ, ಸೇವೆಯೇ ತನ್ನ ಜೀವನದ ಹಿರಿಯ ಗುರಿಯಾಗಿಟ್ಟುಕೊಂಡು, ನೈತಿಕ ವಿಚಾರಗಳಲ್ಲಿ ಎಳ್ಳಷ್ಟು ಹಿಂದುಳಿಯದ ವ್ಯಕ್ತಿಯು ಸವರ್ಣೀಯರೆನ್ನಿಸಿಕೊಳ್ಳುವ ಜನರಂತೆಯೇ ಆತ್ಮವಿದ್ದವನೂ, ನಿಷ್ಕಳಂಕನೂ ಆಗಿದ್ದರೂ ಆತನು ಅಸ್ಪೃಶ್ಯನಾದರೆ ದುರಂತ ಜೀವನವನ್ನು ನಡೆಸಬೇಕಾಗುವುದು ಸ್ಪಷ್ಟವಾಗಿ ಕಾಣುತ್ತಿದೆ.

ಇಂಥ ಜೀವನವು ಮನುಷ್ಯನಾದವನಿಗೆ ಯಾತನಾಮಯವಾಗಿರುವುದರಲ್ಲಿ ಎರಡು ಮಾತಿಲ್ಲ. ರಾಷ್ಟ್ರದ ಸಮಗ್ರ ಅಭಿವೃದ್ಧಿಗೆ ಇದೊಂದು ಮಾರಕವಾಗಿದೆ. ತಳಸಮುದಾಯಗಳು ಸಾರ್ವಜನಿಕ ಸ್ಥಳಗಳಲ್ಲಿ ನಿರಾತಂಕವಾಗಿ ಎಲ್ಲರಂತೆಯೇ ಪ್ರವೇಶಿಸಬೇಕೆಂಬ ಶಾಸನವನ್ನು ಸರಕಾರವು ಬೆಳಕಿಗೆ ತಂದಿದೆ. ಆದರೂ ಅಂಥ ಸ್ಥಳಗಳಿಗೆ ಪ್ರವೇಶಿಸುವಾಗ ಈಗಲೂ ಅಲ್ಲಲ್ಲಿ ಆಕ್ಷೇಪಗಳು ಸಾಗುತ್ತಲೇ ಇವೆ. ಲಿಖಿತ ಸಂವಿಧಾನಕ್ಕಿಂತ ಅಲಿಖಿತ ಸಂವಿಧಾನವೇ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ ಹಾಗೂ ಚಾಲ್ತಿಯಲ್ಲಿದೆ.

ಮೇಲ್ಜಾತಿಯವರು ತಳಸಮುದಾಯಗಳನ್ನು ನಡೆಸಿಕೊಂಡ ಕ್ರಮವು ಅಸಹನೀಯವಾದದ್ದು. ಆದ್ದರಿಂದಾಗಿ "ಡಾ.ಬಿ.ಆರ್.ಅಂಬೇಡ್ಕರ್ ಅವರು ತಮ್ಮ ಲಕ್ಷಗಟ್ಟಲೆ ಅನುಯಾಯಿಗಳೊಂದಿಗೆ ಹಿಂದೂ ಧರ್ಮಕ್ಕೆ ಬೆನ್ನು ಹಾಕಿ ಬೌದ್ಧ ಮತಾವಲಂಬಿಗಳಾಗಿ ಮತಾಂತರ ಹೊಂದಿದರು. ಸನಾತನಿಗಳ ಕಠಿಣ ಮನೋವೃತ್ತಿಯಿಂದಾಗಿ ತಳಸಮುದಾಯಗಳು ಮತ ಸ್ವೀಕಾರ ಮಾಡುತ್ತಿರುವುದು ಅನ್ಯ ಧರ್ಮದವರಿಗೆ ಇದೊಂದು ಸುವರ್ಣ ಸಂದರ್ಭವಾಗಿ ಪರಿಣಮಿಸಿದರೆ, ಹಿಂದೂ ಧರ್ಮಕ್ಕೆ ತುಂಬಲಾರದ ಆಘಾತವಾಗಿದೆ."[೩೬] ತಳಸಮುದಾಯಗಳ ಸರ್ವತೋಮುಖ ಅಭಿವೃದ್ಧಿಗೆ ಸರಕಾರವು ಹಲವಾರು ಕಾರ್ಯಕ್ರಮಗಳನ್ನು ಕೈಗೊಂಡಿದೆ. ಇಂತಹ ಕಾರ್ಯಗಳು ಯಶಸ್ವಿಯಾಗುವಲ್ಲಿ ಮೇಲ್ಜಾತಿಯವರಿಂದ ಸಹಕಾರ ದೊರಕದಿರುವುದೇ ಇಂತಹ ಮತಾಂತರಕ್ಕೆ ನಿದರ್ಶನವಾಗಿದೆ.

ತುಮಕೂರು ಜಿಲ್ಲೆಯಲ್ಲಿ ಬೌದ್ಧ ಧರ್ಮಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ, ತಳಸಮುದಾಯಗಳಲ್ಲಿ ಬೌದ್ಧ ಧರ್ಮದ ಬಗ್ಗೆ ಹೆಚ್ಚಿನ ಪ್ರಮಾಣದಲ್ಲಿ ಅರಿವಿಲ್ಲದಿರುವುದು ಕಂಡುಬರುತ್ತದೆ. ಅರಿವನ್ನು ಮೂಡಿಸುವಂತಹ ಪ್ರಯತ್ನಗಳು ಇತ್ತೀಚೆಗೆ ಕಂಡುಬರುತ್ತಿವೆ. ಕರಪತ್ರಗಳ ಮೂಲಕ ಬೌದ್ಧ ಧರ್ಮದ ಬಗ್ಗೆ ಅರಿವನ್ನು ಮೂಡಿಸುವಂತಹ ಪ್ರಯತ್ನಗಳಾಗುತ್ತಿವೆ. ಅಂತಹ ಕರಪತ್ರಗಳೆಂದರೆ,

೧. ಮತಾಂತರ ಅವಾಂತರ! ಭಾರತ ಜಾತ್ಯಾತೀತ ಗಣರಾಜ್ಯದ ಒಂದು ನಿರ್ದಿಷ್ಟ ಸ್ಪಷ್ಟನೆ, ಮತಾಂತರದ ಸ್ಪಷ್ಟನೆ- ಕರ್ನಾಟಕ ಕಂಡ ವಿಚಾರವಾದಿ-ಚಿಂತಕ ನ್ಯಾಯಾದೀಶ-

ಕೊ.ಚನ್ನಬಸವಪ್ಪ, ಸಂಗ್ರಹ ಪ್ರಕಟಣೆ: ನಾರಾಯಣ ರಾಜು, ಚಿಕ್ಕನಾಯಕನಹಳ್ಳಿ, ತಾಲೂಕು, ಆಶ್ರಯ ನೆರವು: ಭಾರತೀಯ ಬೌದ್ಧ ಮಹಾಸಭಾ, ತುಮಕೂರು.

೨. ಜಗತ್ತಿನಲ್ಲಿ ಶಾಂತಿ ಸ್ಥಾಪಿಸಲು ಬೌದ್ಧ ಧರ್ಮವನ್ನು ಪ್ರಚಾರ ಮಾಡಿ, ನಾರಾಯಣರಾಜು (ಸಂಗ್ರಹ ಮತ್ತು ಪ್ರಕಟಣೆ), ಭಾರತೀಯ ಬೌದ್ಧ ಮಹಾಸಭಾ, ತುಮಕೂರು.

೩. ಬೌದ್ಧ ಧರ್ಮ ಸಾಧಿಸಿದ್ದ ಭಾರತದ ದಿಗ್ವಿಜಯ, ನಾರಾಯಣರಾಜು (ಸಂಗ್ರಹ–ಪ್ರಚಾರ–ಪ್ರಕಟನೆ), ಭಾರತೀಯ ಬೌದ್ಧ ಮಹಾಸಭಾ, ತುಮಕೂರು.

೪. ಬೌದ್ಧ ಧರ್ಮದೆಡೆಗೆ ಒಂದು ದೃಢ ನಿರ್ಧಾರ, ನಾರಾಯಣರಾಜು(ಪ್ರಚಾರ), ಭಾರತೀಯ ಬೌದ್ಧ ಮಹಾಸಭಾ, ತುಮಕೂರು.

೫. ವಿಶ್ವ ಮಾನವ–ವಿಶ್ವಗುರು ಬುದ್ಧ–ವಿಶ್ವ ಕವಿ ಕುವೆಂಪು, ೨೦೦೪, ನಾರಾಯಣರಾಜು (ಪ್ರಚಾರ), ಭಾರತೀಯ ಬೌದ್ಧ ಮಹಾಸಭಾ, ತುಮಕೂರು.

೬. ಐತಿಹಾಸಿಕ ಮಹತ್ವ, ಕರ್ನಾಟಕದಲ್ಲಿ ಬೌದ್ಧ ಶಿಲ್ಪಗಳು ಮತ್ತು ಶಾಸನಗಳು, ಭಗವಾನ್ ಬುದ್ಧ–ಸಾಮ್ರಾಟ್ ಅಶೋಕ–ಮಹಾತ್ಮ ಬಸವರ–ಸಮಚಿಂತನ, ನಾರಾಯಣರಾಜು(ಸಂಗ್ರಹ ಪ್ರಕಟಣೆ), ಭಾರತೀಯ ಬೌದ್ಧ ಮಹಾಸಭಾ, ತುಮಕೂರು.

ರಮೇಶ್ ಅವರು ತಳಸಮುದಾಯಗಳು ಬೌದ್ಧ ಧರ್ಮವನ್ನು ಯಾಕೆ ಬಯಸುತ್ತಾರೆ ಎಂಬುದಕ್ಕೆ ಕಾರಣವನ್ನು ಈ ಕೆಳಗಿನಂತೆ ನೀಡಿದ್ದಾರೆ. "ಬೌದ್ಧ ಧರ್ಮವು ಸಮಾನತೆ, ಅಹಿಂಸೆ, ನೈತಿಕತೆಗಳನ್ನು ಬೋಧಿಸುತ್ತದೆ. ಅದು ದುಃಖದ ಮತ್ತು ಶೋಕದ ಕಾರಣಗಳನ್ನು ಹುಡುಕಿ, ನರಳಾಟದಿಂದ ಪಾರಾಗುವುದು ಹೇಗೆಂದು ತಿಳಿಸುತ್ತದೆ."[೩೭] ತಳಸಮುದಾಯಗಳಲ್ಲಿ ಬಹಳಷ್ಟು ಮಂದಿ ಬೌದ್ಧ ಧರ್ಮಕ್ಕೆ ಪರಿವರ್ತನೆ ಹೊಂದಲು ಬಯಸುತ್ತಾರೆ ಎಂಬುದು ಅವರ ಅಭಿಪ್ರಾಯವಾಗಿದೆ.

ಜನಗಣತಿಯ ಸಂದರ್ಭದಲ್ಲಿ ದಲಿತ ಚಳವಳಿಯ ನೇತಾರರು ಪ್ರಚಾರ ಮಾಡಿ ತಿಳುವಳಿಕೆ ನೀಡಿದ ಹಿನ್ನೆಲೆಯಲ್ಲಿ ಸರ್ಕಾರ ತಳಸಮುದಾಯಗಳಿಗೆ ಜನಗಣತಿ ಕಾಲಂನಲ್ಲಿ ಬೌದ್ಧರೆಂದು ನಮೂದಿಸಿಕೊಳ್ಳಲು ಅವಕಾಶ ನೀಡಿದೆ. ಆದರೆ "ಬೌದ್ಧರೆಂದು ನಮೂದಿಸಿದರೆ ಮೀಸಲಾತಿ ಸೌಲಭ್ಯ ಸಿಗುವುದಿಲ್ಲವೆಂಬ ಹಿಂಜರಿಕೆಯಿಂದ ಸಂವಿಧಾನದ ತಿದ್ದುಪಡಿ ಆದೇಶ, ಆ ಕುರಿತ ನಿಯಮಗಳ ಕುರಿತು ಖಚಿತ ಮಾಹಿತಿ ಇಲ್ಲದ ಕಾರಣ, ಹಾಗೆ ನೋಂದಾಯಿಸದೇ ಬೌದ್ಧ ರೀತಿಯ ಜೀವನ ನಡೆಸುವ ದಲಿತರೂ ಇದ್ದಾರೆ."[೩೪] ಇದೇ ರೀತಿಯಲ್ಲಿ ತುಮಕೂರು

ಜಿಲ್ಲೆಯಲ್ಲಿ ಕ್ರೈಸ್ತ ಮತ್ತು ಬೌದ್ಧ ಧರ್ಮದ ರೀತಿಯ ಜೀವನ ನಡೆಸುವ ತಳಸಮುದಾಯಗಳು ಇವೆ.

ಒಟ್ಟಾರೆಯಾಗಿ ಹೇಳುವುದಾದರೆ ವಸಾಹತು ಕಾಲಘಟ್ಟ ಹಾಗೂ ವಸಾಹತೋತ್ತರ ಕಾಲಘಟ್ಟದಲ್ಲಿ ತಳಸಮುದಾಯಗಳು ಸಮಾನತೆಗಾಗಿ ಕ್ರೈಸ್ತಧರ್ಮ ಹಾಗೂ ಬೌದ್ಧಧರ್ಮವನ್ನು ಸ್ವೀಕಾರ ಮಾಡಿದವು.

**ಕೊನೆ ಟಿಪ್ಪಣಿಗಳು**

೧. ಪ್ರಧಾನ್ ಗುರುದತ್ತ(ಪ್ರ.ಸಂ), **ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂಪುಟ–೫,** ಹಿಂದೂಗಳಿಂದ ದೂರ, ೨೦೧೦, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೨೦೦೦.

೨. ಸೀತಾರಾಂ ಯೆಚೂರಿ, ೨೦೦೯, **ಏನಿದು ಈ ಹಿಂದೂ ರಾಷ್ಟ್ರ?,** ಕ್ರಿಯಾ ಪ್ರಕಾಶನ, ಬೆಂಗಳೂರು, ಪು.೬೨.

೩. ಎನ್.ಚಿನ್ನಸ್ವಾಮಿ ಸೋಸಲೆ, **ಅಂಬೇಡ್ಕರ್ ದೃಷ್ಟಿಯಲ್ಲಿ ದಲಿತರು ಮತ್ತು ಮತಾಂತರ,** ಯಾಜಿ ಪ್ರಕಾಶನ, ಹೊಸಪೇಟೆ, ಪು.೧೪೫.

೪. ಅದೇ, ಪು.೧೪೬.

೫. ಸೂರಮ್ಮನಹಳ್ಳಿ ಉಮೇಶ, **ಧರ್ಮ ಮತ್ತು ಮೂಲಭೂತವಾದದ ತಿಕ್ಕಲುತನಗಳು,** ಸಂವಾದ, ೨೦೦೫, ಪು.೧೫.

೬. ಪ್ರಧಾನ್ ಗುರುದತ್ತ(ಪ್ರ.ಸಂ.) **ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂಪುಟ–೫,** ೨೦೧೦, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ ಕಲಾಗ್ರಾಮ, ಜ್ಞಾನ ಭಾರತಿ, ಬೆಂಗಳೂರು.

೭. ಪ್ರಜಾವಾಣಿ, ದಿನಪತ್ರಿಕೆ, ಅಕ್ಟೋಬರ್ ೨೪, ೨೦೧೫.

೮. ಪ್ರಜಾವಾಣಿ, ದಿನಪತ್ರಿಕೆ, ಏಪ್ರಿಲ್ ೭, ೨೦೧೫.

೯. ಪ್ರಜಾವಾಣಿ, ದಿನಪತ್ರಿಕೆ, ಫೆಬ್ರವರಿ ೧೮, ೨೦೧೫.

೧೦. ಪ್ರಧಾನ್ ಗುರುದತ್ತ(ಪ್ರ.ಸಂ) **ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರೆಹಗಳು ಮತ್ತು ಭಾಷಣಗಳು, ಸಂಪುಟ–೫,** ಹಿಂದೂಗಳಿಂದ ದೂರ, ೨೦೧೦, ಕನ್ನಡ ಮತ್ತು

ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೪೫೬.

೧೧. ಅದೇ, ಪು.೪೫೪-೪೫೫.

೧೨. ಅದೇ, ಪು.೧೫೧.

೧೩. ನವಯುಗ ವಾರಪತ್ರಿಕೆ, ೨೬ನೇ ಜುಲೈ ೧೯೫೬, ವಾರಪತ್ರಿಕೆ, ಪು.೩.

೧೪. ಅದೇ, ಪು.೩.

೧೫. ಅದೇ, ಪು.೩.

೧೬. ಅದೇ ಪು.೩.

೧೭. ನವಯುಗ ವಾರಪತ್ರಿಕೆ, ೨೭ನೇ ಮೇ ೧೯೫೪, ಪು.೩.

೧೮. ಡೆನಿಸ್ ಫೆರ್ನಾಂಡಿಸ್(ಲೇ), ಚಂದ್ರಶೇಖರ್ ಎಸ್., ಸುರೇಂದ್ರ ರಾವ್ ಬಿ.(ಸಂ), ೨೦೧೬, ಕರ್ನಾಟಕದಲ್ಲಿ ಕ್ರೈಸ್ತ ಧರ್ಮ, ಕರ್ನಾಟಕದ ಸಾಮಾಜಿಕ ಮತ್ತು ಆರ್ಥಿಕ ಚರಿತ್ರೆಯ ಕೆಲವು ನೆಲೆಗಳು, ಸಂಪುಟ ೩, ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೧೩೬.

೧೯. ಅದೇ, ಪು.೧೩೭.

೨೦. ರಂಗರಾಜು, ಸಿಡದರಗಲ್ಲು.

೨೧. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೯೧.

೨೨. ಕ್ರಿಸ್ಟೋಫರ್ ಅನಿಲ್, ತುಮಕೂರು.

೨೩. ನರೋನ, ತುಮಕೂರು.

೨೪. ರಂಗರಾಜು, ಸಿಡದರಗಲ್ಲು.

೨೫. ಲೋಕೇಶ್, ಸಿಡದರಗಲ್ಲು.

೨೬. ಪ್ರಕಾಶ್, ಮಾದೇನಹಳ್ಳಿ.

೨೭. ತಿಮ್ಮಕ್ಕ, ಬಡವನಹಳ್ಳಿ.

೨೮. ಮರಿಯಪ್ಪ ಕೆ.(ಸಂ), ೨೦೧೧, **ತುಮಕೂರು ಜಿಲ್ಲೆಯ ಸಾಧಕರು**, ವೀರ ಮಹಾದೇವ ಪ್ರಕಾಶನ, ತುಮಕೂರು ಪು.೩೫

೨೯. ಅದೇ, ಪು.೩೫

೩೦. ಲಿಂಗರಾಜು ಪಿ., ಯೋಗೀಶ್ ಡಿ.ಎನ್.(ಸಂ), ೨೦೦೨, **ತುಮಕೂರು ಜಿಲ್ಲೆಯಲ್ಲಿ ಕ್ರೈಸ್ತ ಮಿಶನರಿಗಳ ಚಟುವಟಿಕೆ**, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು.೧೪೬

೩೧. ಅದೇ, ಪು.೧೪೭

೩೨. ನವಯುಗ, ವಾರಪತ್ರಿಕೆ, ೧೮ನೇ ಅಕ್ಟೋಬರ್, ೧೯೫೬, ಪು.೭.

೩೩. ಅದೇ, ಪು.೭.

೩೪. ಅದೇ, ಪು.೭.

೩೫. ನವಯುಗ, ವಾರಪತ್ರಿಕೆ, ೨೨ನೇ ನವೆಂಬರ್, ೧೯೫೬, ಪು.೧೧.

೩೬. ಅದೇ, ಪು.೧೧.

೩೭. ರಮೇಶ್(ಲೇ), (ಅನು), (ಸಂ), ೨೦೧೪, **ದಲಿತರು ಮತ್ತು ಮತಾಂತರ, ಧಾರ್ಮಿಕ ಮತಾಂತರ: ಸಂವಿಧಾನಿಕ ದೃಷ್ಟಿಕೋನ**, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.೧೦೪.

೩೮. ಚಿನ್ನಸ್ವಾಮಿ ಸೋಸಲೆ ಎನ್., ೨೦೧೫, **ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು**, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೧೦೦.

## ಅಧ್ಯಾಯ ಆರು

# ಆರ್ಥಿಕ, ಶೈಕ್ಷಣಿಕ, ರಾಜಕೀಯ ವ್ಯವಸ್ಥೆ ಮತ್ತು ಪ್ರಜಾಸತ್ತಾತ್ಮಕ ಕಾನೂನು

## ಅಧ್ಯಾಯ ಆರು

# ಆರ್ಥಿಕ, ಶೈಕ್ಷಣಿಕ, ರಾಜಕೀಯ ವ್ಯವಸ್ಥೆ ಮತ್ತು ಪ್ರಜಾಸತ್ತಾತ್ಮಕ ಕಾನೂನು

ತಳಸಮುದಾಯಗಳ ಆರ್ಥಿಕ ವ್ಯವಸ್ಥೆ ನಿಂತಿರುವುದು ಭೂಮಿಯ ಮೇಲೆ. ತಳ ಸಮುದಾಯಗಳ ಆರ್ಥಿಕ ವ್ಯವಸ್ಥೆಯ ಮೂಲ ಭೂಮಿ. ಭೂಮಿ ಪ್ರಶ್ನೆಗಳು ಎಂದ ಕೂಡಲೇ ಎಲ್ಲರ ಗಮನಹರಿಯುವುದು ಒಂದು ಕರ್ನಾಟಕದಲ್ಲಿ ರಾಜಕಾರಣಿಗಳು ದಿನನಿತ್ಯ ನಡೆಸುವ ಭೂ ಹಗರಣದ ಕಡೆಗೆ ಅಥವಾ ಇತ್ತೀಚೆಗೆ ಬೆಂಗಳೂರು ನಗರದಲ್ಲೇ ಸಾವಿರಾರು ಎಕರೆ ಭೂಮಿ ಕಬಳಿಸಿದ ವ್ಯವಹಾರಗಳ ಮೇಲೆ. ಇಂದಿಗೂ ಕೂಡ ಪ್ರಪಂಚದಲ್ಲಿ ನಡೆಯುವ ಯುದ್ಧಗಳಲ್ಲಿ, ಸಂಘರ್ಷಗಳಲ್ಲಿ, ಹೋರಾಟಗಳಲ್ಲಿ ಶೇಕಡ ಐವತ್ತಕ್ಕಿಂತಲೂ ಹೆಚ್ಚಿನ ಯುದ್ಧಗಳು, ಸಂಘರ್ಷಗಳು ಭೂಮಿಗಾಗಿ ನಡೆಯುತ್ತಿವೆ. ಬಹುಸಂಖ್ಯಾತ ದಲಿತ ಸಮುದಾಯದವರು ಭೂಮಿಯಿಂದ ವಂಚಿತರಾಗಿದ್ದಾರೆ. ಈ ಜನರ ಹಕ್ಕುಗಳನ್ನು ಎತ್ತಿ ಹಿಡಿದರೂ ಸುಪ್ರಿಂಕೋರ್ಟ್ ಹಾಗೂ ಹೈಕೋರ್ಟ್‌ಗಳಲ್ಲಿರುವ ಉನ್ನತ ಅಧಿಕಾರಿಗಳ ಚಾಕಚಕ್ಯತೆಯಿಂದಾಗಿ ಶಾಸನಗಳು ಜಾರಿಯಾಗುತ್ತಿಲ್ಲ. ತಳಸಮುದಾಯಗಳಿಗೆ ಆಗುತ್ತಿರುವ ಸಾಮಾಜಿಕ ಅನ್ಯಾಯವನ್ನು ಜಸ್ಟೀಸ್ ಚೆನ್ನಪ್ಪ ರೆಡ್ಡಿ, ವೆಂಕಟಸ್ವಾಮಿ, ಹಾವನೂರು ಹಾಗೂ ಮಂಡಲ್ ಇವರೂ ಸೇರಿದಂತೆ ಅನೇಕ ನ್ಯಾಯಶಾಸ್ತ್ರ ಪಂಡಿತರು ಬಹಿರಂಗಗೊಳಿಸಿದ್ದಾರೆ. ಜಾರಿಯಾಗದ ಶಾಸನಗಳನ್ನು ಕುರಿತು ಚೆನ್ನಸ್ವಾಮಿ ಸೋಸಲೆ ಅವರು “ಭೂ ಸಂಬಂಧಿ ಸುಧಾರಣೆಗಳು ದೀರ್ಘ ಕಾಲದಿಂದ ನಿದ್ರಿಸುತ್ತಿವೆ. ಶಾಸಕಾಂಗದ ಈ ಕುಂಭಕರ್ಣ ನಿದ್ರೆ, ಕಾರ್ಯಾಂಗದ ಔದಾಸೀನ್ಯ ಹಾಗೂ ನ್ಯಾಯಾಂಗದ ಕಾಮಾಲೆ ಪೀಡಿತ ದೃಷ್ಟಿ ಇವು ಭೂಹೀನ ದಲಿತರನ್ನು ಇಲ್ಲದವರನ್ನಾಗಿಯೇ ಉಳಿಸಿವೆ. ಆದ್ದರಿಂದ ಪ್ರತಿ ಕ್ರಾಂತಿಕಾರರ ದೃಷ್ಟಿಯಲ್ಲಿ ಸಂವಿಧಾನ ಕಾಗದದ ಹುಲಿಯಷ್ಟೇ ಆಗಿದೆ” ಎಂದು ಅಭಿಪ್ರಾಯಪಡುತ್ತಾರೆ. ಕರ್ನಾಟಕದಲ್ಲಿ ಭೂನ್ಯಾಯ ಮಂಡಳಿಗಳು ನೀಡಿದ ಸಾವಿರಾರು ತೀರ್ಪುಗಳಿಂದ ಭೂಹೀನ ದಲಿತರಿಗೆ ಅಥವಾ ತಳಸಮುದಾಯಗಳಿಗೆ

ಪ್ರಯೋಜನವಾಗಿದೆ. ಮುಂದೆ ಈ ತೀರ್ಪುಗಳು ಹೈಕೋರ್ಟುಗಳಿಂದ ಹಾಗೂ ಸುಪ್ರಿಂಕೋರ್ಟಿನಿಂದ ನ್ಯಾಯಬದ್ಧವಾಗಿ; ಉದ್ದೇಶಪೂರ್ವಕವೆಂದು ಕಾಣದ ರೀತಿಯಲ್ಲಿ ಅಸಿಂಧುವಾಗಿ ಪರಿಗಣಿಸಲ್ಪಡುತ್ತಿರುವುದು ವಿಷಾದನೀಯವಾಗಿದೆ.

## ೬.೧. ಭೂಮಿ ಪ್ರಶ್ನೆಗಳು

"ಬಹುತೇಕ ಅಭಿವೃದ್ಧಿಶೀಲ ರಾಷ್ಟ್ರಗಳ ರಾಜಕೀಯ ನಿಂತಿರುವುದೇ ಭೂಮಿ ಪ್ರಶ್ನೆ ಮೇಲೆ."[೧] ಕಾರಣವೆಂದರೆ ವ್ಯಾಪಾರ, ಗಣಿ, ಹೆಂಡ, ಭೂಮಾಫಿಯದ ಹಣವು ರಾಜಕೀಯದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಚಿನ್ನಸ್ವಾಮಿ ಸೋಸಲೆ ಅವರು "ಜೀತಪದ್ಧತಿ, ಗ್ರಾಮೀಣ ಮಹಿಳೆಯರ ಮೇಲಿನ ದೌರ್ಜನ್ಯ ಹಾಗೂ ಅತ್ಯಾಚಾರ, ಅಸ್ಪೃಶ್ಯರಲ್ಲಿಯೇ ಮೇಲು–ಕೀಳು ಎಂಬ ವರ್ಗೀಕರಣ ಔದ್ಯೋಗಿಕ ರಂಗದಲ್ಲಿ ಹಿಂದುಳಿದವರನ್ನು ಯಜ್ಞಪಶುಗಳಂತೆ ಪರಿಗಣಿಸುವುದು ಇವೆಲ್ಲಕ್ಕೂ ಭೂಸಮಸ್ಯೆಯೇ ಮುಖ್ಯ ಕಾರಣವಾಗಿದೆ"[೨] ಎಂದು ಅಭಿಪ್ರಾಯಪಡುತ್ತಾರೆ. ಸಂವಿಧಾನ ಮೂಲಭೂತ ಹಕ್ಕುಗಳನ್ನು ನೀಡಿದ್ದರೂ ಸಹ ಸಮುದಾಯಗಳ ಆಶೋತ್ತರಗಳನ್ನು ಈಡೇರಿಸುತ್ತಿಲ್ಲ ವೆಂಬುದು ಗಮನಾರ್ಹ.

ತುಮಕೂರು ಜಿಲ್ಲೆಯ ಚಾರಿತ್ರಿಕ ಸಂದರ್ಭಗಳನ್ನು ಗಮನಿಸಿದಾಗ, ಕೆಲವರು ಹೆಚ್ಚು, ಮತ್ತೆ ಕೆಲವರು ಕಡಿಮೆ ಭೂಮಿ ಪಡೆದಿದ್ದಾರೆ. ಲಿಂಗಾಯತರು ಮತ್ತು ಒಕ್ಕಲಿಗರನ್ನು ತುಮಕೂರು ಜಿಲ್ಲೆಯ ಪ್ರಮುಖ ಭೂಮಾಲೀಕ ಸಮುದಾಯಗಳೆಂದು ಗುರುತಿಸಲಾಗುತ್ತಿದೆ. ಆದರೆ ನಿಜವಾದ ಕೃಷಿ ಭೂಮಿಯಲ್ಲಿ ಸಾಗುವಳಿ ಮಾಡುವಂತಹ ತಳಸಮುದಾಯಗಳು ಭೂಮಿಯ ಒಡೆಯರಾಗಲೇ ಇಲ್ಲ. "ಎಲ್ಲ ಲಿಂಗಾಯತರು ಮತ್ತು ಒಕ್ಕಲಿಗರು ಭೂಮಾಲೀಕರು, ಅದೇ ರೀತಿಯಲ್ಲಿ ಎಲ್ಲ ದಲಿತರು ಮತ್ತು ಬುಡಕಟ್ಟು ಜನರು ಕೃಷಿ ಕಾರ್ಮಿಕರು ಮತ್ತು ಹಿಂದುಳಿದ ಜಾತಿ ಜನರು ಗೇಣಿದಾರರು ಎನ್ನುವ ಪರಿಪೂರ್ಣ ವಿಂಗಡಣೆ ಸಾಧ್ಯವಿಲ್ಲ."[೩] ಲಿಂಗಾಯತರು ಮತ್ತು ಒಕ್ಕಲಿಗರಲ್ಲೂ ತುಂಡು ಭೂಮಿಗಳನ್ನು ಹೊಂದಿರುವವರು, ಭೂರಹಿತ ಗೇಣಿದಾರರು ಇದ್ದಾರೆ. ಅಂದರೆ ಭೂರಹಿತ ಗೇಣಿದಾರರ ಪ್ರಮಾಣ ಕಡಿಮೆ ಇದೆ. ಅದೇ ರೀತಿ ಹಿಂದುಳಿದ ಜಾತಿಗಳಲ್ಲೂ ಕೆಲವು ಭೂಮಾಲೀಕರಿರಬಹುದು. ತುಮಕೂರು ಜಿಲ್ಲೆಯ ಭೂರಹಿತ ಕೃಷಿ ಕಾರ್ಮಿಕರಾದಂತಹ ತಳಸಮುದಾಯಗಳಲ್ಲೂ ಬೆರಳೆಣಿಕೆಯಷ್ಟು ಭೂಮಾಲೀಕರನ್ನು ಪ್ರಸ್ತುತ ಅಧ್ಯಯನದಲ್ಲಿ ಗುರುತಿಸಲಾಗಿದೆ. ಅವರುಗಳೆಂದರೆ, ವಿದಿಯಜ್ಜ, ಮಣ್ಣಜ್ಜ, ಚಿಕ್ಕ ಭೂತಜ್ಜ, ದ್ಯಾವಜ್ಜಿ ಮುಂತಾದವರು. "ಸ್ವಾತಂತ್ರ್ಯ ಪೂರ್ವದಲ್ಲಿಯೇ ಶಿರಾ ತಾಲ್ಲೂಕಿನ ದೊಡ್ಡ ಅಗ್ರಹಾರದ ಮಣ್ಣಜ್ಜ ಎಂಬುವವರು ಭೂಮಾಲೀಕರಾಗಿದ್ದು, ಪ್ರಜಾಪ್ರತಿನಿಧಿ

ಸಭೆಗೆ ತೆರಿಗೆಯನ್ನು ಕಟ್ಟುತ್ತಿದ್ದರು" ಎಂಬ ಹೇಳಿಕೆ ಉಲ್ಲೇಖನೀಯ. ಇನ್ನೊಂದು ಪ್ರಮುಖವಾದ ಅಂಶವೆಂದರೆ ತಳಸಮುದಾಯಗಳಲ್ಲಿ ಬಹುಸಂಖ್ಯಾತರು ಭೂರಹಿತ ಕೃಷಿ ಕಾರ್ಮಿಕರಾಗಿದ್ದಾರೆ.

**ಜಾತಿ ಮತ್ತು ಭೂ ಸಂಬಂಧಗಳು**

ಜಾತಿಗಳು ಮತ್ತು ಅವುಗಳ ನಡುವಿನ ಭೂಮಿ ಸಂಬಂಧಗಳ ಮೇಲಿನ ಪೂರ್ವ ತೀರ್ಮಾನಗಳನ್ನು ಪರೀಕ್ಷಿಸಲು ಈ ಕೆಳಗಿನ ದಾಖಲೆಗಳನ್ನು ಬಳಸಲಾಗಿದೆ. ಭಾರತದ ವಿವಿಧ ಪ್ರದೇಶಗಳಲ್ಲಿ ಸಮಾಜಶಾಸ್ತ್ರಜ್ಞರುಗಳು ಮತ್ತು ಮಾನವ ಶಾಸ್ತ್ರಜ್ಞರುಗಳು ನಡೆಸಿದ ಗ್ರಾಮ ಅಧ್ಯಯನಗಳು ಹಾಗೂ ಕ್ಷೇತ್ರಕಾರ್ಯಧಾರಿತ ಮಾಹಿತಿ ಮಹತ್ವಪೂರ್ಣ ದಾಖಲೆಗಳಾಗಿವೆ. ಜಾತಿ ಮತ್ತು ಭೂಮಿ ಸಂಬಂಧವನ್ನು ಅರ್ಥ ಮಾಡಿಕೊಳ್ಳಲು ಈ ಬಗೆಯ ದಾಖಲೆಗಳನ್ನು ಬಳಸಲಾಗಿದೆ. ಬರ್ನಾರ್ಡ್ ಕೋಹನ್ ಅವರು ವಸಾಹತು ಕಾಲಘಟ್ಟದಲ್ಲಿ ಉತ್ತರ ಪ್ರದೇಶದ ಮಾದಪುರ ಹಳ್ಳಿಯಲ್ಲಿ ಕ್ಷೇತ್ರಕಾರ್ಯ ಮಾಡಿದ್ದಾರೆ. ಆ ಹಳ್ಳಿಯ ಕಥನ 'ಆನ್ ಆಂಥ್ರೋಪಾಲಜಿಸ್ಟ್ ಅಮಾಂಗ್ ದಿ ಹಿಸ್ಟೋರಿಯನ್ಸ್ ಅಂಡ್ ಅದರ್ ಏಸ್ಸೇಸ್' ಎನ್ನುವ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ.

ಬರ್ನಾರ್ಡ್ ಕೋಹನ್ ಅವರು "೧೯೪೮ರ ಗ್ರಾಮ ಲೆಕ್ಕಿಗರ ಜನಗಣತಿಯ ಆಧಾರದ ಮೇಲೆ ಪ್ರಮುಖವಾಗಿ ಐದು ಜಾತಿಗಳನ್ನು ಗುರುತಿಸುತ್ತಾರೆ. ಚಮ್ಮಾರರು(೬೩೬), ರಜಪೂತ್ ಠಾಕೂರ್ಸ್ ಅಥವಾ ಲಾರ್ಡ್‌ಗಳು(೪೩೬), ನಾನಿಯಸ್(೨೩೯), ಆಹಿರ್ಸ್(೧೧೬) ಮತ್ತು ಲೊಹರ್ಸ್(೬೭). ಊರಿನ ಇತರ ಜಾತಿಯ ಗುಂಪುಗಳು ೭೦ ಸದಸ್ಯರಿಗಿಂತ ಕಡಿಮೆ ಇವೆ."[೪] ಚಮ್ಮಾರರು ಸಾಂಪ್ರದಾಯಿಕ ವೃತ್ತಿಯ ಜೊತೆಗೆ ಕೂಲಿಕಾರ್ಮಿಕರಾಗಿ ಕಾರ್ಯವನ್ನು ನಿರ್ವಹಿಸುತ್ತಾರೆ. ಠಾಕೂರ್ ಸಮುದಾಯವನ್ನು ಜಮೀನ್ದಾರಿ ವರ್ಗವನ್ನಾಗಿ ಗುರುತಿಸಬಹುದು. ಚಮ್ಮಾರ ಕುಟುಂಬ ತುಂಡು ಭೂಮಿ ಅಥವಾ ಹೆಚ್ಚು ಅಂದರೆ ಒಂದು ಎಕರೆ ಭೂಮಿಯನ್ನು ಉಳುಮೆ ಮಾಡುತ್ತಿದ್ದರು. "ಒಟ್ಟು ೧೧೭ ಎಕರೆ ಕೃಷಿ ಭೂಮಿಯಲ್ಲಿ ಚಮ್ಮಾರ ಸಮುದಾಯ ಒಂಭತ್ತು ಎಕರೆ ಭೂಮಿಯನ್ನು ಪಾರಂಪರಿಕವಾಗಿ ಉಳುಮೆ ಮಾಡಿಕೊಂಡು ಬಂದಿತ್ತು. ೧೯೫೨ರಲ್ಲಿ 'ಜಮೀನ್ದಾರಿ ಅಬಾಲಿಷನ್ ಆಕ್ಟ್' ಬಂದ ನಂತರ ಮಾದಪುರದ ಚಮ್ಮಾರ ಸಮುದಾಯ ತುಂಡು ಭೂಮಿಯ ಒಡೆಯರಾದರು."[೫] ಮಾದಪುರದ ಕೃಷಿಗೆ ಯೋಗ್ಯವಾದ ೭೦%ರಷ್ಟು ಭೂಮಿಯ ಭೂಮಾಲೀಕತ್ವವನ್ನು ಠಾಕೂರ್ ಸಮುದಾಯ ಹೊಂದಿತ್ತು. ಪ್ರಮುಖವಾಗಿ ಚಮ್ಮಾರ ಸಮುದಾಯ ಕೃಷಿ ಕಾರ್ಮಿಕರಾಗಿ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಚಮ್ಮಾರ ಸಮುದಾಯವನ್ನು ಕಾರ್ಮಿಕರನ್ನಾಗಿಯೇ ಗುರುತಿಸುತ್ತಿದ್ದರು.

ಬರ್ನಾರ್ಡ್ ಕೋಹನ್ ಅವರು ಸಾಂಪ್ರದಾಯಿಕ ಆಧಾರಿತ ವೃತ್ತಿಗಳನ್ನು ಗುರುತಿಸುತ್ತಾರೆ. "ಚಮ್ಮಾರ ಸಮುದಾಯದ ಪ್ರಮುಖ ವೃತ್ತಿ ಚರ್ಮದ ಉತ್ಪನ್ನಗಳನ್ನು ತಯಾರಿಸುವುದು ಮತ್ತು ಕೃಷಿ-ಕಾರ್ಮಿಕರಾಗಿ ಕಾರ್ಯನಿರ್ವಹಿಸುವುದು"[೬] ಎಂದು ಅಭಿಪ್ರಾಯಪಡುತ್ತಾರೆ. ಈ ವೃತ್ತಿಯನ್ನು ಚಿನ್ನಸ್ವಾಮಿ ಸೋಸಲೆ ಅವರು "ಮಾದಿಗ ಸಮುದಾಯದ ಪ್ರಮುಖ ವೃತ್ತಿ, ಕೃಷಿಗೆ ಸಂಬಂಧಪಟ್ಟ ಸತ್ತ ಪ್ರಾಣಿಗಳ ಚರ್ಮದಿಂದ ಕೃಷಿ ಉತ್ಪನ್ನಗಳನ್ನು ತಯಾರಿಸುವುದು. ಇದಕ್ಕಾಗಿಯೇ ಮೈಸೂರು ಒಡೆಯರು ಚರ್ಮದ ಕುಟೀರಗಳನ್ನು ಸ್ಥಾಪಿಸಿದರು. ಹೊಲೆಯ ಸಮುದಾಯದವರು ಭೂಮಾಲೀಕರ ಮನೆಗಳಲ್ಲಿ ಜೀತ ಮಾಡುತ್ತಿದ್ದರು" ಎಂದು ಅಭಿಪ್ರಾಯ ಪಡುತ್ತಾರೆ. ಇದಕ್ಕೆ ಮೂಲಾಧಾರವಾಗಿ ಮಧ್ಯಕಾಲೀನ ಕಾಲಘಟ್ಟದಲ್ಲಿ ತುಮಕೂರು ಜಿಲ್ಲೆಯಲ್ಲಿ ಆಳ್ವಿಕೆ ಮಾಡಿದಂತಹ ಕುರಂಗರಾಯ ಚರ್ಮದ ಉತ್ಪನ್ನಗಳ ತಯಾರಿಕೆಗೆ ಹೆಚ್ಚಿನ ಮಹತ್ವ ಕೊಟ್ಟಿದ್ದರು ಎಂಬುದಕ್ಕೆ ಸಿದ್ಧರಬೆಟ್ಟದಲ್ಲಿ ಗಲ್ಲೇಬಾನಿ ಇಂದಿಗೂ ಸಾಕ್ಷಿಯಾಗಿ ಇದೆ.

ಜೇಮ್ಸ್ ಮೇನರ್, ಪೊಲಿಟಿಕಲ್ ಚೇಂಜ್ ಇನ್ ಎನ್ ಇಂಡಿಯನ್ ಸ್ಟೇಟ್-ಮೈಸೂರು ೧೯೧೭-೧೯೫೫ ಪುಸ್ತಕದಲ್ಲಿ "ಲಿಂಗಾಯತರು ಮತ್ತು ಒಕ್ಕಲಿಗರು ಅತೀ ದೊಡ್ಡ ಜಮೀನುದಾರರಲ್ಲ ಆದರು ಇತರ ಸಮುದಾಯಗಳಿಗಿಂತ ಹೆಚ್ಚಿನ ಭೂಮಿ ಹೊಂದಿದ್ದರು"[೭] ಎಂದು ಅಭಿಪ್ರಾಯಪಡುತ್ತಾರೆ. ಈ ವಿಚಾರದ ಮೂಲಕ ತುಮಕೂರು ಜಿಲ್ಲೆಯನ್ನು ನೋಡಿದಾಗ ಲಿಂಗಾಯತರು ಮತ್ತು ಒಕ್ಕಲಿಗರೇ ಪ್ರಮುಖ ಭೂಮಾಲೀಕ ಸಮುದಾಯಗಳೆಂದು ಗುರುತಿಸಬಹುದಾಗಿದೆ. ತಳಸಮುದಾಯಗಳು ಪಾರಂಪರಿಕ ವೃತ್ತಿಯ ಜೊತೆಗೆ ಕೃಷಿ ಕೂಲಿಕಾರ್ಮಿಕರಾಗಿ ದುಡಿಯುತ್ತಿದ್ದಾರೆ. ಎಂ.ಎನ್.ಶ್ರೀನಿವಾಸ್ ಅವರನ್ನು ಕುರಿತು ಅಧ್ಯಯನ ಮಾಡಿದ್ದಾರೆ. ಐವತ್ತರ ದಶಕದ ಮೈಸೂರಿನ ರಾಂಪುರ ಹಳ್ಳಿಯನ್ನು ಕುರಿತು ಅಧ್ಯಯನ ಮಾಡಿದ್ದಾರೆ. 'ದಿ ರಿಮೆಂಬರ್ಡ್ ವಿಲೇಜ್' ಎನ್ನುವ ಪುಸ್ತಕ ರೂಪದಲ್ಲಿ ಪ್ರಕಟವಾಗಿದೆ. ಎಂ.ಎನ್.ಶ್ರೀನಿವಾಸ್ ಅವರ ಪ್ರಕಾರ "ಹಳ್ಳಿಯಲ್ಲಿ ಒಕ್ಕಲಿಗರ ಕುಟುಂಬಗಳು ಹೆಚ್ಚಿನ ಸಂಖ್ಯೆಯಲ್ಲಿದ್ದವು. ಅಲ್ಲದೆ ಹಳ್ಳಿಯ ಅರ್ಧಕ್ಕಿಂತಲೂ ಹೆಚ್ಚಿನ ಭೂಮಿ ಒಕ್ಕಲಿಗ ಭೂಮಾಲೀಕರ ವಶದಲ್ಲಿದ್ದವು. ಊರಿನ ಪಟೇಲರು, ಒಕ್ಕಲಿಗರಲ್ಲಿ ಅತೀ ಹೆಚ್ಚಿನ ಪ್ರಮಾಣದಲ್ಲಿ ಭೂಮಿ ಇತ್ತು. ದಲಿತರು ಮುಖ್ಯ ಕೃಷಿ ಕಾರ್ಮಿಕರು ಮತ್ತು ಭೂರಹಿತರು. ಕುರುಬರು, ಉಪ್ಪಾರರು, ಗಾಣಿಗರು ಮುಂತಾದ ಹಿಂದುಳಿದ ಜಾತಿಗಳಿದ್ದವು. ಅವರಲ್ಲೂ ಅಲ್ಪಸ್ವಲ್ಪ ಭೂಮಿ ಇತ್ತು."[೮]

ತುಮಕೂರು ಜಿಲ್ಲೆಯಲ್ಲಿ ತಳಸಮುದಾಯಗಳಿಗೆ ಭೂಮಿ ಇಲ್ಲವೇ ಇಲ್ಲ ಎಂದು ಹೇಳುವಂತಿಲ್ಲ. ಕೆಲವು ಭಾಗಗಳಲ್ಲಿ ಅವರು ಅಲ್ಪಸ್ವಲ್ಪ ಭೂಮಿ ಹೊಂದಿದ್ದಾರೆ. ಆದರೆ ಭೂರಹಿತ ಕೃಷಿ ಕಾರ್ಮಿಕರೇ ಹೆಚ್ಚು. "ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ದಲಿತರು

ಹೊಂದಿರುವ ಭೂಮಿಯ ಪ್ರಮಾಣ ಬೇರೆ ಬೇರೆ ರೀತಿ ಇದೆ. ಮೈಸೂರು ಭಾಗದಲ್ಲಿ ಕರ್ನಾಟಕದ ಉಳಿದ ಭಾಗಗಳಿಗಿಂತ ಸ್ವಲ್ಪ ಹೆಚ್ಚಿನ ಪ್ರಮಾಣದ ಭೂಮಿಯನ್ನು ದಲಿತರು ಹೊಂದಿದ್ದಾರೆ. ಮಲೆನಾಡು ಭಾಗದಲ್ಲಿ ಅರ್ಧ ಎಕರೆಯಿಂದ ಹಿಡಿದು ಹೆಚ್ಚೆಂದರೆ ೧೫–೨೦ ಎಕರೆ ಭೂಮಿ ಹೊಂದಿರುವ ದಲಿತ ಕುಟುಂಬಗಳಿವೆ. ೫೦, ೧೦೦, ೫೦೦ ಎಕರೆ ಹೊಂದಿರುವ ದಲಿತರು ಅಪವಾದ, ಕಡಿಮೆ ಅಥವಾ ಇಲ್ಲ ಎಂದೇ ಹೇಳಬಹುದು."[೯] ತುಮಕೂರು ಜಿಲ್ಲೆಯಲ್ಲಿ ಬಹಳ ಕಡಿಮೆ ಇರುವ ದಲಿತ ಭೂಮಾಲೀಕರನ್ನು ಈಗಾಗಲೇ ಚರ್ಚಿಸಲಾಗಿದೆ.

**ಭೂ ಸುಧಾರಣೆಗಳು**

ಸ್ವಾತಂತ್ರ್ಯೋತ್ತರ ಭಾರತದಲ್ಲಿ ಭೂಮಿ ಪ್ರಶ್ನೆ ಹೆಚ್ಚು ಚರ್ಚೆಗೆ ಬಂದಿದೆ. ಇದನ್ನು ಕರ್ನಾಟಕದ ಏಕೀಕರಣ ಚಳುವಳಿಯಲ್ಲಿ ಪ್ರಮುಖವಾಗಿ ಗಮನಿಸಬಹುದು. ಕರ್ನಾಟಕದ ಗಡಿಗಳನ್ನು ನಿರ್ಧರಿಸುವ ಸಲುವಾಗಿ ಈ ಚರ್ಚೆಗಳು ನಡೆದಿವೆ. "ಕರ್ನಾಟಕದ ಗಡಿಯೊಳಗೆ ಸೇರಿದ ಭೂಮಿಯನ್ನು ಕನ್ನಡಿಗರು ಹೇಗೆ ಹಂಚಿಕೊಳ್ಳಬೇಕೆಂದು ಚರ್ಚೆ ನಡೆದಿಲ್ಲ. ಭೂಮಾಲೀಕ ಕನ್ನಡಿಗ ಮತ್ತು ಗೇಣಿದಾರ ಕನ್ನಡಿಗನ ಸಂಬಂಧ ಹೇಗಿರಬೇಕೆಂದು ಚರ್ಚೆ ನಡೆದಿಲ್ಲ."[೧೦] ಭೂರಹಿತ ಕೃಷಿ ಕಾರ್ಮಿಕರಾದ ತಳಸಮುದಾಯಗಳು ಮತ್ತು ಜಮೀನ್ದಾರರ ನಡುವಿನ ಸಂಬಂಧ ಹೇಗಿರಬೇಕೆಂದು ಚರ್ಚಿಸಿಲ್ಲ. ಪ್ರಾಚೀನ ಕಾಲದಿಂದ ಗಮನಿಸಿದಾಗ ಭೂಮಿಯು ಆಸ್ತಿ ಆಗಿರಲಿಲ್ಲ. ಭಾರತದ ಬಹುತೇಕ ಕಡೆಗಳಲ್ಲಿ ಹಳ್ಳಿಯ ಜನರು ತಮಗೆ ಯೋಗ್ಯವೆನಿಸಿದ ಭೂಮಿಯಲ್ಲಿ ಬೆಳೆಯನ್ನು ತೆಗೆಯುತ್ತಿದ್ದರು. ಕಂದಾಯವನ್ನು ಸಾಮ್ರಾಟರು ಸಾಮಂತರ ಮೇಲೂ, ಸಾಮಂತರು ಸ್ಥಳೀಯ ರಾಜರ ಮೇಲೂ ಹಾಕುತ್ತಿದ್ದರು. ವಸಾಹತು ಕಾಲದಲ್ಲಿ ರಾಜ ಮತ್ತು ಉಳುಮೆದಾರರ ನಡುವೆ ಮಧ್ಯವರ್ತಿಗಳಾಗಲೀ, ಖಾಸಗಿ ಆಸ್ತಿಯಾಗಲೀ ಇರಲಿಲ್ಲ.

ವಸಾಹತು ಕಾಲದಲ್ಲಿ ಬ್ರಿಟೀಷರು ಭಾರತದಲ್ಲಿ ಮೊದಲ ಬಾರಿಗೆ ಭೂಮಿಯನ್ನು ಅಳತೆ ಮಾಡಿ ಅರಣ್ಯ ಭೂಮಿ, ಕೃಷಿ ಭೂಮಿ, ಬಂಜರು ಭೂಮಿ, ಗೋಮಾಳ ಇತ್ಯಾದಿಯಾಗಿ ವಿಭಾಗ ಮಾಡಿದರು. ಕಂದಾಯ ವಸೂಲು ಮಾಡುವ ಸಲುವಾಗಿ ರೈತವಾರಿ ಮತ್ತು ಜಮೀನ್ದಾರಿ ಪದ್ಧತಿಗಳನ್ನು ಜಾರಿಗೆ ತಂದರು. "ಬ್ರಿಟೀಷರು ಕೃಷಿ ಯೋಗ್ಯ ಭೂಮಿಯನ್ನು ರೆವಿನ್ಯೂ ಭೂಮಿ ಎಂದು ಕರೆದು ಅದರ ಮೇಲೆ ಭೂ ಕಂದಾಯ ವಸೂಲು ಮಾಡತೊಡಗಿದರು. ಸಾಮಾನ್ಯ ರೈತರು ಈ ಭೂಕಂದಾಯದ ವಿರುದ್ಧ ಭಾರತದಾದ್ಯಂತ ಅನೇಕ ಹೋರಾಟಗಳನ್ನು ನಡೆಸಿದರು. ಆದರೆ ಪಾಳೇಗಾರರು, ರಾಜರು ಮತ್ತು ಸಂಸ್ಥಾನದವರು ಬ್ರಿಟೀಷರಿಗೆ ಕಂದಾಯ

ಕೊಡುತ್ತಿದ್ದರು. ಬ್ರಿಟೀಷರು ಇವರನ್ನೆಲ್ಲ ನೇರವಾಗಿ ಶೋಷಣೆ ಮಾಡಲು ಶುರು ಮಾಡಿದ ಮೇಲೆ, ಇವರು ಕೂಲಿ ಮಾಡುವ ಆಳುಗಳಿಗೆ ಕೂಲಿ ಕೊಡದೆ ಆ ಆಳುಗಳಿಂದ ಬಿಟ್ಟಿ ಕೆಲಸ ಮಾಡಿಸಲು ನೇರವಾಗಿ ಪ್ರಾರಂಭಿಸಿದರು."[೧೧] ಪರಿಣಾಮವಾಗಿ ಕರ್ನಾಟಕದ ಅನೇಕ ಭಾಗಗಳಲ್ಲಿ ದಲಿತರು ಬಿಟ್ಟಿ ಆಳುಗಳಾಗಿ ಮಾರ್ಪಟ್ಟರು. ತುಮಕೂರು ಜಿಲ್ಲೆಯಲ್ಲೂ ಕೂಡ ಇಂತಹ ಉದಾಹರಣೆಗಳು ಸಿಗುತ್ತವೆ.

ಕರ್ನಾಟಕ ಏಕೀಕರಣವಾಗುವುದಕ್ಕೂ ಮುನ್ನ ಕರ್ನಾಟಕದ ವಿವಿಧ ಪ್ರದೇಶಗಳಲ್ಲಿ ವಿಭಿನ್ನವಾದ ಭೂ ಮಸೂದೆ ಕಾಯಿದೆಗಳಾಗಿದ್ದವು. ಬಾಂಬೆ ಕರ್ನಾಟಕದಲ್ಲಿ(ಉತ್ತರ ಕನ್ನಡ, ಧಾರವಾಡ, ವಿಜಾಪುರ, ಬೆಳಗಾವಿ ಜಿಲ್ಲೆಗಳಲ್ಲಿ), ಹೈದಾರಾಬಾದ್ ಕರ್ನಾಟಕದಲ್ಲಿ(ರಾಯಚೂರು, ಬೀದರ್, ಗುಲ್ಬರ್ಗಾ), ಮದ್ರಾಸ್ ಕರ್ನಾಟಕ ಭಾಗದಲ್ಲಿ(ದಕ್ಷಿಣ ಕನ್ನಡ, ಕೊಳ್ಳೇಗಾಲ, ಬಳ್ಳಾರಿ), ಮೈಸೂರು ಸಂಸ್ಥಾನದಲ್ಲಿ ಆಯಾಯ ಪ್ರದೇಶಗಳ 'ಟೆನೆನ್ಸಿ ಅಂಡ್ ಎಗ್ರಿಕಲ್ಚರಲ್ ಲ್ಯಾಂಡ್ಸ್ ಆಕ್ಟ್'ಗಳು ಚಲಾವಣೆಯಲ್ಲಿದ್ದವು. ಮದ್ರಾಸಿನ ಶಾಸನಾಂಗದ ಉಭಯ ಸದನಗಳ ಸಂಯುಕ್ತ ಪರಿಶೀಲಕ ಸಮಿತಿಗೆ ನ್ಯಾಯವಾದ ಗೇಣಿ ನಿರ್ಣಯ ಮಸೂದೆಯನ್ನು ವಹಿಸಿಕೊಟ್ಟಿತು. ಸಮಿತಿಯ ಅಧ್ಯಕ್ಷರೂ, ಕಂದಾಯ ಸಚಿವರೂ ಆಗಿರುವ ಎಂ.ಎ.ಮಾಣಿಕ್ಯವೇಲು ನಾಯಕ ಅವರು ಹೇಳಿರುವಂತೆ ಪ್ರಮುಖ ಸ್ವರೂಪದ ಬದಲಾವಣೆಗಳಿಗೆ ಒಳಗಾಗಿರುತ್ತದೆ.

ಪರಿಶೀಲಕ ಸಮಿತಿಯ ವರದಿಯಲ್ಲಿ ಭೂಮಾಲೀಕರಿಂದಲೇ ಸರಕಾರಕ್ಕೆ ಹೆಚ್ಚಿನ ಮನವಿಗಳು ಬಂದವೆಂದು ಹೇಳಲಾಗಿದೆ. "ಹಿಂದೂ ಧಾರ್ಮಿಕ ಉಂಬಳಿ ವಿಭಾಗದ ಸಲಹೆಗಳನ್ನೂ ಕೇಳಿಕೊಳ್ಳಲಾಯಿತೆಂದು ಸಮಿತಿ ತಿಳಿಸಿತು. ಭೂ ಮಾಲೀಕರು ಧನಿ ಮತ್ತು ಒಕ್ಕಲುಗಳ ನಡುವೆ ಉತ್ಪನ್ನದ ಅಂಶವನ್ನು ೬೦, ೪೦ ಎಂಬ ರೀತಿ ಹಂಚಿಕೊಳ್ಳುವುದೇ ಸೂಕ್ತವೆಂದು ವಾದಿಸಿರುವುದಾಗಿ ತಿಳಿದುಬರುತ್ತದೆ. ಮೂಲ ಮಸೂದೆಯು ಉಲ್ಲೇಖಿಸಿರುವ 'ನಡು ಬೆಳೆ'ಯಲ್ಲಿ ಹುಲ್ಲು, ಧಾನ್ಯದ ಸಿಪ್ಪೆ ಮತ್ತು ಒಣದಂಟುಗಳಲ್ಲಿ ಪಾಲು ಸಿಗಬೇಕೆಂದು ಭೂಮಾಲೀಕರು ವಾದಿಸಿದ್ದಾರೆ."[೧೨] ಭೂಮಾಲೀಕರ ಈ ನಿಲುವನ್ನು ಪರಿಶೀಲಕ ಸಮಿತಿಯು ಸಂಪೂರ್ಣವಾಗಿ ಒಪ್ಪಿಲ್ಲ. ಆದ್ದರಿಂದಾಗಿ ಅದು ಮೂಲ ಮಸೂದೆಯು ಉದ್ದೇಶಿಸಿದುದಕ್ಕಿಂತಲೂ ಹೆಚ್ಚಿನ ಅನುಕಂಪವನ್ನು ಭೂಮಾಲೀಕರಿಗೆ ತೋರಿಸಿತು. ಅಲ್ಲದೆ ಒಕ್ಕಲುಗಳಲ್ಲಿ ಹಿಂದೆ ಮೂಡಿದ ಸಂತೋಷ ಭಾವನೆಯನ್ನು ಗಣನೀಯವಾಗಿ ಕುಗ್ಗಿಸಿತು. ಮಸೂದೆಯ ಉದ್ದೇಶವೇ ಕೆಟ್ಟು ಹೋಗುವಷ್ಟು ಮಟ್ಟಿನ ಬದಲಾವಣೆಗಳನ್ನು ಪರಿಶೀಲಕ ಸಮಿತಿಯು ಮಾಡುವುದಕ್ಕೆ ಯಾವುದಾದರೂ ಪ್ರೇರಕವಾಗಿದ್ದರೆ, ಅದು ಭೂಮಾಲೀಕ ವರ್ಗದ ಸಂಘ ಶಕ್ತಿ ಮತ್ತು ವರ್ಚಸ್ಸಿನ ಬಲ ಎನ್ನಬಹುದು. ಒಕ್ಕಲುಗಳು ಸಂಘಟಿತವಾದ ಯಾವ ಪ್ರಯತ್ನವನ್ನು ಮಾಡಲಿಲ್ಲ.

ಮೂಲ ಮಸೂದೆಯಲ್ಲಿ ವಿಶೇಷವಾದ ಬದಲಾವಣೆಯಾಗುವುದನ್ನು ತಡೆಯುವಂತೆ ಪರಿಣಾಮಕಾರಿ ಕ್ರಮಗಳನ್ನು ಕೈಗೊಳ್ಳಲಿಲ್ಲ ಎಂಬ ವಿಷಯ ಸಮಿತಿಯ ವರದಿಯಿಂದ ಸ್ಪಷ್ಟವಾಗುತ್ತದೆ.

ಸಮಿತಿಯು ಮಾಡಿದ ಬದಲಾವಣೆಗಳೇನು? ಮಸೂದೆಯ ರೂಪವನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ "ಪರಿಶೀಲಕ ಸಮಿತಿಯು ಬಹುಮತದ ತೀರ್ಮಾನದಿಂದ ಮುಖ್ಯ ಬೆಳೆಯಲ್ಲಿ ಮಾತ್ರ ಧನಿಗೆ ೪೦% ಪಾಲು ಗೇಣಿ ರೂಪದಲ್ಲಿ ಸಂದಾಯವಾಗಬೇಕೆಂದಿರುವ ಸೂತ್ರವನ್ನು ಬದಲಾಯಿಸಿ ಭೂಮಿಯ ಒಟ್ಟು ಉತ್ಪನ್ನದಲ್ಲಿ ೪೦% ಪಾಲು ಗೇಣಿಯಾಗಿ ಸಂದಾಯವಾಗ ಬೇಕೆಂದು ನಿಗದಿಗೊಳಿಸಿದ್ದಲ್ಲದೆ ಬೈಹುಲ್ಲು, ಧಾನ್ಯದ ಸಿಪ್ಪೆ, ಒಣ ದಂಟು ಇತ್ಯಾದಿಗಳಲ್ಲಿ ದನಿಗೆ ೨೦% ಸಲ್ಲಬೇಕೆಂದು ಹೇಳಿದೆ."[೧೩] ಶಾಸನದಂತೆ ಕೊಡಬೇಕಾದ ಗೇಣಿಗಿಂತಲೂ ಕಡಿಮೆ ಗೇಣಿಯನ್ನಷ್ಟೇ ಗೇಣಿ ಚೀಟಿನಂತೆ ಸಂದಾಯ ಮಾಡುತ್ತಾ ದೇವಾಲಯ, ಮಠ ಇತ್ಯಾದಿ ಧಾರ್ಮಿಕ ಸಂಸ್ಥೆಗಳ ನೆಲವನ್ನು ಸಾಗುವಳಿ ಮಾಡುವ ಒಕ್ಕಲುಗಳು ಆಗ ಬಿಟ್ಟಿ ಸೇವೆ ಸಲ್ಲಿಸಲು ಬದ್ಧರಿರಬೇಕೆಂದು ಸಮಿತಿ ಹೊಸ ಟಿಪ್ಪಣಿಯನ್ನು ಜೋಡಿಸಿತು. ತಾನು ಸಾಗುವಳಿ ಮಾಡುವ ಭೂಮಿಯು ತನ್ನದೇ ಎಂಬ ಗ್ಯಾರಂಟಿಯನ್ನು ಕೊಡದ ಭೂ ಸುಧಾರಣೆಯ ಎಲ್ಲ ಪ್ರಯತ್ನವೂ ನಿಷ್ಪ್ರಯೋಜಕವಾಗಿದೆ. ಒಟ್ಟು ಉತ್ಪಾದನೆಯಲ್ಲಿ ೨೦% ಗೇಣಿಯನ್ನು ಕೊಟ್ಟರೆ ಸಾಕೆಂಬ ಸೂತ್ರವಿಲ್ಲದಿದ್ದರೆ, ನ್ಯಾಯ ಗೇಣಿ ಮಸೂದೆಗೆ ಅರ್ಥವೇ ಇಲ್ಲ. ನಡು ಬೆಳೆಯಲ್ಲೂ ದನಿಗೆ ಪಾಲು ಕೊಡಬೇಕು, ಹುಲ್ಲು, ಧಾನ್ಯದ ಸಿಪ್ಪೆ ಇತ್ಯಾದಿಗಳಲ್ಲೂ ಪಾಲು ಕೊಡಬೇಕು ಎಂದು ಹೇಳಿರುವುದು ಮಸೂದೆ ಭೂ ಮಾಲೀಕರ ಪರವಾದ ನಿಲುವನ್ನು ಹೊಂದಿದೆ ಎಂಬುದಕ್ಕೆ ಸಾಕ್ಷಿಯಾಗಿದೆ.

"ಯೋಜನಾ ಆಯೋಗವು ಒಟ್ಟು ಉತ್ಪನ್ನದಲ್ಲಿ ೨೦% ಮಾತ್ರ ಗೇಣಿಯಾಗಿರಬೇಕೆಂದು ಹೇಳಿದ್ದರೂ ಸಮಿತಿಯು ಅದನ್ನು ಉದ್ದೇಶಪೂರ್ವಕವೆಂಬಂತೆ ಕಡೆಗಣಿಸಿ, ಧನಿಗಳಿಗೆ ೪೦% ಪಾಲನ್ನು ಕೊಡುವಷ್ಟು ಔದಾರ್ಯದಿಂದ ವರ್ತಿಸಿದೆ. ಬೇರೆ ಅನೇಕ ತಿದ್ದುಪಡಿಗಳೂ ಮಹತ್ವದಿಂದ ಕೂಡಿವೆ. ಸಾಗುವಳಿದಾರ ಒಕ್ಕಲು ಉದಾಸೀನ ಮಾಡಿದಾಗ ಅಥವಾ ಯಾವುದಾದರೂ ಬೆಳೆಯನ್ನು ಬೆಳೆಸದೆ ಸುಮ್ಮನೆ ಕುಳಿತಾಗ ಸಹ ಧನಿಯು ನ್ಯಾಯವಾದ ಗೇಣಿಯನ್ನು ವಸೂಲು ಮಾಡಲು ಹಕ್ಕುದಾರ ಆಗುತ್ತಾರೆ."[೧೪] ಬೇರೆಡೆ ಸೂಚಿಸಿದ ವಿಷಯಗಳಿಗೆ ಒಳಪಟ್ಟು ಬೀಜದ ಬೆಲೆ, ಗೊಬ್ಬರ, ಉಳುಮೆ, ಪೈರು ಕೊಯ್ಯುವಿಕೆ, ಧಾನ್ಯ ಮಾಡುವಿಕೆ ಇತ್ಯಾದಿ ಎಲ್ಲ ಬಗೆಯ ಸಾಗುವಳಿ ವೆಚ್ಚವನ್ನೂ ಸಾಗುವಳಿದಾರ ಒಕ್ಕಲೇ ನೋಡಿಕೊಳ್ಳಬೇಕಾಗಿದೆ. ಗೇಣಿದಾರ ನಿರಂತರ ಶೋಷಣೆಗೆ ಒಳಗಾಗುತ್ತಾನೆ.

ಮದ್ರಾಸಿನ ಕಂದಾಯ ಮಂತ್ರಿ ಎಮ್.ಎ.ಮಾಣಿಕ್ಯವೇಲು ನಾಯಕರ್ ಅವರು ದಿನಾಂಕ ೧೧ರಲ್ಲಿ ಸಂಜೆ ಮಂಗಳೂರು ಸರ್ಕಲ್ ಕಾಂಗ್ರೆಸ್ ಕಮಿಟಿ ಆಶ್ರಯದಲ್ಲಿ ಕೇಂದ್ರ ಮೈದಾನದಲ್ಲಿ ಸೇರಿದ ಸಾರ್ವಜನಿಕ ಸಭೆಯಲ್ಲಿ ಮಾತನಾಡುತ್ತಾ "ಮೊನ್ನೆ ತಾನೇ ಮದ್ರಾಸು ಶಾಸನ ಸಭೆಯಲ್ಲಿ ಸಾಗುವಳಿ ಒಕ್ಕಲುಗಳು ಹಿತರಕ್ಷಣಾ ಮಸೂದೆ ಮತ್ತು ಸಾಗುವಳಿ ಒಕ್ಕಲುಗಳ ನ್ಯಾಯ ಗೇಣಿ ಮಸೂದೆಗಳು ಮಂಜೂರಾಗಿದ್ದು ಅವುಗಳಲ್ಲಿ ಒಂದನೇ ಮಸೂದೆಗೆ ಈಗಾಗಲೇ ರಾಷ್ಟ್ರಾಧ್ಯಕ್ಷರ ಸಮ್ಮತಿ ದೊರೆತಿದೆ. ಎರಡನೆಯದಕ್ಕೆ ಕೆಲವೇ ದಿನಗಳಲ್ಲಿ ಸಮ್ಮತಿ ದೊರೆಯಬಹುದು. ಒಕ್ಕಲಿಗೆ ಉತ್ಪತ್ತಿಯ ಶೇಕಡ ೭೫ರಷ್ಟು, ದನಿಗೆ ೨೫ರಷ್ಟು ಗೇಣಿ ಪ್ರಮಾಣವಿರಬೇಕೆಂದು ಒಕ್ಕಲುಗಳ ಪರವಾದ ಬೇಡಿಕೆ ಇತ್ತು. ಎರಡು ವರ್ಷಗಳ ಹಿಂದೆ ನಾನು ಇಲ್ಲಿಗೆ ಬಂದಾಗ ಇಲ್ಲಿಯ ಭೂಮಾಲೀಕರು ಒಕ್ಕಲಿಗೆ ಉತ್ಪತ್ತಿಯ ಶೇಕಡ ೬೦ ಇರಿಸಿದುದು ಸರಿಯಲ್ಲವೆಂದು ವಾದಿಸಿದ್ದರು. ಆದರೆ ಬೊಂಬಾಯಿಯ ಕಾನೂನಿನಲ್ಲಿ ಧನಿಗೆ ಉತ್ಪತಿಯಲ್ಲಿ ಕೇವಲ ೧/೬ನ್ನು, ಹೈದರಾಬಾದಿನಲ್ಲಿ ೧/೫ನ್ನು ಇರಿಸಲಾಗಿದೆ ಎಂಬುದನ್ನು ಗಮನಿಸಬೇಕಾಗಿದೆ. ಈ ವಿಚಾರವನ್ನು ಗಮನದಲ್ಲಿಟ್ಟುಕೊಂಡು ಮದ್ರಾಸು ಶಾಸನ ಸಭೆಯು ಮಂಜೂರು ಮಾಡಿರುವ ಮೇಲಿನ ಎರಡು ಭೂಸುಧಾರಣಾ ಕಾನೂನುಗಳನ್ನೇ ಪರಿಶೀಲಿಸಿ, ಇವುಗಳಿಗೆ ಬೆಂಬಲ ಕೊಡಬೇಕು. ಒಕ್ಕಲುಗಳಿಗೆ ಸಹಾಯ ನೀಡಿ, ಭೂ ಮಾಲೀಕರಿಗೆ ನ್ಯಾಯ ಒದಗಿಸಲಿಕ್ಕಾಗಿ ಈ ಸುಧಾರಣೆಗಳನ್ನು ಕೈಗೊಂಡಿಲ್ಲ. ಸರಕಾರವು ಈ ಸುಧಾರಣೆಗಳು ನ್ಯಾಯವಾದುದೆಂಬುದನ್ನು ಮನಗಂಡಿದೆ. ಇದರಿಂದಾಗಿ ಧನಿಗೆ ಸಂತೋಷ–ಒಕ್ಕಲಿಗೆ ಸಮಾಧಾನವಾಗಬೇಕು. ಇದೇ ಸರಕಾರದ ಧ್ಯೇಯವಾಗಿದೆ"[೧೫] ಎಂದು ಹೇಳಿದರು. ಪ್ರಸ್ತುತ ಜಿಲ್ಲೆಯು ಸದ್ಯವೇ ವಿಶಾಲ ಮೈಸೂರು ರಾಜ್ಯಕ್ಕೆ ಸೇರಲಿದ್ದು, ಹೊಸ ವಿಶಾಲ ಮೈಸೂರು ರಾಜ್ಯದಲ್ಲಿ ಧನಿಗೂ ಒಕ್ಕಲಿಗೂ ಹಿತವಾಗುವಂತೆ ಭೂಸುಧಾರಣೆ ಜಾರಿಯಾಗಬೇಕೆಂಬುದು ಅವರ ಹೇಳಿಕೆಯ ಅಭಿಪ್ರಾಯವಾಗಿದೆ.

ಕಾಂಗ್ರೆಸ್ ಕಾರ್ಯಕರ್ತರನ್ನುದ್ದೇಶಿಸಿ ನೆಹರೂ ಅವರು "ಭೂಸುಧಾರಣೆಯ ಗತಿ ಅತಿ ನಿಧಾನಗೊಂಡುದು ಹೆಚ್ಚಿನ ಸಂತಾಪದಾಯಕ. ಇನ್ನಾದರೂ ಪ್ರಗತಿಪರ ಭೂಸುಧಾರಣೆಗಳು ಶಾಸನ ರೂಪದಲ್ಲಿ ಕಾರ್ಯರೂಪಕ್ಕೆ ಬರಬೇಕು. ಇದಕ್ಕಾಗಿ ಕಾಂಗ್ರೆಸು ಹೆಚ್ಚಿನ ಆಸಕ್ತಿಯಿಂದ ದುಡಿಯಬೇಕು. ಉಳುವವನಿಗೆ ವಿಶೇಷ ಸೌಲಭ್ಯವನ್ನು ಒದಗಿಸಿಕೊಡದಿದ್ದರೆ ವ್ಯವಸಾಯದ ಉತ್ಪಾದನೆ ಎಂದಿಗೂ ಅಭಿವೃದ್ಧಿಯಾಗದು ಮತ್ತು ಅವನಲ್ಲಿಯ ಕಾರ್ಯತತ್ಪರತೆ ಸಹ ಬಲಿತುಕೊಳ್ಳುವಂತಿಲ್ಲ."[೧೬] ಕೃಷಿಯ ಉತ್ಪಾದನೆ ಅಭಿವೃದ್ಧಿಯಾಗಬೇಕಾದರೆ, ಉಳುವವನಿಗೆ ವಿಶೇಷ ಸೌಲಭ್ಯವನ್ನು ಒದಗಿಸಿಕೊಡುವಂತಹ ಭೂಸುಧಾರಣೆಗಳು ಜಾರಿಯಾಗಬೇಕು ಎಂಬ ಅಭಿಪ್ರಾಯಗಳು ೧೯೫೦ರ ದಶಕದಲ್ಲಿ ಇದ್ದುದನ್ನು ಗಮನಿಸಬಹುದು.

ಮೈಸೂರು ಒಕ್ಕಲು ಭೂಮಿಯ ಕಾನೂನುಗಳ ಕಮಿಟಿಯ ಪ್ರಶ್ನಾವಳಿಯ ಕುರಿತು ಉಡುಪಿ ತಾಲ್ಲೂಕು ಭೂಮಾಲೀಕರ ಮತ್ತು ಕೃಷಿಕರ ಸಂಘದವರು ದಿನಾಂಕ ೧–೬–೧೯೫೭ರಂದು ಒಪ್ಪಿಸಿದ ಮನವಿ ಪತ್ರವನ್ನು ಈ ಕೆಳಕಂಡಂತೆ ಗಮನಿಸಬಹುದು.

"೧. ಒಕ್ಕಲುತನದ ಸ್ಥಿರತೆಯನ್ನು ಸಾಧಿಸಲು ಮತ್ತು ನ್ಯಾಯವಾದ ಗೇಣಿ ಬಗ್ಗೆ ಈಗ ಇರುವ ನಿಬಂಧನೆಯು ಸಾಕಾಗುತ್ತದೆ.

೨. ಗೇಣಿಯ ಮೊತ್ತ

೩. ಒಕ್ಕಲುತನದ ಭದ್ರತೆ

೪. ಧನಿಯು ಸ್ವಂತ ಉಪಯೋಗದ ಸಾಗುವಳಿ ಬಗ್ಗೆ ಒಕ್ಕಲಿನಿಂದ ಭೂಮಿ ಬಿಡಿಸಿಕೊಳ್ಳುವುದು.

೫. ಕ್ರಯಕ್ಕೆ ಪಡೆಯಲು ಒಕ್ಕಲಿಗೆ ಹಕ್ಕು.

೬. ಭೂಮಿಯ ಒಡೆತನದ ಪರಮ ಮಿತಿ.

೭. ಆಯದ ಸಾಧನಕ್ಕಾಗಿ ಮತ್ತು ಸ್ವತಃ ಬೇಸಾಯಗಾರರಾಗಿರದೆ, ಆಸ್ತಿಯ ಸಂಗ್ರಹ ಮಾಡುವ ಗ್ರಾಮದಲ್ಲಿ ಅಥವಾ ಭೂಮಿಯಲ್ಲಿ ವಾಸಿಸದವರು ಒಡೆತನ ಪಡೆದರೆ ನಿಷೇಧ.

೮. ಸರಕಾರದ ಕಡೆಯಿಂದ ವಶಪಡಿಸಿಕೊಳ್ಳುವುದು, ಆಡಳಿತ ಅಥವಾ ಕಾನೂನು ಮೇರೆಗೆ ಕ್ರಯಕ್ಕೆ ಪಡೆಯುವುದು.

೯. ಒಂದು ಗ್ರಾಮದಲ್ಲಿ ಆಸ್ತಿಯಿದ್ದರೂ, ಬೇಸಾಯಗಾರರಲ್ಲದ ಅಥವಾ ಗ್ರಾಮದಲ್ಲಿ ವಸತಿ ಇಲ್ಲದವರ ಭೂಮಿಯನ್ನು ಸರಕಾರವು ವಶಪಡಿಸಿಕೊಳ್ಳುವುದು.

೧೦. ಬೇಸಾಯಗಾರರಲ್ಲದವರಿಗೆ ಭೂಮಿಯನ್ನು ಪರಾಧೀನ ಮಾಡುವುದಕ್ಕೆ ನಿಷೇಧ.

೧೧. ನಿರ್ದಿಷ್ಟ ಮಿತಿಗಿಂತ ಕಡಿಮೆ ಆಯವಿದ್ದವರಿಗೆ ಈ ಕಾನೂನಿಂದ ವಿನಾಯಿತಿ."[೧೭]

ಹೀಗೆ ಭೂಮಿಯನ್ನು ವಶಪಡಿಸಿಕೊಳ್ಳುವ ಬಾಬಿನಲ್ಲಿ ಈ ಸಂಘವು ವಿರುದ್ಧವಾಗಿರುವುದನ್ನು ಗಮನಿಸಬಹುದು. "೧೯೪೬ರಿಂದ ೧೯೫೭ರವರೆಗೆ ರೈತರು ತೆಲಂಗಾಣ ಹೋರಾಟ ನಡೆಸಿದರು. ಈ ಹೋರಾಟ ೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂತು ಎಂಬುದನ್ನು ವ್ಯಂಗ್ಯ ಮಾಡಿತು. ಆ ಹೋರಾಟದ ಪ್ರಭಾವದಲ್ಲಿ ೧೯೬೫ರಿಂದ ೬೭ರವರೆಗೆ ನಕ್ಸಲ್‌ಬರಿ ಹೋರಾಟ ನಡೆಸಲಾಯಿತು."[೧೮] ಇವೆರಡೂ ಇಂಡಿಯಾದಲ್ಲಿ ಭೂರಹಿತರು ಭೂಮಿ ಪಡೆಯುವುದಕ್ಕಾಗಿ ಮತ್ತು ಭೂಮಿಯ ಮೇಲಿನ ಹಕ್ಕಿಗಾಗಿ ನಡೆಸಿದ ಹೋರಾಟಗಳು. ತೆಲಂಗಾಣ ಹೋರಾಟ ನಡೆದಾಗ ಪ್ರಭುತ್ವ ವಿನೋಬಾಭಾವೆಯ ಮೂಲಕ ನಕಲಿ ಭೂದಾನ ಚಳುವಳಿಯನ್ನು ಸೃಷ್ಟಿ

ಮಾಡಿತು. ಇವರ ತಂತ್ರದ ಸ್ವರೂಪ ಏನೆಂದರೆ, ಭೂರಹಿತರು ತಾವೇ ಮುಂದಾಗಿ ಭೂಮಿಗಾಗಿ ಹೋರಾಟ ಮಾಡಬೇಕಿಲ್ಲ. ಬದಲಾಗಿ ಭೂ ಒಡೆಯರು ತಮ್ಮ ಬಳಿ ಇರುವ ಹೆಚ್ಚುವರಿ ಭೂಮಿಯನ್ನು ಸರಕಾರಕ್ಕೆ ಕೊಡಬೇಕು. ಆ ಹೆಚ್ಚುವರಿ ಭೂಮಿಯನ್ನು ಸರಕಾರವೇ ಮುಂದೆ ನಿಂತು ಭೂರಹಿತರಿಗೆ ಹಂಚಬೇಕು. ಈ ವಿಧಾನದಿಂದ ಮಾತ್ರ ಭೂರಹಿತರ ಭೂಮಿಯ ಪ್ರಶ್ನೆಯನ್ನು ಬಗೆಹರಿಸಬಹುದು ಎಂಬುದಾಗಿತ್ತು.

"ತೆಲಂಗಾಣ ಹೋರಾಟದಂಥದ್ದೇ ಮತ್ತೊಂದು ಹೋರಾಟವನ್ನು ರೈತರು ಕೈಗೆತ್ತಿಕೊಂಡರು. ಆದು ೧೯೬೭ರಲ್ಲಿ ಸಿಡಿದ ನಕ್ಸಲ್‌ಬರಿ ಹೋರಾಟ. ತೆಲಂಗಾಣ ಹೋರಾಟದಲ್ಲಿ ಭೂದಾನ ಚಳುವಳಿಯನ್ನು ಪರ್ಯಾಯವಾಗಿ ಪ್ರಭುತ್ವ ಮುಂದಿಟ್ಟಿತು. ನಕ್ಸಲ್‌ಬರಿ ಹೋರಾಟದಲ್ಲಿ ಪ್ರಭುತ್ವ 'ಉಳುವವನೆ ಭೂ ಒಡೆಯ' ಎಂಬ ನಕಲಿ ಘೋಷಣೆಯನ್ನು ಪ್ರಚಾರ ಮಾಡಿತು."[೧೯] ವಾಸ್ತವವಾಗಿ ಆ ಹಿಂದೆ ಭೂರಹಿತರು ನಡೆಸಿದ ತೆಲಂಗಾಣ ಹೋರಾಟದ ಪ್ರಧಾನ ಘೋಷಣೆಯೇ 'ಉಳುವವನೇ ಭೂ ಒಡೆಯ' ಎಂಬುದಾಗಿತ್ತು. ಆದರೆ ಶೋಷಕ ಪ್ರಭುತ್ವಕ್ಕೆ ನಕ್ಸಲ್‌ಬರಿ ಹೋರಾಟವನ್ನು ದಿಕ್ಕು ತಪ್ಪಿಸುವುದು ಒಂದು ಕಡೆಗಿದ್ದರೆ; ಕೃಷಿಯನ್ನು ಸಂಪೂರ್ಣ ಉದ್ಯಮೀಕರಿಸುವ, ವಾಣಿಜ್ಯೀಕರಿಸುವ ತಂತ್ರ ಮತ್ತೊಂದು ಕಡೆಗಿತ್ತು. ಸ್ವತಂತ್ರ ಭಾರತದ ಜನತಾ ಸರಕಾರಕ್ಕೆ ತಲೆ ಸಿಡಿತವನ್ನುಂಟುಮಾಡುವ ಸಮಸ್ಯೆಗಳಲ್ಲಿ ಆಹಾರ ವಸ್ತುಗಳ ಬೆಲೆಯೇರಿಕೆಯೂ ಒಂದಾಗಿತ್ತು. "ಈ ಬೆಲೆಯೇರುವಿಕೆಯು ಆ ವಸ್ತುಗಳ ಉತ್ಪಾದಕರಲ್ಲದ ಲಾಭಕೋರರನ್ನುಳಿದು ಸಾಮಾನ್ಯವಾಗಿ ಇತರ ಎಲ್ಲಾ ಮಂದಿಯ ಕತ್ತು ಹಿಸುಕುವಂತಹದ್ದಾಗಿದೆ. ಸಾಮಾನ್ಯ ಜನತೆಗೆ ಸಂಪೂರ್ಣ ಅಹಿತಕಾರಿಯಾಗಿದೆ ಎನ್ನಬಹುದು. ಈ ಬೆಲೆಯೇರುವಿಕೆಗೆ ಬಹುಮಟ್ಟಿಗೆ ಭಾರತೀಯ ಸಮಾಜ ವ್ಯವಸ್ಥೆಯು ಅವಕಾಶ ನೀಡಿರಬಹುದು."[೨೦] ಕೈಯಲ್ಲಿದ್ದ ವಸ್ತುವನ್ನು ಹೆಚ್ಚಾಗಿ ಆದಷ್ಟು ಹೆಚ್ಚು ಬೆಲೆಗೆ ಮಾರುವ ಆಸೆಯು ಯಾರಿಗೂ ಇಲ್ಲದಿರುವುದಿಲ್ಲ. ಆದರ್ಶವನ್ನು ಹೇಳಹೊರಟವರೇ ಆದರೂ ಅದಕ್ಕೆ ಹೊರತಲ್ಲ. ಆದರೆ ಅಸಹಾಯಕರ ಹಸಿವನ್ನೇ ಹಿಂಡುವ ಈ ಲಾಭಕೋರತನವನ್ನು ಸಾಮೂಹಿಕವಾಗಿ ತಡೆಗಟ್ಟುವುದು ಸಾಧ್ಯವಾದಲ್ಲಿ, ಅದಕ್ಕೆ ಬೆಂಬಲ ಕೊಡದೆ ಹೋದರೆ ಅವರು ಶುದ್ಧ ಸ್ವಾರ್ಥಿಗಳೆನ್ನುವುದಕ್ಕೆ ಬೇರೆ ನಿದರ್ಶನ ಬೇಡವಾಗುತ್ತದೆ.

ಮೈಸೂರಿನ ಕಂದಾಯ ಮಂತ್ರಿ ಎಂ.ಪಿ.ಪಾಟೀಲ ಅವರು ಪತ್ರಿಕಾ ಪ್ರತಿನಿಧಿಗಳೆದುರು ಒಕ್ಕಲುತನದ ಕುರಿತು ಹೇಳಿಕೆಯೊಂದನ್ನು ೧೯೫೭ರಲ್ಲಿ ಬೆಂಗಳೂರಲ್ಲಿ ನೀಡುತ್ತಾರೆ. "ಮೈಸೂರು ಸರಕಾರವು ಮೈಸೂರು ರಾಜ್ಯದಲ್ಲಿಯ ಎಲ್ಲ ಒಕ್ಕಲುತನದ ಗೇಣಿದಾರರ ಹೆಸರು, ಗೇಣಿ ಚೀಟಿನ ಅವಧಿ, ಪ್ರಕೃತಿ ಗೇಣಿ ಮೊದಲಾದವನ್ನು ಸಂಗ್ರಹಿಸಿ ಅವೆಲ್ಲವನ್ನೂ ಯೋಗ್ಯ

ರೀತಿಯಲ್ಲಿ ನೋಂದಾಯಿಸಿಡುವ ಬಗ್ಗೆ ವಿವರವಾದ ನಿಯಮಗಳನ್ನು ಸಿದ್ಧಪಡಿಸಿದೆ ಮತ್ತು ನಿಶ್ಚಿತ ರೀತಿಯಲ್ಲಿ ಈ ಎಲ್ಲ ವಿವರಗಳನ್ನು ಇಡಲಾಗುವುದು"[೨೧] ಈ ಹೊಸ ವಿಧಾನ ಪ್ರಾಮುಖ್ಯತೆಯಿಂದ ಕೂಡಿತ್ತು ಎನ್ನಬಹುದು. ಗೇಣಿ ಚೀಟಿಗಳ ನಂಬಿಕೆಯನ್ನು ಗಮನದಲ್ಲಿಟ್ಟು ಕೊಂಡಿತ್ತು. ಕೆಲವು ಗ್ರಾಮಗಳ ಲೆಕ್ಕ ಪತ್ರಗಳ ನಮೂನೆಯು ಈ ಹೊಸ ನಮೂನೆಯ ಹೆಚ್ಚಿನ ತಿಳುವಳಿಕೆಯನ್ನು ಒದಗಿಸಿತು. ಈ ವಿವರಣೆಗಳನ್ನು ಒಂದು ಸಂಕೀರ್ಣ ರೀತಿಯಲ್ಲಿ ಪಡೆಯುವುದಕ್ಕಾಗಿ ಮತ್ತು ಸುಗಮವಾಗಿರಿಸುವುದಕ್ಕಾಗಿ ಸರಕಾರವು 'ಮೈಸೂರು ಲೇಂಡ್ ರೆಕಾರ್ಡ್ ಆಫ್ ರೈಟ್ಸ್ ಆಕ್ಟ್'ನಲ್ಲಿ ಸೂಚಿತವಾದ ನಿಯಮಗಳಂತೆ ಮೈಸೂರು ಗೇಣಿ ಮತ್ತು ಬೆಳೆಯ ನೋಂದಣಿಯೊಂದನ್ನು ಇಡಲು ನಿರ್ಧರಿಸಿತು. ಈ ನೋಂದಣಿಯನ್ನು ಯಾವ ರೀತಿಯಲ್ಲಿ ಇಟ್ಟುಕೊಳ್ಳಬೇಕೆಂಬ ಬಗ್ಗೆ ಸಂಪೂರ್ಣ ತಿಳುವಳಿಕೆಯನ್ನೂ, ಕ್ರಮ ವಿಧಾನಗಳನ್ನು ಪ್ರಕಟಿಸಿತು. ಸಾಕಷ್ಟು ಸಂಖ್ಯೆಯ ಇಂತಹ ನೋಂದಣಿಗಳನ್ನು, ಕನ್ನಡ ಭಾಷೆಯಲ್ಲಿಯೂ ಮುದ್ರಿಸಿ ರಾಜ್ಯದ ಬೇರೆ ಬೇರೆ ಜಿಲ್ಲೆಗಳಿಗೆ ಪೂರೈಸಿತು.

ಗೇಣಿಗೆ ಸಂಬಂಧಪಟ್ಟ ಈ ಎಲ್ಲಾ ವಿವರಣೆಗಳನ್ನು ಸಂಪೂರ್ಣವಾಗಿ ಪೂರ್ಣ ಮಾಡಬೇಕೆಂದು ಗ್ರಾಮಾಧಿಕಾರಿಗಳಿಗೆ ಹಾಗೂ ರಾಜ್ಯದ ಕಂದಾಯ ಮಂತ್ರಿ ಶಾಖೆಯ ಇತರ ಅಧಿಕಾರಿಗಳಿಗೆ ಆದೇಶವನ್ನು ನೀಡಿತು. ಮಾನ್ಯಮಂತ್ರಿಗಳು ಭೂಸುಧಾರಣೆಯ ಬಗ್ಗೆ ವರದಿ ಮಾಡಲು ಜತ್ತಿ ಸಮಿತಿಯನ್ನು ನೇಮಕ ಮಾಡಿದರು. "ಹಳೆಯ ಮೈಸೂರು ರಾಜ್ಯ ಮತ್ತು ಮದ್ರಾಸು ಹಾಗೂ ಕೊಡಗು ರಾಜ್ಯಗಳಿಂದ ವಿಲೀನಗೊಂಡ ಪ್ರದೇಶಗಳಲ್ಲಿ ಗೇಣಿದಾರರ ಮತ್ತು ಗೇಣಿಚೀಟಿಗಳ ರೆಕಾರ್ಡ್ ಇರುವುದಿಲ್ಲ. ಬೊಂಬಾಯಿ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶಗಳಲ್ಲಿ 'ಅಧಿಕಾರಿಗಳ ರೆಕಾರ್ಡ್' ಇರುತ್ತದೆ. ಆದುದರಿಂದ ಭೂಸುಧಾರಣೆಯ ವಿಚಾರವನ್ನು ಮಾಡುವುದಕ್ಕೆ ಮೊದಲಾಗಿ ಈ ರೀತಿಯ ನೋಂದಣಿಯೊಂದನ್ನು ತಯಾರಿಸಿಟ್ಟು ಕೊಳ್ಳುವುದು ಅವಶ್ಯಕವಾದುದು."[೨೨] ಹಳೆಯ ಮೈಸೂರಿನಲ್ಲಿದ್ದ 'ಮೈಸೂರ್ ಲೇಂಡ್ ರೆಕಾರ್ಡ್ಸ್ ಆಫ್ ರೈಟ್ಸ್ ಆಕ್ಟ್'ನಲ್ಲಿ ನಮೂದಿಸಲಾಗಿದ್ದ ರೀತಿಯಲ್ಲಿ ಗೇಣಿದಾರರ ಮತ್ತು ಗೇಣಿ ಚೀಟಿಗಳ ಬಗ್ಗೆ ವಿವರಗಳನ್ನು ಯೋಗ್ಯ ವಿಧಾನದಲ್ಲಿ ನೋಂದಾಯಿಸಿಕೊಳ್ಳಲು ಗ್ರಾಮಾಧಿಕಾರಿಗಳಿಗೆ ಮತ್ತು ಮೇಲಾಧಿಕಾರಿಗಳಿಗೆ ಆದೇಶವನ್ನು ನೀಡಿತು. ಮೈಸೂರು ರಾಜ್ಯ ಗೇಣಿದಾರರ ಪರವಾಗಿ ಆಶಾದಾಯಕವಾದ ನಿರ್ಧಾರಗಳನ್ನು ಕೈಗೊಂಡಿತು.

"ವಿಶಾಲ ಮೈಸೂರಿನಲ್ಲಿ ಭೂ ಸುಧಾರಣೆಗಳನ್ನು ವ್ಯವಹಾರದಲ್ಲಿ ತರುವುದಕ್ಕೆ ಮೊದಲು ಸುಧಾರಣೆಗಳನ್ನು ವಿಚಾರಿಸಲು ನೇಮಿಸಲ್ಪಟ್ಟಿದ್ದ ಜತ್ತಿ ಸಮಿತಿಯ ವರದಿಯು ಏಕಮತ ವಾಗಿದ್ದಿತೆಂದೂ ಅದರ ಸೂಚನೆಗಳು ಸಾಗುವಳಿ, ಗೇಣಿ ಭೂಮಾಲೀಕರಿಗೆ ನೀಡುವ ಪರಿಹಾರ

ಮೊದಲಾದ ಅಂಶವನ್ನು ಒಳಗೊಂಡಿದೆ."[೨೩] ರೈತರ ಆರ್ಥಿಕ ಸ್ಥಿತಿ ಸುಧಾರಿಸುವ ಬಗ್ಗೆ ಮತ್ತು ಭೂಮಿಯ ಪ್ರಭಾವಿ ಸಾಗುವಳಿಯಾಗುವ ಬಗ್ಗೆ ಈ ಸಮಿತಿಯು ಸೂಚನೆಗಳನ್ನು ಮಾಡಿರುವುದೆಂದೂ ತಿಳಿದುಬರುತ್ತದೆ. ಸಮಗ್ರ ಮೈಸೂರು ರಾಜ್ಯದ ಭೂಸಮಸ್ಯೆಗಳನ್ನು ಪರಿಶೀಲಿಸಿ ವರದಿ ಒಪ್ಪಿಸಲು ಸರಕಾರವು ನೇಮಿಸಿದ್ದ 'ಜತ್ತಿ ಸಮಿತಿ'ಯು ೧೯೫೭ರಲ್ಲಿ ತನ್ನ ೧೧೪ ಪುಟಗಳ ವರದಿಯನ್ನು ಸರಕಾರಕ್ಕೆ ಒಪ್ಪಿಸಿತು. ೧೦ ಜನ ಸದಸ್ಯರನ್ನೊಳಗೊಂಡ ಈ ಸಮಿತಿಯು ಅಲ್ಪಾವಧಿಯಲ್ಲಿ ರಾಜ್ಯದಲ್ಲೆಲ್ಲ ಸಂಚರಿಸಿ ತನ್ನ ವರದಿಯನ್ನು ಒಪ್ಪಿಸಿತು. ಬಿ.ಡಿ.ಜತ್ತಿ ಅವರು ಈ ಸಮಿತಿಯ ಅಧ್ಯಕ್ಷರಾಗಿದ್ದರು. ಪ್ರಚಲಿತ ವರದಿಯು ಮುಂಬೈ ಹಾಗೂ ಹೈದರಾಬಾದ್ ಪ್ರದೇಶಗಳಲ್ಲಿದ್ದ ಭೂ ಸಾಗುವಳಿ ಕಾಯಿದೆಗಳ ಉತ್ತಮಾಂಶಗಳನ್ನು ತನ್ನ ಸೂಚನೆಗಳಲ್ಲಿ ಅಳವಡಿಸಿಕೊಂಡಿತ್ತು.

### ಜತ್ತಿ ಸಮಿತಿ ವರದಿ

ರಾಜ್ಯದ ಜನಸಂಖ್ಯೆಯ ಶೇಕಡ ೩೪ರಷ್ಟು ಜನರು ಮಾತ್ರ ಭೂಮಿ ಉಳ್ಳವರಾಗಿದ್ದು ಉಳಿದ ಜನರು ಭೂರಹಿತರಾಗಿದ್ದಾರೆ. ಮಾತ್ರವಲ್ಲ ಸಾಗುವಳಿ ಮಾಡುವವರಲ್ಲಿ ನೂರಕ್ಕೆ ೨೮ರಷ್ಟು ಮಾತ್ರ ಭೂರಹಿತರಾಗಿದ್ದಾರೆ. ಅದಕ್ಕಾಗಿ ಭೂಸಮಿತಿಯ ವರದಿಯನ್ನು ರಚಿಸುವಲ್ಲಿ ಹೊಲ ಸಾಗುವಳಿ ಬಗ್ಗೆ ಎರಡು ಧ್ಯೇಯಗಳನ್ನು ಮುಂದಿರಿಸಿತು. "೧. ಧನಿ–ಒಕ್ಕಲು ಪದ್ಧತಿಯನ್ನು ಬರ್ಖಾಸ್ತುಗೊಳಿಸುವುದು. ೨. ಭೂರಹಿತರ ಆಕಾಂಕ್ಷೆಗಳನ್ನು ಪೂರೈಸುವಂತೆ ಭೂಮಿಯ ವಿತರಣೆ ಮಾಡುವುದು."[೨೪] ರಾಜ್ಯದಲ್ಲಿ ಧನಿ ಒಕ್ಕಲು ಪದ್ಧತಿಯು ಸಂಪೂರ್ಣ ನಿರ್ಮೂಲನವಾಗಬೇಕೆಂದು ಸಮಿತಿ ಆದೇಶಿಸಿತು.

ರಾಜ್ಯದಲ್ಲಿ ಏಕರೂಪದ ಭೂಸುಧಾರಣೆಯನ್ನು ಜಾರಿಗೆ ತರಲು ಯೋಗ್ಯ ಮಾಹಿತಿಗಳನ್ನು ಕಲೆ ಹಾಕುವ ಉದ್ದೇಶದಿಂದ ೧೯೫೭ ಮೇ ತಿಂಗಳಲ್ಲಿ ನೇಮಕಗೊಂಡಿದ್ದ ಜತ್ತಿ ಸಮಿತಿಯು ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿದೆ. ಜತ್ತಿ ಸಮಿತಿಯು ತನಗೆ ಒಪ್ಪಿಸಲಾದ ಕೆಲಸವನ್ನು ಅತ್ಯಂತ ದಕ್ಷತೆಯಿಂದಲೂ ಸಾಕಷ್ಟು ವೇಗವಾಗಿ ಪೂರೈಸಿತು. ಬೇರೆ ಬೇರೆ ರಾಜ್ಯ ಸರಕಾರಗಳು ಹಿಂದೆ ನೇಮಿಸಿದ್ದ (ಮುಖ್ಯವಾಗಿ ಮದ್ರಾಸು ಸರಕಾರ ನೇಮಿಸಿದ್ದ) ಭೂ ಸುಧಾರಣೆಯ ಸಮಿತಿಗಳು ವರ್ಷಗಟ್ಟಳೆ ಸಮಯವನ್ನು ತಮ್ಮ ವರದಿ ಸಲ್ಲಿಸಲು ತೆಗೆದುಕೊಂಡಿರುವಾಗ, ಜತ್ತಿ ಸಮಿತಿಯು ನಾಲ್ಕು ತಿಂಗಳೊಳಗೆನೇ ತನ್ನ ಕೆಲಸವನ್ನು ತೃಪ್ತಿಕರವಾಗಿ ಮುಗಿಸಿದ್ದು ಪ್ರಶಂಸಾರ್ಹವಾಗಿದೆ.

ರಾಜ್ಯ ಸರಕಾರವು ಭೂ ಸುಧಾರಣೆಯ ಕಡೆಗೆ ವಿಶೇಷ ಆದ್ಯತೆಯನ್ನು ತೋರಿಸಿದ್ದು ಪ್ರಮುಖವಾಗಿದೆ. ಜತ್ತಿ ಸಮಿತಿಯು ಭೂ ಸುಧಾರಣೆಯ ಬಗ್ಗೆ ನಿಶ್ಚಲವಾದ ವಿಶ್ವಾಸವನ್ನು

ಇಟ್ಟಿರುವುದು ಸ್ಪಷ್ಟವಾಗಿ ಗೋಚರಿಸುತ್ತದೆ. ಧನಿಯಾದವನು ನಿಜವಾಗಿಯೂ ಸ್ವಂತ ಸಾಗುವಳಿ ಮಾಡಲು ಆತುರನಿದ್ದರೆ ಮತ್ತು ಹಾಗೆ ಸಾಗುವಳಿ ಮಾಡದಿದ್ದರೆ ಆತನ ಜೀವನ ನಿರ್ವಹಣವೇ ಕಷ್ಟಕ್ಕಿಟ್ಟುಕೊಳ್ಳುವಂತಿದ್ದರೆ ಮಾತ್ರ ಒಕ್ಕಲಿನಿಂದ ತನ್ನ ಸಾಗುವಳಿ ಭೂಮಿಯನ್ನು ಆತನು ಬಿಡಿಸಿಕೊಳ್ಳಬಲ್ಲನು. ಭೂಮಿಯ ಮಾಲೀಕನೆಂದಲ್ಲದೆ, ಬೇರಾವ ವಿಧದಿಂದಲೂ ಆ ಸಾಗುವಳಿ ಭೂಮಿಯ ಹಿತಚಿಂತಕನಲ್ಲದವನಿಗಿಂತ ನಿಜವಾಗಿ ಹಗಲು ರಾತ್ರಿ ಆ ಭೂಮಿಯೊಡನೆ ಸಂಬಂಧವಿರಿಸಿಕೊಂಡಿರುವ ಒಕ್ಕಲೇ ಶ್ರೇಷ್ಠ. ಆತನೇ ಪ್ರೋತ್ಸಾಹಕ್ಕೆ ಯೋಗ್ಯ ಎಂಬ ತತ್ವವನ್ನು ಜತ್ತಿ ಸಮಿತಿಯು ಮಾನ್ಯ ಮಾಡಿತು.

"ನೆಪಮಾತ್ರಕ್ಕೆ ಭೂಮಾಲೀಕರಾಗಿದ್ದು ತಾವು ಬೇರೆ ಉದ್ಯೋಗವನ್ನು ಅವಲಂಬಿಸುತ್ತಾ ಜೊತೆಗೆ ಗೇಣಿಯನ್ನು ಸಹ ಅನುಭೋಗಿಸುತ್ತಾ ವಿಲಾಸ ಜೀವನ ನಡೆಸುವ "ಆ್ಯಬ್ಸೆಂಟೀ ಲ್ಯಾಂಡ್ ಲೋರ್ಡಿಸಂ" ಪದ್ಧತಿಗೆ ಕೊನೆಯನ್ನು ತರುವುದು ಸೂಕ್ತವೆಂದು ಅಭಿಪ್ರಾಯಪಟ್ಟಿತು. ಅಲ್ಪವಯಿಗಳು, ವಿಧವೆ ಅಥವಾ ಅವಿವಾಹಿತ ಮಹಿಳೆ, ಸೈನ್ಯದಲ್ಲಿ ಸೇವೆ ಸಲ್ಲಿಸುವ ವ್ಯಕ್ತಿ ಹೀಗೆ ಪರಿಮಿತವಾದ ಆದರೆ ನಿಜಕ್ಕೂ ರಿಯಾಯಿತಿಗೆ ಪಾತ್ರವಾದ ವರ್ಗಕ್ಕೆ ಮಾತ್ರ ಈ ಕಠಿಣ ಷರತ್ತುಗಳಿಂದ ವಿನಾಯಿತಿ ದೊರೆತಿದೆ."[೨೫] ಸಮಿತಿಯೇ ಹೇಳುವಂತೆ ಸಾಗುವಳಿದಾರ ಒಕ್ಕಲಿಗೂ ಸರಕಾರಕ್ಕೂ ನಡುವೆ ಮಧ್ಯವರ್ತಿ ವರ್ಗವಿರಬಾರದೆನ್ನುವುದೇ ಭೂಸುಧಾರಣೆಯ ನಿಜವಾದ ತಿರುಳು. ಇದನ್ನು ಸಾಧಿಸುವುದಕ್ಕೆ ಉಳುವವನಿಗೆ ಭೂಮಿಯ ಒಡೆತನವನ್ನು ಕಾಲಾನುಕ್ರಮದಲ್ಲಿ ವಹಿಸಿಕೊಡುವುದು ಅವಶ್ಯ ಆದುದರಿಂದ ಧನಿಯಾದವನ ಕೈಯಿಂದ ಗೇಣಿದಾರನಿಗೆ ಭೂಮಿಯ ಒಡೆತನವನ್ನು ಹಸ್ತಾಂತರಿಸಲು ತಕ್ಕ ನಿರ್ಧಾರಗಳನ್ನು ಸಮಿತಿ ಯೋಜಿಸಿದೆ.

"ಮೈಸೂರು ರಾಜ್ಯದಲ್ಲಿ ಏಕ ರೀತಿಯ ಭೂಸುಧಾರಣೆಯನ್ನು ಕೈಗೊಳ್ಳಲು ಜತ್ತಿ ಸಮಿತಿಯ ವರದಿಯನ್ನು ಪರಿಶೀಲಿಸಿ, ಶಾಸನ ಸಭೆಯ ಮುಂದಿಡಬೇಕಾದ ವಿಧೇಯಕವು ವಿಳಂಬವಾಗುವುದೆಂದು ನಂಬಲಾಗಿದೆ. ಅದರಲ್ಲಿ ಮಾರಾಟಕರ ತಿದ್ದುಪಡಿ ವಿಧೇಯಕ, ನಿಯಮಾವಳಿ ಸಮಿತಿಯ ವರದಿ ಮೊದಲಾದ ಪ್ರಮುಖ ವಿಚಾರಗಳನ್ನು ಚರ್ಚಿಸಲಿದ್ದು ಅದರಲ್ಲಿ ಜತ್ತಿ ಸಮಿತಿಯ ವರದಿಯು ಬರುವ ಸಂಭವವಿಲ್ಲ. ಕಾಂಗ್ರೆಸ್ ಕಾರ್ಯಕಾರೀ ಸಮಿತಿಯು ಈ ವರದಿಗೆ ವಿರೋಧವನ್ನು ಸೂಚಿಸಿದಂತೆ ಕಂಡುಬರುತ್ತದೆ."[೨೬] ಒಟ್ಟಿನಲ್ಲಿ ನಿಶ್ಚಿತ ಧೋರಣೆಯನ್ನು ಅನುಸರಿಸಿ ಮುಂದೆ ವಿಧೇಯಕವನ್ನು ಜಾರಿಗೆ ತರಲು ವಿಳಂಬವಾಯಿತೆಂಬುದು ಕಂಡುಬರುತ್ತದೆ.

ಜತ್ತಿ ಸಮಿತಿಯ ವರದಿ ಜಾರಿಗೆ ಹಲವಾರು ವಿರೋಧಗಳು ಪತ್ರಿಕೆಗಳಲ್ಲಿ ವರದಿಯಾಗುತ್ತವೆ. "ಯೋಜನಾ ಸಮಿತಿಯ ಹಾಗೂ ಕೇರಳ ಮತ್ತು ಮೈಸೂರು ಸರಕಾರಗಳ ಭೂಸುಧಾರಣೆಗಳಲ್ಲಿ

ಭೂಮಾಲೀಕರಿಂದ ಜಮೀನನ್ನು ಕಿತ್ತುಕೊಂಡು ಭೂರಹಿತರಿಗೆ ಹಂಚುವ ಯೋಜನೆಯೂ ಸೇರಿದೆ. ಭೂಮಾಲೀಕರಿಗೆ ಪರಿಹಾರ ಧನವಾಗಿ ಸರಕಾರವೇ ಬಾಂಡ್‌ಗಳನ್ನು ಕೊಡುವುದಾಗಿಯೂ ಸೂಚಿಸಿದೆ. ಇಂದು ಫಲಪ್ರದವಾಗಿರುವ ಭೂಮಿ ಮಾಲೀಕನಿಗೆ ಮಳೆ, ಬಿಸಿಲುಗಳಂತೆ ಪ್ರಕೃತಿಯ ಉಡುಗೊರೆಯಾಗಿ ದೊರೆತುದಲ್ಲ. ತಮ್ಮ ಜೀವ ಮತ್ತು ಬಂಡವಾಳಗಳನ್ನು ಅಪಾಯಕ್ಕೊಡ್ಡಿ ಮಾಡಿದ ಸಾಹಸಗಳ ಫಲವನ್ನದರಿಂದ ಉಣ್ಣುತ್ತಿದ್ದಾರೆ. ಉದ್ಯಮಶೀಲರು ವೆಚ್ಚ ಮಾಡುವ ಬಂಡವಾಳಕ್ಕಾಗಲೀ, ಕಷ್ಟ ಸಹಿಸುವ ಜೀವಕ್ಕಾಗಲೀ ಒದಗಬಹುದಾದ ಅಪಾಯಗಳನ್ನು ಲೆಕ್ಕಿಸದೆ ಕಾಡು ಕಡಿದು, ತಮ್ಮ ರಕ್ತ ಮತ್ತು ಹಣವನ್ನು ಸುರಿಸಿ ಈ ಮಲೆನಾಡಿನಲ್ಲಿ ಕಾಫಿ, ಏಲಕ್ಕಿ, ಅಡಿಕೆ ಮೊದಲಾದ ತೋಟಗಳನ್ನೆಬ್ಬಿಸಿ ರಾಜ್ಯದ ಸಮೃದ್ಧಿಗೆ ಕಾರಣರಾಗಿದ್ದಾರೆ."[೨೭] ಎಂಬ ಹೇಳಿಕೆಗಳು ಜತ್ತಿ ಸಮಿತಿಯ ವರದಿ ಜಾರಿಗೆ ತಡೆಯನ್ನುಂಟು ಮಾಡುತ್ತದೆ.

ಮೇಲ್ಕಂಡ ಹೇಳಿಕೆಯನ್ನು ಗಮನಿಸಿದಾಗ ಇಲ್ಲಿ ಶೋಷಣೆಗೆ, ದೌರ್ಜನ್ಯಗಳಿಗೆ ಬಲಿಯಾಗುತ್ತಿರುವವರು ತಳಸಮುದಾಯಗಳು. ಬಹುಸಂಖ್ಯಾತರಾಗಿರುವ ದಲಿತರು ಇತಿಹಾಸದುದ್ದಕ್ಕೂ ಭೂರಹಿತರಾಗಿ, ಭೂಮಾಲೀಕರ ಮನೆಗಳಲ್ಲಿ, ಭೂಮಿಯಲ್ಲಿ ಜೀತದಾಳುಗಳಾಗಿ ದುಡಿದಿದ್ದಾರೆ. ಇದಕ್ಕೆ ಪ್ರಮುಖ ಉದಾಹರಣೆಯಾಗಿ ಶಿವರಾಮ ಕಾರಂತರ 'ಚೋಮನ ದುಡಿ', ಕುವೆಂಪು ಅವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಗಳಲ್ಲಿ ಕಾಣಬಹುದು. ಶಿವರಾಮ ಕಾರಂತರ 'ಚೋಮನ ದುಡಿ' ಕಾದಂಬರಿ ಸ್ವಾತಂತ್ರ್ಯ ಪೂರ್ವದಲ್ಲಿ ರಚನೆಯಾದ ಮಹತ್ವದ ಕಾದಂಬರಿ. ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಹೊಲೆಯರ ಜೀವನ ಚಿತ್ರವಿದೆ. ಭೂಮಾಲೀಕ ಹಾಗೂ ಭೂರಹಿತ ಜಾತಿಗಳ ಬಗ್ಗೆ ಪರೋಕ್ಷ ಮಾಹಿತಿ ಇದೆ. ಭೂಮಾಲೀಕ ಬಂಟರ (ಕರಾವಳಿ ಕರ್ನಾಟಕದ ಒಕ್ಕಲಿಗರು) ಮನೆಯಲ್ಲಿ ಚೋಮ ಭೂರಹಿತ ಕೃಷಿ ಕಾರ್ಮಿಕ. ಆತನಿಗೆ "ಬೇಸಾಯಗಾರನಾಗಬೇಕೆಂಬ ಬಯಕೆ ಕುತ್ತಿಗೆಯವರೆಗಿದೆ. ಆದರೆ, ಅವನ ಊರಲ್ಲಿ ಹೊಲೆಯ ಬೇಸಾಯಗಾರನೆಂಬ ಜಾತಿಯೇ ಇಲ್ಲ. ಹಾಗಾಗುವ ಆಸೆ ಹಿಡಿದು–ಯಾರನ್ನಾದರೂ, ಯಾರನ್ನೆಂದರೇನು–ಸಂಕಪ್ಪಯ್ಯ ಅವರನ್ನು 'ನಾಲ್ಕು ಗೇಣು ಜಾಗ ನನಗೆ ಗೇಣಿಗೆ ಕೊಡಿ' ಎಂದು ಕೇಳುವ ಸಾಹಸವಿಲ್ಲ. ಆದರೆ ಒಂದಲ್ಲ ಒಂದು ದಿವಸ, ನೇಗಿಲನ್ನು ಹಿಡಿದು ಮೆರೆದೇನು ಎಂಬ ಆಸೆಯಿದೆ. ಅದರಿಂದಲೇ, ಮೂರು ವರ್ಷಗಳಿಂದ ಎರಡು ಹಸುವಿನ ಕರುಗಳನ್ನು ಸಾಕುತ್ತಾ ಬಂದಿದ್ದಾನೆ."[೨೮] ಧನಿಯರಲ್ಲಿಗೆ ಹೋಗಿ ಒಂದು ಮುಡಿ ಗದ್ದೆಯನ್ನಾದರೂ ತನಗೆ ಗೇಣಿಗೆ ಕೊಡಬೇಕೆಂದು ಕೇಳುವ ಮನಸ್ಸು ಮಾಡಿದ್ದಾನೆ.

"ಧನಿಗಳಿಗೆ ಇಷ್ಟೆಲ್ಲ ಒಕ್ಕಲು ಮಕ್ಕಳಿದ್ದಾರೆ. ಈ ಚೋಮನಿಗೂ ಒಂದು ಹಾಳು ಕೊಂಪೆಯನ್ನು ಗೇಣಿಗೆ ಕೊಟ್ಟಿದ್ದರೆ ನಿಮ್ಮ ಹೆಸರು ಹೇಳಿ ಬದುಕುತ್ತಿದ್ದ."[೨೯] ಚೋಮನ ಮಾತನ್ನು ಕೇಳಿ ಸಂಕಪ್ಪಯ್ಯ ಅವರು ಆಶ್ಚರ್ಯಗೊಂಡು ಈ ವಿಷಯವನ್ನು ಪ್ರಸ್ತಾಪಿಸಲು ತಾಯಿಯ ಬಳಿಗೆ ಹೋಗುತ್ತಾರೆ. ಧನಿಗಳು ತಿರುಗಿ ಬಂದು "ಚೋಮ, ಇದುವರೆಗೆ ನಮ್ಮ ಹಿರಿಯರು ನಿಮ್ಮವರಿಗೆ ಗೇಣಿಗೆ ಗದ್ದೆ ಕೊಟ್ಟಿದ್ದಿಲ್ಲ. ಈಗ ಹಾಗೆ ಕೊಡಲಿಕ್ಕೆ ಬರುವ ಹಾಗೆ ಇಲ್ಲ"[೩೦] ಅಂದರು. ಅಲ್ಲದೆ ಮನೆಯೊಳಗಿಂದ ಸಂಕಪ್ಪಯ್ಯ ಅವರ ತಾಯಿ "ಅಬ್ಬಾ! ಈ ಹೊಲೆಯರಿಗೆ ಬಂದ ಸೊಕ್ಕೇ"[೩೧] ಎಂದು ಶಪಿಸುತ್ತಿದ್ದರು. ಚೋಮ ನಿರಾಶೆಯಿಂದ ಮನೆಗೆ ಹಿಂತಿರುಗಿದ. ಚಿನ್ನಸ್ವಾಮಿ ಸೋಸಲೆ ಅವರ 'ದಲಿತರ ಇತಿಹಾಸ ಸವರ್ಣೀಯರ ದರ್ಪದ ಮಾತುಗಳಲ್ಲಿದೆ' ಎಂಬ ಅಭಿಪ್ರಾಯದಂತೆ ಇಲ್ಲಿ ಚೋಮನಿಗೆ ಕೊನೆಗೂ ಭೂಮಿ ದೊರೆಯುವುದಿಲ್ಲ.

ಭೂಮಿ ದೊರೆಯದೆ ನಿರಾಶನಾಗಿದ್ದ ತಂದೆಯನ್ನು ಕುರಿತು ಬೆಳ್ಳಿ ಈ ಕೆಳಗಿನಂತೆ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾಳೆ. "ಬೇಸಾಯ ಮಾಡಬೇಕಾದರೆ ಬ್ರಾಹ್ಮಣರಾಗಿಯೋ, ಬಂಟರಾಗಿಯೋ, ಗೌಡರಾಗಿಯೋ ಹುಟ್ಟ ಬೇಡವೆ? ಹಾಳಾದ ಹೊಲೆಯರಾಗಿ ಹುಟ್ಟಿ ಬೇಸಾಯ ಮಾಡಬೇಕು ಅಂದರೆ ಆಗುತ್ತದೆಯೇ?"[೩೨] ಬೆಳ್ಳಿಯ ಮಾತುಗಳಲ್ಲಿ ಅಸಹಾಯಕತೆಯನ್ನು, ಭಾರತೀಯ ಸಮಾಜದ ದಬ್ಬಾಳಿಕೆಯನ್ನು ಶತಮಾನಗಳಿಂದ ಬಿಟ್ಟಿ ಆಳುಗಳಾಗಿ, ಜೀತದಾಳುಗಳಾಗಿ ಸವರ್ಣೀಯರ ಜಮೀನುಗಳಲ್ಲಿ ರಕ್ತ ಮತ್ತು ಬೆವರನ್ನು ಸುರಿಸಿ ದುಡಿದಂತಹ ದಲಿತರನ್ನು, ಭೂ ವಂಚಿತರನ್ನಾಗಿ ಮಾಡಿರುವುದನ್ನು ಇತಿಹಾಸದಿಂದ ಗಮನಿಸಬಹುದು.

ಮೈಸೂರು ರಾಜ್ಯದಲ್ಲಿ ಭೂ ಸ್ಥಿತಿಗಳನ್ನು ಅಭ್ಯಸಿಸಿ, ಅವನ್ನು ಸುಧಾರಿಸಲು ಏರ್ಪಡಿಸಲಾಗಿದ್ದ ಮೈಸೂರು ಭೂ ಸುಧಾರಣಾ ಸಮಿತಿ(ಜತ್ತಿ ಸಮಿತಿ) ಸರಕಾರಕ್ಕೆ ತನ್ನ ಸುದೀರ್ಘವಾದ ವರದಿಯನ್ನು ಒಪ್ಪಿಸಿತು. ಈ ವರದಿಯನ್ನು ವಿರೋಧಿಸಿ ದಕ್ಷಿಣ ಕನ್ನಡ ಜಿಲ್ಲೆಯ ಭೂಮಾಲೀಕರು ಮತ್ತು ರೈತರ ಸಂಘ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಭೂಮಾಲೀಕರ ಸಂಘ ಇವೆರಡು ಸಂಸ್ಥೆಗಳು ಸಂಯುಕ್ತವಾಗಿ ತಮ್ಮ ವಿರೋಧವನ್ನು ವ್ಯಕ್ತಪಡಿಸಿದರು. ಈ ವಿರೋಧಾಭಿಪ್ರಾಯದ ಮನವಿಯನ್ನು ಮೈಸೂರಿನ ಶಾಸನ ಸಭಾ ಸದ್ಯಸರಿಗೂ ಕಳುಹಿಸಲಾಯಿತು. ವಿಸ್ತಾರವಾದ ವರದಿಯಲ್ಲಿ "ಜಿಲ್ಲೆಯತ್ತ ಜತ್ತಿ ಸಮಿತಿಯು ಸರಿಯಾಗಿ ವಿಚಾರ ಮಾಡದೆ ಒಂದು ಕಠೋರ ವರದಿಯನ್ನು ಕೊಡುವ ಉದ್ದೇಶದಿಂದಲೇ ಇಂತಹ ತೀವ್ರವಾದ ವರದಿಯನ್ನು ಸರಕಾರಕ್ಕೆ ಒಪ್ಪಿಸಿರುವುದು ಆದ್ದರಿಂದ ಭೂಮಾಲೀಕರ ಉತ್ಪತ್ತಿ, ಭೂಮಿ, ಆರ್ಥಿಕ ಪರಿಸ್ಥಿತಿ ಎಲ್ಲವೂ ಹಾಳಾಗಿ ಹೋಗಿ, ದೇಶದ ಸ್ಥಿತಿಯು ತೀರ ಕೆಳಮಟ್ಟಕ್ಕಿಳಿಯುವುದೆಂದು ಸಮರ್ಥನಾ

ನಿಧಾನದಿಂದ ಹೇಳಲಾಗಿದೆ. ಈ ಮನವಿಯ ಮುಖ್ಯಾಂಶಗಳನ್ನು ಇಲ್ಲಿ ಬರೆಯುತ್ತೇವೆ"[೩೩] ಎಂದು ಭೂಮಾಲೀಕರ ಸಂಘ ಸಂಸ್ಥೆಗಳು ಮನವಿಯನ್ನು ಸಲ್ಲಿಸಿದವು. ಮನವಿಯ ಮುಖ್ಯಾಂಶಗಳು ಕೆಳಕಂಡಂತೆ ಇವೆ.

೧. ಈಗ ಇರುವ ಗೇಣಿ ಪದ್ಧತಿಯನ್ನು ನಾಶ ಮಾಡಿ, ಭೂಮಿಯನ್ನು ಗೇಣಿದಾರರಲ್ಲಿ ಹಂಚುವಂತಹ ಸಲಹೆಯು ಅವ್ಯಾವಹಾರಿಕವೂ, ಅನಪೇಕ್ಷಣೀಯವೂ ಆಗಿರುವುದಲ್ಲದೆ, ಕೃತಿ ರೂಪದಲ್ಲಿಳಿಸಲು ಅಸಾಧ್ಯವಾದುದಾಗಿರುವುದು ಮತ್ತು ಈ ವಿಧಾನವನ್ನು ಅನುಸರಿಸಿದ್ದೇ ಆದರೆ ಅದರಿಂದ ಉತ್ಪತ್ತಿಗೆ ತುಂಬಾ ಹಾನಿ ಸಂಭವಿಸುವುದು.

೨. ಭೂಮಿಯೊಡೆಯರು ಸ್ವಂತ ಸಾಗುವಳಿ ಮಾಡುವಂತೆ ಪ್ರೋತ್ಸಾಹಿಸಬೇಕು. ಹಾಗೆ ಮಾಡುವಲ್ಲಿ ಯಾವುದೇ ಮಿತಿಯನ್ನು ಹೇರುವುದು ಸಲ್ಲದು.

೩. ಈಗ ಇರುವ ವೈಯಕ್ತಿಕ ಹಿಡುವಳಿಯ ಮೇಲೆ ಯಾವ ಮಿತಿಯನ್ನು ಹಾಕಬಾರದು. ಇನ್ನು ಮುಂದೆ ಹೊಸದಾಗಿ ಕೊಳ್ಳುವ ಸಂದರ್ಭದಲ್ಲಿ ಮಾತ್ರ ಹಾಗೆ ಬೇಕಾದರೆ ಮಾಡಬಹುದು.

೪. ಧಾರ್ಮಿಕ ಸಂಸ್ಥೆಗಳು ಮತ್ತು ವಿಶ್ವಸ್ಥ ಮಂಡಲಿಗಳು ತಾವು ಪಡೆದ ಭೂಮಿಯ ಪರಿಮಾಣಕ್ಕೆ ಯಾವ ಮಿತಿಯೂ ಇರಲೇಬಾರದು.

೫. ಜತ್ತಿ ಸಮಿತಿಯು ಸೂಚಿಸದ ರೂಪರೇಖೆಗಳಲ್ಲಿ ಒಂದು ಶಾಸನವನ್ನು ಸಿದ್ಧಪಡಿಸಿ ಅದನ್ನು ಜನತೆಯ ಮೇಲೆ ಪ್ರಕ್ರಿಯೆಯು ಕೊಟ್ಟ ಕೊನೆಯ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರ ಅಭಿಪ್ರಾಯಕ್ಕೆ ಸರಿ ಕಾಣದೆ ತೀರ ಭಿನ್ನವಾದುದಾಗುತ್ತದೆ."[೩೪]

ಭೂಮಾಲೀಕ ರೈತ ಸಂಘ ಸಂಸ್ಥೆಗಳು ಜತ್ತಿ ಸಮಿತಿಯ ವರದಿಯನ್ನು ತಡೆಯುವುದಕ್ಕಾಗಿ ಮೇಲ್ಕಂಡ ಹಲವಾರು ಅಂಶಗಳನ್ನು ಒಳಗೊಂಡ ಮನವಿ ಪತ್ರಗಳನ್ನು ಸಲ್ಲಿಸಿದವು. ಇದೇ ರೀತಿಯ ವಿಷಯವನ್ನು ಬೆಂಬಲಿಸುವಂತಹ ಕೂಡಿಗೋಡು ನಾಗಭೂಷಣ ಭಟ್ಟ ಅವರು "ಜತ್ತಿ ಸಮಿತಿಯ ಶಿಫಾರಸ್ಸುಗಳು ಕೃಷಿಕನ ಉತ್ಪಾದನೆಗೆ ನಿಯಂತ್ರಣವನ್ನು ತಂದಿರುವುದು ಅಲ್ಲದೆ ಭೂಸುಧಾರಣೆಯ ಹೆಸರಿನಲ್ಲಿ ಜಮೀನನ್ನು ಕಿತ್ತು ಹಂಚುವುದನ್ನು ತೋರಿದಷ್ಟು ಪರಿಹಾರ ಕೊಡುವ ದರೋಡೆಕೋರತನವನ್ನೂ ಶಾಸನವನ್ನಾಗಿ ಮಾಡಲು ಸಲಹೆ ಮಾಡಿದೆ. ಇವರು ಮಾಡಿರುವ ಸಲಹೆಗಳೆಲ್ಲಾ ಕಾನೂನಾಗಿ ಜಾರಿಯಲ್ಲಿ ಬಂದರೆ ಕೃಷಿಕನ ಕೃಷಿಯೂ, ಆರ್ಥಿಕ ಅವನತಿಯೂ ಏಕಕಾಲದಲ್ಲಿ ಸಂಭವಿಸುತ್ತದೆ."[೩೫] ಎಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

“ಜತ್ತಿ ಸಮಿತಿಯ ವರದಿಯನ್ನು ಆಧರಿಸಿದ ಭೂ ಸುಧಾರಣಾ ವಿಧೇಯಕವನ್ನು ವಿಧಾನಸಭಾ ಅಧಿವೇಶನದಲ್ಲಿಯೇ ಮಂಡಿಸಲು ಸರಕಾರವು ನಿರ್ಧರಿಸಿದ್ದು, ಇದರಿಂದಾಗಿ ಕಾಂಗ್ರೆಸ್ ಪಕ್ಷಕ್ಕೆ ಧಕ್ಕೆ ತಟ್ಟಿದರೂ ಚಿಂತೆಯಿಲ್ಲ. ರಾಷ್ಟ್ರದ ಹಿತದ ದೃಷ್ಟಿಯಿಂದುಳುವವನ ಹಿತದ ದೃಷ್ಟಿಯಿಂದ ತಾವು ತಮ್ಮ ಕರ್ತವ್ಯವನ್ನು ಮಾಡಲೇಬೇಕು”[೩೬] ಎಂಬುದಾಗಿ ಮೈಸೂರು ಮುಖ್ಯಮಂತ್ರಿ ನಿಜಲಿಂಗಪ್ಪ ಅವರು ಸುದ್ದಿಗಾರರ ಸಭೆಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದರು.

ಕೇರಳದಲ್ಲಿ ವಿನೋಬಾ ಅವರು ಸರ್ವೋದಯ ಹಾಗೂ ಗ್ರಾಮ ದಾನದ ಕೆಲಸಕ್ಕೆ ಒಪ್ಪಿಗೆಯ ಗುರುತಾಗಿ, ಸಕ್ರಿಯ ಮತದಾನದ ಚಿಹ್ನೆಯಾಗಿ ‘ಸಮ್ಮತಿ ದಾನ’ ಕೇಳಲು ಪ್ರಾರಂಭಿಸಿದರು. “ತಮ್ಮ ಪರಿಶ್ರಮದಿಂದಲೇ ಉತ್ಪತ್ತಿ ಮಾಡಿದ ಯಾವುದಾದರೊಂದು ವಸ್ತುವನ್ನು ತಿಂಗಳಿಗೊಂದು ಬಾರಿ ಕೊಡುವಂತೆ ಕೇಳಿದರು. ಕೇರಳವು ತೆಂಗಿನ ಸೀಮೆಯಾದ್ದರಿಂದ, ಕೇರಳದ ಜನರು ತೆಂಗಿನ ಕಾಯಿ ಕೊಡುವುದರ ಮೂಲಕ ವಿನೋಬಾರ ಸಮ್ಮತಿ ದಾನಕ್ಕೆ ಪ್ರೋತ್ಸಾಹ ದೊರೆಯಿತು.”[೩೭] ಈ ಸಮ್ಮತಿ ದಾನ, ಸರ್ವೋದಯ ಪಾತ್ರೆಯ ಮೂಲಕ ಭೂ ದಾನ ಚಳವಳಿಯನ್ನು ಆರಂಭಿಸಿದರು. ಕರ್ನಾಟಕದಲ್ಲೂ ವಿನೋಬಾರ ‘ಸರ್ವೋದಯ ಪಾತ್ರೆ’ಗೆ ಪ್ರೋತ್ಸಾಹ ದೊರೆಯಿತು.

ತೆಲಂಗಾಣ ಹೋರಾಟ ನಡೆದಾಗ ಪ್ರಭುತ್ವ ವಿನೋಬಾ ಭಾವೆಯ ಮೂಲಕ ನಕಲಿ ಭೂ ದಾನ ಚಳವಳಿಯನ್ನು ಸೃಷ್ಟಿ ಮಾಡಿತು. ಇದರ ತಂತ್ರದ ಸ್ವರೂಪ ಏನೆಂದರೆ, “ಭೂ ರಹಿತರು ತಾವೇ ಮುಂದಾಗಿ ಭೂಮಿಗಾಗಿ ಹೋರಾಟ ಮಾಡಬೇಕಿಲ್ಲ. ಬದಲಾಗಿ ಭೂ ಒಡೆಯರು ತಮ್ಮ ಬಳಿ ಇರುವ ಹೆಚ್ಚುವರಿ ಭೂಮಿಯನ್ನು ಸರಕಾರಕ್ಕೆ ಕೊಡಬೇಕು. ಆ ಹೆಚ್ಚುವರಿ ಭೂಮಿಯನ್ನು ಸರಕಾರವೇ ಮುಂದೆ ನಿಂತು ಭೂ ರಹಿತರಿಗೆ ಹಂಚಬೇಕು. ಈ ವಿಧಾನದಿಂದ ಮಾತ್ರ ಭೂ ರಹಿತರ ಭೂಮಿಯ ಪ್ರಶ್ನೆಯನ್ನು ಬಗೆಹರಿಸಬಹುದು”[೩೮] ಎಂಬುದಾಗಿತ್ತು. “೧೯೬೭ರಲ್ಲಿ ಸಿಡಿದ ನಕ್ಸಲ್‌ಬರಿ ಹೋರಾಟ ತೆಲಂಗಾಣ ಹೋರಾಟದಲ್ಲಿ ಭೂ ದಾನ ಚಳವಳಿಯನ್ನು ಪರ್ಯಾಯವಾಗಿ ಪ್ರಭುತ್ವ ಮುಂದಿಟ್ಟಿತು. ನಕ್ಸಲ್‌ಬರಿ ಹೋರಾಟದಲ್ಲಿ ಪ್ರಭುತ್ವ ‘ಉಳುವವನೆ ಭೂ ಪಡೆಯ’ ಎಂಬ ನಕಲಿ ಘೋಷಣೆಯನ್ನು ಪ್ರಚಾರ ಮಾಡಿತು. ವಾಸ್ತವವಾಗಿ ಆ ಹಿಂದೆ ಭೂ ರಹಿತರು ನಡೆಸಿದ ತೆಲಂಗಾಣ ಹೋರಾಟದ ಪ್ರಧಾನ ಘೋಷಣೆಯೇ ‘ಉಳುವವನೆ ಭೂ ಒಡೆಯ’ ಎಂಬುದಾಗಿತ್ತು.”[೩೯] ಮೇಲ್ಕಂಡ ಹೇಳಿಕೆಗಳನ್ನು ಗಮನಿಸಿದಾಗ ಪ್ರಮುಖವಾಗಿ ತಿಳಿದುಬರುವುದೇನೆಂದರೆ, ಶೋಷಕ ಪ್ರಭುತ್ವ ಭೂ ರಹಿತ ತಳಸಮುದಾಯಗಳ ಹೋರಾಟವನ್ನು ದಿಕ್ಕು ತಪ್ಪಿಸುವುದಾಗಿತ್ತು.

ವಿನೋಭಾರ ಪ್ರೇರಣೆ ಮತ್ತು ಪ್ರೋತ್ಸಾಹದಿಂದ ಮೈಸೂರು ರಾಜ್ಯದಲ್ಲಿ ಇದುವರೆಗೆ ನಡೆದಿರುವ ಭೂದಾನ ಚಳವಳಿಯ ಸಂಕ್ಷಿಪ್ತ ವರದಿಯ(ರಾಷ್ಟ್ರಧ್ಯಕ್ಷರೆದುರು ಓದಿದ ವರದಿಯ ಸಾರ) ಸಾರ ಈ ಕೆಳಗಿನಂತಿದೆ. "ಏಳು ವರ್ಷಗಳಿಂದ ಅನೇಕ ನಮ್ಮ ಸೇವಕರು ಭೂದಾನ ತತ್ವವನ್ನು ರಾಜ್ಯದ ಹತ್ತೊಂಬತ್ತು ಜಿಲ್ಲೆಗಳಲ್ಲಿ ಆಸಕ್ತಿಯಿಂದ ಹರಡುತ್ತಾ ಬಂದಿದ್ದಾರೆ. ೫೦೮೩ ದಾನಿಗಳಿಂದ ೧೪,೯೫೫ ಎಕರೆ ಭೂಮಿಯು ಈ ತನಕ ದಾನವಾಗಿ ದೊರೆತಿದೆ. ಈ ಪೈಕಿ ೭೭೦೦ ಎಕರೆಯನ್ನು ೮೦೦ ಕುಟುಂಬಗಳಿಗೆ ಹಂಚಲಾಯಿತು. ವಿವಿಧ ಜಿಲ್ಲೆಗಳಿಂದ ಒಟ್ಟು ೬೬ ಗ್ರಾಮ ದಾನಗಳು ಬಂದಿವೆ. ಭೂ ದಾನ ಹೆಸರಿನಿಂದ ಒಂದು ವಾರಪತ್ರಿಕೆ ಹೊರಡುತ್ತಿದೆ. ವಿನೋಬಾ ಅವರು ಕರ್ನಾಟಕದಲ್ಲಿ ಏಳು ತಿಂಗಳು ಪಾದಯಾತ್ರೆ ನಡೆಸಿದರು. ದಿನಾಂಕ ೨೪-೮-೧೯೫೭ರಂದು ಮೈಸೂರು ಪ್ರಾಂತ್ಯವನ್ನು ಪ್ರವೇಶಿಸಿ ೧೪ ಜಿಲ್ಲೆಗಳಲ್ಲಿ ಯಾತ್ರೆ ಮಾಡಿ ದಿನಾಂಕ ೨೨-೩-೧೯೫೮ರಂದು ಬೆಳಗಾವಿ ಜಿಲ್ಲೆಯ ನಿಪ್ಪಾಣಿ ಮೂಲಕ ಮಹಾರಾಷ್ಟ್ರವನ್ನು ಪ್ರವೇಶಿಸಿದರು."[೪೦] ಕೇರಳದಲ್ಲಿ ಪ್ರಾರಂಭವಾದ 'ಸಮ್ಮತಿ ದಾನ'ದ ಮೂಲಕ ರಾಜ್ಯದಲ್ಲಿ ಸರ್ವೋದಯ ಪಾತ್ರೆಯ ಸ್ವರೂಪವನ್ನು ತಾಳಿತು. ಬೆಂಗಳೂರು, ಹುಬ್ಬಳ್ಳಿ, ಧಾರವಾಡ, ಶಿರಸಿ, ಉಡುಪಿ ಇತ್ಯಾದಿ ಪ್ರಮುಖ ಸ್ಥಳಗಳಲ್ಲಿ ಸುಮಾರು ೨೦೦೦ ಸರ್ವೋದಯ ಪಾತ್ರೆಗಳನ್ನು ಇಡಲಾಗಿತ್ತು. ವಿನೋಬಾ ಅವರು "ಮೈಸೂರಿನಲ್ಲಿ ತಮಗೆ ಹೊಳೆದ ಮೂರು ಹೊಸ ವಿಷಯಗಳಲ್ಲಿ ಸರ್ವೋದಯ ಪಾತ್ರೆ ಒಂದು"[೪೧] ಎಂದಿದ್ದಾರೆ.

ಕಾಂಗ್ರೆಸ್ ಅಧ್ಯಕ್ಷ ಯು.ಎನ್.ದೇಬಾರರು ರಾಷ್ಟ್ರೀಯ ವಿಕಾಸ ಯೋಜನೆಗಳ ಸಿದ್ಧಾಂತಗಳನ್ನು ಪುನರ್ವಿಚಾರ ಮಾಡುವ ಮತ್ತು ಯೋಜನೆಗಳ ಸಂಬಂಧದಲ್ಲಿ ಕೃಷಿ, ಔದ್ಯೋಗಿಕ ದೃಷ್ಟಿಕೋನವನ್ನು ಸ್ವೀಕರಿಸಬೇಕಾದ ಅವಶ್ಯಕತೆಯ ಕುರಿತು ಹೇಳಿದರು. ಕಾಂಗ್ರೆಸ್ ಮಹಾಸಭೆಯ ಮುಖ್ಯ ಪತ್ರವಾದ 'ಇಕಾನಮಿಕ್ ರಿವ್ಯೂ' ಎಂಬ ಪತ್ರಿಕೆಯಲ್ಲಿ ದೇಭಾ ಅವರು 'ಭಾರತದ ಭೂರಹಿತ ಕೃಷಿಕರ ಸಮಸ್ಯೆ' ಎಂಬ ಲೇಖನವನ್ನು ಬರೆದು ಮೇಲಿನ ವಿಚಾರವನ್ನು ಪ್ರಸ್ತಾಪಿಸಿದ್ದಾರೆ. ಈ ಲೇಖನವು ಆಲೋಚನಾತ್ಮಕವಾಗಿದೆ.

ಅವರು ತಮ್ಮ ಲೇಖನದಲ್ಲಿ ಹೇಳಿರುವ ವಿಷಯಗಳು ಹೀಗಿವೆ. "ಅಖಿಲ ಭಾರತೀಯ ಕೃಷಿ ಶ್ರಮಿಕ ಸಂಘದ ವಿಸ್ತೃತ ವಿವರಣೆಯಲ್ಲಿ ದೇಶದಲ್ಲಿ ಇಂತಹ ಭೂರಹಿತ ಕೃಷಿಕರಿರುವರೆಂದು ಹೇಳಲಾಗಿದೆ. ಈ ಭೂರಹಿತ ರೈತರ ಆರ್ಥಿಕ ಸ್ಥಿತಿಯು ತುಂಬಾ ಹೀನವಾಗಿದೆ. ಆದುದರಿಂದ ದೊಡ್ಡ ಪ್ರಮಾಣದಲ್ಲಿ ಔದ್ಯೋಗಿಕರಣದ ಯೋಜನೆಯನ್ನು ರಚಿಸುವ ಸಮಯದಲ್ಲಿ ನಾವು ಯೋಚಿಸಬೇಕಾಗಿದೆ. ಈ ಕಾಲ ಹಳ್ಳಿಗಳ ಜನಶಕ್ತಿಯ ಉಚಿತ ಉಪಯೋಗವಾಗಿದೆಯೇ? ಕೃಷಿಯ ಕಚ್ಚಾ ಮ್ಹಾಲುಗಳ ಉಪಯೋಗವನ್ನು ಮಾಡುವ ಉದ್ಯೋಗಗಳಲ್ಲಿ ಎಲ್ಲ ಭೂರಹಿತ

ಕೃಷಿಕರಿಗೆ ಜೀವನದ ವ್ಯವಸ್ಥೆ ಆಗಿದೆಯೇ? ಎಂದು ಯೋಚಿಸಬೇಕು"[೪೨] ಎಂದು ಅಭಿಪ್ರಾಯಪಟ್ಟಿದ್ದಾರೆ.

ಅಕ್ಟೋಬರ್ ೧೪, ೧೯೫೮ರಂದು ಹೈದರಾಬಾದ್‌ನಲ್ಲಿ ನಡೆದ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಅಧಿವೇಶನದಲ್ಲಿ "ಭೂಸುಧಾರಣೆಯ ಯೋಜನೆಗಳನ್ನು ತೀವ್ರವಾಗಿ ಕಾರ್ಯಾನ್ವಯಗೊಳಿಸುವ ಬಗ್ಗೆ ಕಾಂಗ್ರೆಸ್ ರಾಜ್ಯ ಸರ್ಕಾರಗಳನ್ನು ಒತ್ತಾಯಿಸಲಾಗುವುದು"[೪೩] ಎಂದು ನಿರ್ಧರಿಸಲಾಯಿತು. ಭೂ ಸುಧಾರಣೆ ಮತ್ತು ಒಕ್ಕಲುಗಳ ಪರವಾದ ಮಸೂದೆಗಳನ್ನು ತುರ್ತಾಗಿ ತರಬೇಕೆಂಬುದು ಬಹಳ ವರ್ಷಗಳಿಂದ ಕಾಂಗ್ರೆಸ್ ಸಂಸ್ಥೆಯ ಉದ್ದೇಶವಾಗಿತ್ತು. ಸಮಾಜವಾದದ ತತ್ವದ ಆಧಾರದ ಮೇಲೆ ರಾಷ್ಟ್ರವನ್ನು ರೂಪಿಸುವುದಕ್ಕೆ ಇದು ಅತಿ ಅಗತ್ಯವೆಂದು ರಾಜಕಾರಣಿಗಳು ಮನಗಂಡಿದ್ದರು. ರಾಷ್ಟ್ರದ ಮುಂದಿರುವಂತಹ ಹಲವಾರು ಪ್ರಶ್ನೆಗಳನ್ನು ಬಗೆಹರಿಸಲು, ಈ ಸಮಸ್ಯೆಯಷ್ಟು ಕಷ್ಟವಿದ್ದಿಲ್ಲ ಎಂಬುದು ಇವರಿಗೆ ಅರಿವಾಗಿತ್ತು.

ಭೂಸುಧಾರಣೆ ವಿಚಾರಕ್ಕೆ ಸಂಬಂಧಿಸಿದಂತೆ ಭೂಮಾಲೀಕರಿಂದ ಹಲವಾರು ವಿರೋಧ ಅಭಿಪ್ರಾಯಗಳು ಕಂಡುಬಂದವು. "ಭೂಮಾಲೀಕನೂ ಭೂಮಿಯನ್ನು ಉಳುವ ಒಕ್ಕಲಿಗ ಇಬ್ಬರೂ ಸರಕಾರಕ್ಕೆ ತರುವ ಕಂದಾಯಕ್ಕೆ ಜವಾಬ್ದಾರರಾಗಬೇಕು. ಗೇಣಿ ತೆತ್ತು ಒಡೆಯನ ರಸೀದಿ ತೋರಿಸಿದ ಹೊರತು ಒಕ್ಕಲುಗಳ ಜವಾಬ್ದಾರಿಯು ತಪ್ಪಬಾರದು. ಭೂಸುಧಾರಣೆಯ ಪ್ರಯೋಜನ ಹೆಚ್ಚಾಗಿ ಮಧ್ಯಮ ತರಗತಿಯ ಜನರಿಗಾಗಿದೆ. ಮಧ್ಯಮ ತರಗತಿಯವರಿಗೆ ಒಕ್ಕಲುಗಳು ಪೀಡೆ ಕೊಡುವುದು. ಕೋರ್ಟಿಗೆ ಹೋಗುವ ಅನುಕೂಲತೆ ಇಲ್ಲದ ಕಾರಣ ಅವರಿಗೆ ಸಿಕ್ಕುವ ನಿಶ್ಚಿತ ಗೇಣಿ ತೊಂದರೆಗಳಿಲ್ಲದೆ ಸಿಕ್ಕುವಂತಾಗಬೇಕು. ಗೇಣಿಯು ಪ್ರಥಮ ಜವಾಬ್ದಾರಿಯಾಗಬೇಕು."[೪೪]

ಮುಂದುವರಿದು "ಕಮ್ಯುನಿಸ್ಟ್ ಮತ್ತು ಸಮಾಜವಾದದ ತತ್ವಗಳು ಬಿರುಸಿನಿಂದ ಪ್ರಚಾರವಾಗದ ಹಳ್ಳಿಗಳಲ್ಲಿ ಒಡೆಯ ಮತ್ತು ಒಕ್ಕಲುಗಳ ನಡುವಿನ ಹಿತ ಸಂಬಂದವು ನೆಮ್ಮದಿಯಾಗಿದೆ. ಇತ್ತೀಚೆಗೆ ಪಟ್ಟಣಗಳಲ್ಲಿ ಮತ್ತು ಉದ್ದಿಮೆ ವ್ಯಾಪಾರ ಕೇಂದ್ರಗಳಲ್ಲಿ ಪ್ರಚಾರಕರಿಂದ ವಾತಾವರಣವು ಕೆಟ್ಟು ಹೋಗಿದೆ"[೪೫] ಎಂಬ ಅಭಿಪ್ರಾಯಗಳು ಕೇಳಿ ಬಂದವು. ಅಂದರೆ ಭೂಮಾಲೀಕರು ಕಮ್ಯುನಿಸ್ಟ್ ಮತ್ತು ಸಮಾಜವಾದದ ತತ್ವಗಳ ಬಗ್ಗೆ ವಿರುದ್ಧವಾದ ನಿಲುವುಗಳನ್ನು ಹೊಂದಿದ್ದರು.

ಪ್ರಥಮ ಮತ್ತು ದ್ವಿತೀಯ ಯೋಜನೆಗಳಲ್ಲಿ ಭೂಸುದಾರಣೆಗಳ ಬಗ್ಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಲಾಯಿತು. ಭೂಸುಧಾರಣೆಗಾಗಿ ವಿವಿಧ ರಾಜ್ಯಗಳಲ್ಲಿ ಕಾನೂನುಗಳು

ರೂಪಿಸಲ್ಪಟ್ಟವು. "ಪುನರ್ವ್ಯವಸ್ಥಿತ ಮೈಸೂರು ರಾಜ್ಯದಲ್ಲಿ ಹಿಂದಿನ ಮೈಸೂರು, ಕೊಡಗು ಹಿಂದಿನ ಮುಂಬೈ, ಹೈದರಾಬಾದ್ ಮತ್ತು ಮದರಾಸ್ ರಾಜ್ಯಗಳ ಕೆಲವು ಭಾಗಗಳೂ ಸೇರಿವೆ. ಎಲ್ಲ ಭಾಗಗಳಿಗೂ ವ್ಯಾಪಕವಾಗುವಂತಹ ಭೂಸುಧಾರಣಾ ಕಾನೂನನ್ನು ರಾಜ್ಯದಲ್ಲಿ ಅನುಷ್ಠಾನಕ್ಕೆ ತರುವ ಹಾಗೂ ಏಕರೂಪದ ಭೂಸುಧಾರಣೆ ಪದ್ಧತಿಯನ್ನು ತರುವ ಪ್ರಶ್ನೆಯು ಮೈಸೂರು ರಾಜ್ಯ ಸರ್ಕಾರದವರ ಪರ್ಯಾಲೋಚನೆಯಲ್ಲಿದೆ"[೪೬] ಎಂಬ ಅಭಿಪ್ರಾಯಗಳು ಪತ್ರಿಕೆಗಳಲ್ಲಿ ಪ್ರಕಟವಾದವು.

ಭಾರತದ ಬೃಹತ್ ಸಮಸ್ಯೆಗಳಲ್ಲಿ ಒಂದಾದ ಭೂ ಸಮಸ್ಯೆಯನ್ನು ಪರಿಹರಿಸುವ ಪ್ರಯತ್ನಗಳು ನಡೆದವು. ದೇಶದ ಪ್ರಮುಖ ರಾಜಕೀಯ ಹಾಗೂ ಅಧಿಕಾರ ರೂಢ ಪಕ್ಷವಾದ ಕಾಂಗ್ರೆಸ್ ಈ ದಿಸೆಯಲ್ಲಿ ನಿರ್ದಿಷ್ಟ ನಿರ್ಣಯವನ್ನು ಸ್ವೀಕರಿಸಿತು. ಯೋಜನಾ ಆಯೋಗವೂ ಈ ಬಗ್ಗೆ ದೃಢ ನಿರ್ಧಾರ ಮಾಡಿತು. ಹೀಗಾಗಿ ವಿಶಾಲ ಮೈಸೂರಿನಲ್ಲಿ, ಭೂಸುಧಾರಣೆಯನ್ನು ಯಾವ ರೀತಿಯಲ್ಲಿ ಮಾಡಬಹುದೆಂಬುದನ್ನು ವಿವಿಧೆಡೆಯ ಭೂಪರಿಸ್ಥಿತಿಯನ್ನು ಅಭ್ಯಸಿಸಿ ಸಲಹೆ ನೀಡಿತು. ಈ ವರದಿಯನ್ನು ಈ ಬಗ್ಗೆ ವಿವಿಧ ಕ್ಷೇತ್ರಗಳಲ್ಲಿ ವ್ಯಕ್ತಪಡಿಸಲಾದ ಅಭಿಪ್ರಾಯಗಳನ್ನೂ, ಯೋಜನಾ ಆಯೋಗದ ಮತಗಳನ್ನೂ ಅನುಲಕ್ಷಿಸಿ, ಕಂದಾಯ ಮಂತ್ರಿ ಶ್ರೀ ಕಡಿದಾಳ ಮಂಜಪ್ಪ ಅವರು "ಭೂಶಾಸನವನ್ನು ಕೇವಲ ಅಲ್ಪಾವಧಿಯಲ್ಲಿ ತಯಾರಿಸಿ ವಿಧಾನ ಸಭೆಯ ಮುಂದಿಟ್ಟಿರುವರು. ಈ ಶಾಸನದ ಮೇಲೆ ಚರ್ಚೆಯು ನಡೆಯುತ್ತಿದೆ"[೪೭] ಎಂದು ಅಭಿಪ್ರಾಯಪಟ್ಟರು. ಕಾರ್ಯಕಾರಿ ಸಮಿತಿಯು ೧೯೫೮ರಲ್ಲಿ ನಾಗಪುರ ಕಾಂಗ್ರೆಸ್‌ನಲ್ಲಿ ಭೂಸುಧಾರಣಾ ವಿಷಯವನ್ನು ಗಂಭೀರವಾಗಿ ಚರ್ಚಿಸಿತು.

ದಕ್ಷಿಣ ಭಾರತದ ರಾಜ್ಯಗಳ ಕೃಷಿಕರು ಜನವರಿ ೧೯೫೯ರಲ್ಲಿ ಬೆಂಗಳೂರಲ್ಲಿ ಕೃಷಿಕರ ಸಮ್ಮೇಳನದಲ್ಲಿ, ಎರಡನೆ ಬಾರಿಗೆ ಸಭೆ ಸೇರಿ ಸರ್ಕಾರ ಕೈಗೊಂಡಿರುವ ಭೂಸುಧಾರಣೆಯ ಬಗ್ಗೆ ತನ್ನ ಅಸಮಾಧಾನ ವ್ಯಕ್ತಪಡಿಸಿದರು. ಭೂಸುಧಾರಣೆಯ ಬಗ್ಗೆ ಎಷ್ಟರಮಟ್ಟಿಗೆ ವಿರೋಧ ಅಭಿಪ್ರಾಯಗಳು ಬಂದವೆಂಬುದನ್ನು ಕೆಳಗಿನಂತೆ ಗಮನಿಸಬಹುದು. "ಭೂಹಿಡುವಳಿಗೆ ಮಿತಿಯನ್ನು ಕಲ್ಪಿಸಿ ದೊರೆತ ಭೂಮಿಯನ್ನು ಇಲ್ಲದವರಿಗೆ ಹಂಚುವುದರಿಂದ ಎಲ್ಲರಿಗೂ ಭೂಮಿ ದೊರೆಯುವುದೂ ಇಲ್ಲ, ಬೆಳೆ ಹೆಚ್ಚಾಗುವುದೂ ಇಲ್ಲ. ಭೂ ವಿತರಣೆ, ಸಹಕಾರ ಬೇಸಾಯ, ಭೂದಾನ ಎಂಬಿತ್ಯಾದಿಯಾಗಿ ಕಣ್ಣೀರಿಡುವ ಆಚಾರ್ಯ ವಿನೋಬಾ, ನೆಹರೂ ಅವರಿಂದ ಹಿಡಿದು ಗ್ರಾಮೀಣ ಮುಂದಾಳುಗಳವರೆಗೆ ಯಾರೂ ಕೂಡ ಭೂ ಸಮಸ್ಯೆಯನ್ನು ಸರಿಯಾಗಿ ಅಭ್ಯಾಸ ಮಾಡಿಲ್ಲ."[೪೮] ಈ ರೀತಿಯ ಅಭಿಪ್ರಾಯಗಳು ಕೇಳಿ ಬಂದವು.

ಭೂಸುಧಾರಣೆಗಳ ಕಾರ್ಯಕ್ರಮದ ಪ್ರಕಾರ ಭೂರಹಿತ ರೈತರ ಏಳಿಗೆ ಸಾಧಿಸಲು ವಿಶೇಷ ಗಮನವನ್ನು ಕೊಡಲಾಯಿತು. ಭೂರಹಿತ ರೈತರಿಗೆ ಭೂಮಿಯನ್ನು ಹಂಚುವ ಕಾರ್ಯಕ್ರಮ ಈ ದಿಶೆಯಲ್ಲಿ ಒಂದು ಪ್ರಮುಖ ಹೆಜ್ಜೆಯಾಗಿದೆ. "ಬೇಸಾಯ ಸಾಧ್ಯವಿರುವಂತಹ ಪಾಳು ಬಿದ್ದಿರುವ ಸುಮಾರು ೩೦ ಲಕ್ಷ ಎಕರೆಗಳಷ್ಟು ಭೂಮಿಯನ್ನು ಈ ವರ್ಗದ ರೈತರಿಗೆ ಕೆಲವು ವರ್ಷಗಳಲ್ಲಿ ಹಂಚಲಾಗಿದೆ. ಭೂದಾನ ಚಳವಳಿ ಅಂಗವಾಗಿ ದೊರೆತ ೧೦ ಲಕ್ಷ ಎಕರೆಗಳಷ್ಟು ಭೂಮಿ ಈ ರೈತರಿಗೆ ದೊರೆತಿದೆ."[೪೯] ಇದರಿಂದಾಗಿ ಭೂರಹಿತ ತಳಸಮುದಾಯ ಗಳಿಗೆ ಅಲ್ಪ ಪ್ರಮಾಣದಲ್ಲಿ ಭೂಮಿ ದೊರೆಯಿತು. ಭೂಸುಧಾರಣೆ ತಂದ ಭೂ ಸಂಬಂಧಗಳಲ್ಲಿನ ಬದಲಾವಣೆಯನ್ನು ಕುರಿತು ನಡೆದಂತಹ ಅಧ್ಯಯನವನ್ನು ಈ ಕೆಳಗಿನಂತೆ ಗಮನಿಸಬಹುದು.

ರಾಘವೇಂದ್ರರಾವ್ ಅವರು ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕಿನ ಭೂ ಸಂಬಂಧಗಳನ್ನು ೧೯೭೭ರಲ್ಲಿ ಅಧ್ಯಯನ ಮಾಡಿದ್ದಾರೆ. "ತಾಲ್ಲೂಕಿನ ಶೇ. ೪೬.೭೧ರಷ್ಟು ಭೂಮಿ ಒಕ್ಕಲಿಗ ಭೂಮಾಲೀಕರ ಸ್ವಾಧೀನದಲ್ಲಿತ್ತು. ಹೆಚ್ಚು ಭೂಮಿ ಹೊಂದಿರುವ ದೃಷ್ಟಿಯಿಂದ ಒಕ್ಕಲಿಗ ಭೂಮಾಲೀಕರ ನಂತರ ಬರುವ ಜಾತಿಗಳೆಂದರೆ ಕುರುಬರು ಮತ್ತು ಗೊಲ್ಲರು. ತಾಲ್ಲೂಕಿನ ಶೇ. ೧೭.೧೩ರಷ್ಟು ಭೂಮಿ ಇವರ ಸ್ವಾಧೀನ ಇತ್ತು. ದಲಿತರು ಜನಸಂಖ್ಯೆಯ ದೃಷ್ಟಿಯಿಂದ ದೊಡ್ಡ ಸಮುದಾಯ. ತಾಲ್ಲೂಕಿನಲ್ಲಿ ದಲಿತರ ಶೇ. ೨೬.೬೮ರಷ್ಟು ಕುಟುಂಬಗಳಿವೆ. ಆದರೆ ಇವರ ಸ್ವಾಧೀನ ಇರುವ ಭೂಮಿಗೂ(ಶೇ.೮.೪೧) ಇವರ ಜನಸಂಖ್ಯೆಗೂ ಸಂಬಂಧವಿಲ್ಲ."[೫೦] ಇವರಲ್ಲಿ ಬಹುಸಂಖ್ಯಾತರು ಭೂರಹಿತರಾಗಿದ್ದಾರೆ.

೧೯೬೧ರ ಭೂಸುಧಾರಣಾ ಕಾಯಿದೆಗೆ ಹೋಲಿಸಿದರೆ ೧೯೭೪ರ ಕಾಯಿದೆ ಖಂಡಿತವಾಗಿಯೂ ಸಾಧನೆ ಮಾಡಿದೆ. ಗೇಣಿ ಪದ್ಧತಿ ರದ್ದು ಮಾಡಿದ್ದು. ಉಳುವವ ಹೊಲದ ಒಡೆಯನಾದದ್ದು, ಭೂಮಿಯ ಗರಿಷ್ಠ ಮಿತಿಯನ್ನು ಕಡಿಮೆ ಮಾಡಿರುವುದು ಇತ್ಯಾದಿಗಳು ಸಾಧನೆಗಳಾಗಿವೆ. ಭಾರತೀಯ ಸಮಾಜದಲ್ಲಿ ಮಹಿಳೆಯರು ಮತ್ತು ದಲಿತರು ಯಾವಾಗಲೂ ಭೂವಂಚಿತರು. ಕೆಲವೊಂದಷ್ಟು ಉದಾಹರಣೆಗಳನ್ನು ಬಿಟ್ಟರೆ ಭೂಮಿ ಪಡೆಯುವ ತಳಸಮುದಾಯಗಳ ಕನಸು ಇಂದಿಗೂ ಕನಸೇ ಆಗಿದೆ.

ಮಹಾರಾಷ್ಟ್ರದಲ್ಲಿ ದಲಿತರು ತಾವು ಉಳುತ್ತಿರುವ ಭೂಮಿಯನ್ನು ತಮ್ಮ ಹೆಸರಿಗೆ ಮಾಡಿಕೊಳ್ಳಲು ಸರ್ಕಾರದೊಂದಿಗೆ ಸಂಘರ್ಷಕ್ಕಿಳಿದಿರುವ ಹತ್ತಾರು ಉದಾಹರಣೆಗಳ ನಾಲ್ಕು ನಮೂನೆಗಳನ್ನು ಇಂದಿಗೂ ಗಮನಿಸಬಹುದು. ವಿದರ್ಭದಲ್ಲಿ ಅರಣ್ಯ ಇಲಾಖೆಯೊಂದಿಗಿನ ಸಂಘರ್ಷ, ಸೊಲ್ಲಾಪುರ ಜಿಲ್ಲೆಯಲ್ಲಿ ದಲಿತರಿಗೆ ಬ್ರಿಟಿಷರೇ ಕೊಟ್ಟಿದ್ದರು. ಆದರೆ ಭಾರತ ಸರ್ಕಾರ ಕೊಡಲೊಪ್ಪದ ಮಹಾರ್ ರಾಮೋಶಿ ಭೂಮಿ ಹೋರಾಟ, ಮರಾಠವಾಡದಲ್ಲಿ

ಗೈರಾಣ ಭೂಮಿಯಲ್ಲಿ ಉಳುತ್ತಿರುವ ದಲಿತ ರೈತರ ಹೋರಾಟ, ಕೊಂಕಣ ಭಾಗದ ಭೂ ಹೋರಾಟ.

ಹಿಂದೆ ಬ್ರಿಟಿಷರ ಕಾಲದಲ್ಲಿ ಹಳ್ಳಿಗಳಿಂದ ತಾಲ್ಲೂಕು ಕಛೇರಿಗೆ ಸಾಮಾನು ಸರಂಜಾಮು ಮತ್ತು ಬ್ರಿಟೀಷರಿಗೆ ಸುದ್ದಿ ತಲುಪಿಸುವ ಕೆಲಸ ಮಾಡುತ್ತಿದ್ದ ಮಹಾರ್ ಸಮುದಾಯ, ರಾತ್ರಿಯಲ್ಲಿ ಗ್ರಾಮಗಳ ರಕ್ಷಣೆಯ ಕೆಲಸ ಮಾಡುತ್ತಿದ್ದ ರಾಮೋಶಿ ಸಮುದಾಯಕ್ಕೆ ಬ್ರಿಟಿಷರು ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಯ ಹಳ್ಳಿಗಳಲ್ಲಿ ೫೦ರಿಂದ ೨೦೦ ಎಕರೆವರೆಗೆ ಭೂಮಿಯನ್ನು ಇನಾಮು ಆಗಿ ಕೊಟ್ಟಿದರು. ಅಂಥ ಭೂಮಿಗೆ 'ಮಹಾರ್ ರಾಮೋಶಿ ವತನ್ ಎಂದೇ ಹೆಸರು. "ಭೂಮಿಯು ಇಡೀ ಸಮುದಾಯದ ಹೆಸರಿಗೆ ಇದ್ದಿತೇ ಹೊರತು ವೈಯಕ್ತಿಕ ಹೆಸರಿಗಿರಲಿಲ್ಲ. ಭೂಮಿಯ ಮೇಲೆ ಜಾತಿಯ ಹೆಸರು ಹೋಗಬೇಕು, ಅದು ಅವರ ವೈಯಕ್ತಿಕ ಹೆಸರಿಗೆ ಆಗಬೇಕೆಂದು ಡಾ.ಅಂಬೇಡ್ಕರ್ ಅವರು ಹೋರಾಟ ಮಾಡಿದರಾದರೂ ಅದು ಯಶಸ್ವಿಯಾಗಲಿಲ್ಲ. ಮುಂದೆ ೧೯೫೭ರಲ್ಲಿ 'ವತನ್ ಭೂ ರದ್ಧತಿ ಕಾಯ್ದೆ' ಬಂದು ಇನಾಮು ಹೆಸರನ್ನೆಲ್ಲ ರದ್ದು ಮಾಡಿತು ಮಹಾರಾಷ್ಟ್ರ ಸರಕಾರ. ಇನ್ನು ತಾವು ಭೂಮಿಯನ್ನು ತಮ್ಮ ಹೆಸರಿಗೇ ಮಾಡಿಕೊಳ್ಳಬಹುದು ಎಂದು ಜನ ಅಂದುಕೊಂಡರಾದರೂ ಅದು ಹಾಗೆ ಆಗಲಿಲ್ಲ. ಉಳುಮೆ ಮಾಡಿಕೊಂಡು ಬಂದಿದ್ದ ದಲಿತ ರೈತರ ಹೆಸರು ಭೂಮಿ ದಾಖಲೆಗಳಲ್ಲಿ ಮೂಡಲೇ ಇಲ್ಲ."[೫೧] ನಿಜಾಮರಿಂದ ರಾಜ್ಯಾಡಳಿತವನ್ನು ಕಿತ್ತುಕೊಂಡ ಭಾರತ ಸರ್ಕಾರವು ದಲಿತರು ಸಾಗುವಳಿ ಮಾಡುತ್ತಿದ್ದ ಭೂಮಿಯನ್ನು ಅವರ ಹೆಸರಿಗೆ ಮಾಡಲಿಲ್ಲ. ಬದಲಿಗೆ ಅದು ಸರ್ಕಾರಿ ಭೂಮಿಯೆಂದು ದಾಖಲಿಸಿತು. ಮೇಲ್ವರ್ಗದ ರೈತರು ಮಾಡುತ್ತಿದ್ದ ಸಾಗುವಳಿಗೆ ಹೊರತಾದ ಭೂಮಿಯನ್ನು ಗೋಮಾಳ ಎಂದು ದಾಖಲೆ ಮಾಡಿತು. ಸಾಮಾನ್ಯವಾಗಿ ಎಲ್ಲಾ ಕಡೆ ಬೇಸಾಯ ಮಾಡುತ್ತಿರುವ ರೈತರೆಲ್ಲ ಮೇಲ್ಜಾತಿ ಅವರು. ತಮ್ಮ ಹೊಲದಲ್ಲಿ ತಾವು ಕರೆದಾಗ, ತಾವು ನಿಗದಿ ಮಾಡಿದ ವೇತನಕ್ಕೆ ದಲಿತರು ದುಡಿಯಬೇಕು. ಭೂಮಿ ಇದ್ದವರೇ ಅಧಿಕಾರದ ಚುಕ್ಕಾಣಿ ಹಿಡಿದರು. ಭೂಮಿ ಇದ್ದವರ ಮಕ್ಕಳೇ ಅಧಿಕಾರಿಗಳಾದರು. ದಲಿತರಿಗೂ ಭೂಮಿಯ ಹಕ್ಕಿದೆ ಎಂದು ರೈತರು ನಂಬಲಿಲ್ಲ.

ಭೂಮಿಯನ್ನು ವಿತರಿಸಿದಲ್ಲಿ ಅಲ್ಪ ಪಾಲು ತಳಸಮುದಾಯಗಳು ಪಡೆದಿವೆ. ಇದು ದಲಿತ ಚಳುವಳಿಯಿಂದ ಸಾಧ್ಯವಾಯಿತು ಎನ್ನಬಹುದು. ತಳಸಮುದಾಯಗಳು ತಮ್ಮ ವಿಮೋಚನೆಗೆ ತಮ್ಮದೇ ಚಳವಳಿ ಆರಂಭಿಸಿದರು. "೧೯೬೭ರಿಂದಲೇ ಕರ್ನಾಟಕದಲ್ಲಿ ದಲಿತ ಚಳವಳಿಗಳು ವ್ಯವಸ್ಥಿತವಾಗಿ ಆರಂಭವಾಗಿದೆ. ಶ್ಯಾಮ್‌ಸುಂದರ್ ಅವರ ಭೀಮ ಸೇನೆ ದಲಿತರಿಗೆ ಪ್ರತ್ಯೇಕ ಭೂಮಿ ಕೊಡಬೇಕೆಂಬ ಅಭಿಪ್ರಾಯ ಹೊಂದಿದ್ದರು."[೫೨] ಹೆಚ್ಚುವರಿ ಭೂಮಿ ವಿತರಣೆಯಲ್ಲಿ

ತಳಸಮುದಾಯಗಳಿಗೆ ಸಲ್ಲಬೇಕಾದ ಪಾಲು ಪಡೆಯುವಲ್ಲಿ ಈ ಸಂಘಟನೆಗಳು ಪ್ರಮುಖ ಪಾತ್ರ ವಹಿಸಿದವು. ಈ ವಿಷಯವನ್ನು ದಲಿತ ಚಳವಳಿ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಸೂಲನಾಯಕನಹಳ್ಳಿ ಭೂ ಹೋರಾಟ**

ಕೆಲವು ಭೂ ಹೋರಾಟಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಉಲ್ಲೇಖಿಸುವುದು ಅತ್ಯಗತ್ಯ. ತುಮಕೂರು ಜಿಲ್ಲೆ, ಪಾವಗಡ ತಾಲ್ಲೂಕು, ಸೂಲನಾಯಕನಹಳ್ಳಿಯಲ್ಲಿ ದಿನಾಂಕ ೫-೭-೧೯೯೬ ರಂದು ಬೆಳಿಗ್ಗೆ ೬.೦೦ ಗಂಟೆಗೆ ನೆಟ್ಟಂ ವೆಂಕಟೇಶ ನಾಯ್ಡು ಹತ್ಯೆಯಾದ ನಂತರ ೧೦.೦೦ ಗಂಟೆಗೆ ದಲಿತರ ಹಟ್ಟಿಯ ಎಲ್ಲಾ ೧೨೦ ಮನೆಗಳು ಲೂಟಿ ಮತ್ತು ಬೆಂಕಿಗೆ ಆಹುತಿಯಾದವು.

**ದ್ವೇಷಕ್ಕೆ ಹಿನ್ನೆಲೆ**

"೧೯೮೪ರಷ್ಟು ಹಿಂದೆ ದಲಿತ ದುರ್ಗಪ್ಪ ಪಕ್ಕದ ಬುಡ್ಡಾರೆಡ್ಡಿ ಹಳ್ಳಿಯ ಭೂಮಾಲೀಕರ ३೬ ಎಕರೆ ಜಮೀನಿನಲ್ಲಿ ೫ ಎಕರೆ ಕೊಂಡಿದ್ದ. ಇದೇ ಗ್ರಾಮದ ಇನ್ನೊಬ್ಬರು ದಲಿತ ಸೋದರರು ತಲಾ ೨೧/೨ ಎಕರೆ ಕೊಂಡಿದ್ದರು. ३೬ ಎಕರೆಯಲ್ಲಿ ಇನ್ನುಳಿದ ಜಮೀನನ್ನು ನೆಟ್ಟಂ ಗೋವಿಂದಪ್ಪ ಕೊಂಡುಕೊಂಡರು. ಸಾಕಷ್ಟು ಜಮೀನು ಹೊಂದಿದ್ದ ಈತ ತನ್ನ ಮಕ್ಕಳಿಗೆ ಭೂಮಿ ಹಂಚಿದಾಗ ಈ ಜಮೀನು ತಿಮ್ಮಾನಾಯ್ಡು ಹಾಗೂ ವೆಂಕಟೇಶ್ ನಾಯ್ಡು ಅವರ ಪಾಲಿಗೆ ಬಂದು. ದಲಿತರ ಜಮೀನು ನಾಯ್ಡು ಕುಟುಂಬದ ಜಮೀನಿನ ಮಧ್ಯೆ ಇದ್ದುದರಿಂದ ಇವರು ನಾಯ್ಡು ಜಮೀನು ಮೂಲಕ ತಮ್ಮ ಜಮೀನಿಗೆ ಹೋಗಬೇಕು. ಈ ದಲಿತರ ಜಮೀನು ಕಬಳಿಸಲು ನಾಯ್ಡು ಸೋದರರು ಹುನ್ನಾರ ಮಾಡಿದರು."[೫३] ದಲಿತರ ಜಮೀನು ಒತ್ತುವರಿ ಮಾಡಿದರು. ಹೊಲಕ್ಕೆ ಎತ್ತುಗಾಡಿ ಬಿಡದೆ ನಿರ್ಬಂಧಿಸಿದರು. ಬೆಳೆದ ಬೆಳೆಯನ್ನು ತಮ್ಮ ದನಕರು ಬಿಟ್ಟು ಮೇಯಿಸಿದರು. "ಅಸಹಾಯಕನಾದ ದುರ್ಗಪ್ಪ, ವೆಂಕಟೇಶ್ ನಾಯ್ಡುಗೆ ಜಮೀನು ಮಾರಲು ಒಪ್ಪಿದ. ಅಗ್ರಿಮೆಂಟ್ ಬರೆಸಿ ಸಹಿ ಪಡೆದ. ಲಕ್ಷ್ಮೀನರಸಪ್ಪ ಎಂಬುವರ ಸಾಕ್ಷಿ ಹಾಕಿಸಿದ. ಸುಮಾರು ಹದಿನೆಂಟು ಸಾವಿರಕ್ಕೆ ಮಾತಾಡಿ ಸುಮಾರು ಎರಡೂವರೆ ಸಾವಿರ ಮುಂಗಡ ಹಣ ಕೊಟ್ಟು ಕೆಲವು ದಿನಗಳ ನಂತರ ವೆಂಕಟೇಶ್ ನಾಯ್ಡು ಜಮೀನು ರಿಜಿಸ್ಟ್ರರ್ ಮಾಡಿಸಿ ಕೊಡಲು ಕೇಳಿದ. ಪೂರ್ಣ ಹಣ ಕೊಟ್ಟರೆ ರಿಜಿಸ್ಟ್ರರ್ ಮಾಡಿಸುವುದಾಗಿ ದುರ್ಗಪ್ಪ ಹೇಳಿದ. ಆ ದಿನವೇ ಪೂರ್ತಿ ಹಣ ಸಂದಾಯ ಮಾಡಿರುವುದಾಗಿ ನಾಯ್ಡು ಹೇಳಿದ."[೫೪] ಇಲ್ಲಿ ಪ್ರಾರಂಭವಾದ ವಿವಾದ ದುರಂತವಾಗಿ ಮುಗಿಯಿತು. ದುರ್ಗಪ್ಪ ತನಗೆ ಅನ್ಯಾಯವಾಗುತ್ತಿರುವುದಾಗಿ ನ್ಯಾಯ ದೊರಕಿಸುವಂತೆ ಊರಿನ ಹಿರಿಯರನ್ನು ಬೇಡಿದ,

ಪಂಚಾಯ್ತಿ ಮಾಡಿಸಿದ. ಸಂಘ–ಸಂಸ್ಥೆಗಳವರನ್ನು, ರಾಜಕೀಯ ನಾಯಕರನ್ನು, ಅಧಿಕಾರಿಗಳನ್ನು ಅಂಗಲಾಚಿದ, ವಿಚಾರ ನ್ಯಾಯಾಲಯದ ಕಟ್ಟೆ ಹತ್ತಿತು. "ಹಣ ಕೊಟ್ಟಿರುವುದಾಗಿ ಅಗ್ರಿಮೆಂಟಿನಲ್ಲಿತ್ತು. ಲಕ್ಷ್ಮಿನರಸಪ್ಪ ತಿಳಿಯದೇ ಸಾಕ್ಷಿ ಹಾಕಿದ ತಪ್ಪಿಗೆ ಹಣ ಸಂದಾಯವಾಗಿದೆಯೆಂದು ಸಾಕ್ಷಿ ಹೇಳಿದ. ಇದನ್ನು ಸಹಿಸದ ದುರ್ಗಪ್ಪ ಸುಳ್ಳು ಸಾಕ್ಷಿ ಹೇಳಿದ್ದಕ್ಕಾಗಿ ನ್ಯಾಯಾಲಯದ ಬಾಗಿಲಲ್ಲೇ ಲಕ್ಷ್ಮಿನರಸಪ್ಪನಿಗೆ ಚಪ್ಪಲಿಯಿಂದ ಹೊಡೆದ. ನ್ಯಾಯಾಧೀಶರ ಎದುರಿಗೆ ಇದು ನಡೆದು ಹೊಡೆದ ತಪ್ಪಿಗೆ ದುರ್ಗಪ್ಪನಿಗೆ ೭ ದಿನ ಜೈಲು ಶಿಕ್ಷೆಯಾಯಿತು. ವಾಯಿದೆಯಲ್ಲಿ ಹಣ ಕೊಟ್ಟಿರುವುದರಿಂದ ದುರ್ಗಪ್ಪ ಜಮೀನು ರಿಜಿಸ್ಟಾರ್ ಮಾಡಿಸಿಕೊಡಬೇಕೆಂದು ತೀರ್ಪು ಬಂತು. ಇದರ ವಿರುದ್ಧ ದುರ್ಗಪ್ಪ ಮಧುಗಿರಿ ನ್ಯಾಯಾಲಯಕ್ಕೆ ಮೇಲ್ಮನವಿ ಸಲ್ಲಿಸಿದ."[೫೫]

ಈ ಜಮೀನು ವಿವಾದ "ಪಾವಗಡದ ಗಡಿ ಹಳ್ಳಿಗಳಲ್ಲಿ ತಮ್ಮ ಚಟುವಟಿಕೆಗಳನ್ನು ಪ್ರಾರಂಭಿಸುತ್ತಿರುವ ಆಂಧ್ರದ ಪೀಪಲ್ಸ್ ವಾರ್ ಗ್ರೂಪ್ ಅವರಿಗೆ ತಿಳಿದು, ಅದನ್ನು ಬಗೆಹರಿಸಿ ಕೊಡುವುದಾಗಿ ಭೂವಿವಾದವನ್ನು ಕೈಗೆತ್ತಿಕೊಂಡರು. ತಮ್ಮ ಪ್ರಜಾಕೋರ್ಟ್‌ನಲ್ಲಿ ದುರ್ಗಪ್ಪನಿಗೆ ಮೋಸವಾಗಿದೆ ಎಂದು ತೀರ್ಮಾನಿಸಿದರು. ವೆಂಕಟೇಶ್ ನಾಯ್ಡುಗೆ ಜಮೀನು ಬಿಟ್ಟು ಕೊಡುವಂತೆ ಮನ ಒಲಿಸುವತ್ತ ಸಾಗಿದರು. ಆ ರೀತಿ ಆಗದೆ ಇದ್ದಾಗ ಎಚ್ಚರಿಕೆ ನೀಡಿದರು. ನಾಯ್ಡುವಿನ ಮೇಲೆ ಹಲ್ಲೆ ಮಾಡಿ ಬೆದರಿಕೆ ಹಾಕಿದರು. ನಾಯ್ಡುನ ಅಣ್ಣ ತಮ್ಮಂದಿರು ಆ ಜಮೀನು ಬಿಡುವಂತೆಯೂ ಬೇಕಾದರೆ ತಮ್ಮ ಜಮೀನು ತೆಗೆದುಕೊಳ್ಳುವಂತೆಯೂ ಸಲಹೆ ಮಾಡಿದರು. ನಾಯ್ಡು ಇದಾವುದಕ್ಕೂ ಒಪ್ಪದೆ, ರಕ್ಷಣೆಗಾಗಿ ಮತ್ತೊಂದು ವಾರ್ ಗ್ರೂಪ್ ಅವರ ಬೆಂಬಲ ಪಡೆದು ಮತ್ತಷ್ಟು ಕಿರುಕುಳ ನೀಡಲಾರಂಭಿಸಿದನು."[೫೬]

**ಭೂಮಾಲೀಕ ವೆಂಕಟೇಶ್‌ನಾಯ್ಡುವಿನ ದೌರ್ಜನ್ಯಗಳು**

* ವೆಂಕಟೇಶ್ ನಾಯ್ಡು ಒಂಟಿಯಾಗಿರುವಂತಹ ಮಹಿಳೆಯರ ಮೇಲೆ ದೌರ್ಜನ್ಯದಿಂದ ಬಲಾತ್ಕಾರಿಸುತ್ತಿದ್ದ.
* ನಾಯ್ಡು ವಾರ್ ಗ್ರೂಪ್ ಅವರಿಂದ ತನಗೆ ಪ್ರಾಣ ಹಾನಿಯಾಗುವುದೆಂದು ತನ್ನ ರಕ್ಷಣೆಗಾಗಿ ಜೋಡುನಳಿಗೆ ಬಂದೂಕವೊಂದನ್ನು ಖರೀದಿಸಿದ್ದ. ಆಂಧ್ರದ ಮೇಲ್ಜಾತಿಯ ವಾರ್ ಗ್ರೂಫ್ ಅವರ ಸಂಪರ್ಕ ಪಡೆದು ಕೈ ಬಾಂಬುಗಳನ್ನು ಸಂಗ್ರಹಿಸಿದ್ದ. ದಲಿತರ ಕಾಲೋನಿ ಬಳಿ ಗಸ್ತು ಹಾಕಿ ಕೈಯಲ್ಲಿ ಬಾಂಬ್ ಹಿಡಿದುಕೊಂಡು ಗಾಳಿಯಲ್ಲಿ ಗುಂಡು ಹಾರಿಸಿ ಯಾರಾದರೂ ತನ್ನನ್ನು ಕೆಣಕಿದರೆ ಸುಟ್ಟು ಬಿಡುವುದಾಗಿಯೂ, ತನಗೆ ತೊಂದರೆಯಾದರೆ ಇಡೀ ಹಟ್ಟಿಯನ್ನೇ ಸುಡುವುದಾಗಿಯೂ ಬೆದರಿಕೆ ಹಾಕಿದ್ದ. ಈ ವಿಷಯವನ್ನು ದಲಿತರು ಜಿಲ್ಲಾಧಿಕಾರಿ

ಹಾಗೂ ಜಿಲ್ಲಾ ಪೊಲೀಸ್ ಅಧಿಕಾರಿಗಳಿಗೆ ತುಮಕೂರಿಗೆ ಬಂದು ದೂರು ನೀಡಿದ್ದರು. ಆ ಸಂದರ್ಭದಲ್ಲಿ ದಲಿತರಿಗೆ ರಕ್ಷಣೆ ನೀಡುವುದಾಗಿ ಅಧಿಕಾರಿಗಳು ಭರವಸೆ ನೀಡಿದ್ದರು.

* ಸೂಲನಾಯ್ಕನಹಳ್ಳಿಯ ಆಂಜನೇಯ ದೇವಸ್ಥಾನದ ೬೦ ಎಕರೆ ಇನಾಮು ಜಮೀನನ್ನು ಪ್ರತಿ ವರ್ಷ ಹರಾಜಿನಲ್ಲಿ ದಲಿತರು ೨ ಸಾವಿರ ೩ ಸಾವಿರದ ಒಳಗೆ ಕೂಗಿ ಸಾಮೂಹಿಕವಾಗಿ ಉಳುಮೆ ಮಾಡುತ್ತಿದ್ದರು. ಬೆಳೆಯನ್ನು ಇಡೀ ದಲಿತರು ಸಮನಾಗಿ ಹಂಚಿಕೊಳ್ಳುತ್ತಿದ್ದರು. ಆದರೆ ಈ ಅವಧಿಯಲ್ಲಿ ವೆಂಕಟೇಶ್ ನಾಯ್ಡು ಕೆಲವರನ್ನು ದಲಿತರ ವಿರುದ್ಧ ಎತ್ತಿ ಕಟ್ಟಿ ಪ್ರಚೋದಿಸಿ ಹರಾಜಿನಲ್ಲಿ ಹೆಚ್ಚಿಗೆ ಕೂಗಿಸಿದ ಪರಿಣಾಮ ಹರಾಜು ೨೭ ಸಾವಿರಕ್ಕೇರಿತು. ಆದರೆ ದಲಿತರು ತಾವೇ ಹರಾಜಿನಲ್ಲಿ ಪಡೆದರು.”[೫೭] ಹೀಗೆ ಊರಿನ ಇಡೀ ದಲಿತ ಸಮುದಾಯದ ವಿರುದ್ಧ ದ್ವೇಷ ಮಾಡುತ್ತಿದ್ದ.

ದಲಿತರೆಲ್ಲರೂ ದುರ್ಗಪ್ಪನ ಜಮೀನು ಸೇರಿದಂತೆ ತಮ್ಮ ಹಿರಿಯರು ಕಳೆದುಕೊಂಡ ಎಲ್ಲ ಜಮೀನುಗಳನ್ನು ಒಗ್ಗಟ್ಟಾಗಿ ಉಳುಮೆ ಮಾಡಿದರು. ಇದಕ್ಕೆ ಯಾರ ಅಡ್ಡಿಯೂ ಬರಲಿಲ್ಲ. “ದಲಿತರು ಉಳುಮೆ ಮಾಡಿ ವಾಪಸ್ಸಾಗುತ್ತಿದ್ದಾಗ ಒಂದು ಬಾವಿಯ ಬಳಿ ಕಾಡುಗೊಲ್ಲರಿಗೆ ಸೇರಿದ ಸ್ಟೀಲ್ ಬಟ್ಟಲಿನಿಂದ ನೀರು ಕುಡಿದರು. ಅಸ್ಪೃಶ್ಯರು ತಮ್ಮ ಬಟ್ಟಲನ್ನು ಮುಟ್ಟಿದ್ದಕ್ಕಾಗಿ ಗೊಲ್ಲರ ಯುವಕ ಬಟ್ಟಲು ಮುಟ್ಟಿದ ದಲಿತನನ್ನು ಕುಡುಗೋಲು ಹಿಂಬದಿಯಿಂದ ಹೊಡೆದ. ಆಗ ಅವನಿಗೂ ದಲಿತರಿಗೂ ಘರ್ಷಣೆಯಾಗಿ ಗೊಲ್ಲರ ಯುವಕನನ್ನು ದಲಿತರು ಥಳಿಸಿದರು. ಇದರಿಂದ ಗೊಲ್ಲರು ದಲಿತರ ಮೇಲೆ ಸೇಡು ತೀರಿಸಿಕೊಳ್ಳಲು ಹವಣಿಸುತ್ತಿದ್ದರು. ದಲಿತರು ಮರು ಆಕ್ರಮಿಸಿದ ಜಮೀನುಗಳ ಪೈಕಿ ಎರಡು ಜಮೀನುಗಳು ವಡ್ಡ(ಭೋವಿ)ರಿಗೆ ಸೇರಿದ್ದವು. ಆದುದರಿಂದ ವಡ್ಡರಿಗೂ ದಲಿತರ ಮೇಲೆ ಸಿಟ್ಟು ಇತ್ತು.” ಇದನ್ನು ಬಳಸಿಕೊಂಡ ನಾಯ್ಡು ಗೊಲ್ಲರು, ವಡ್ಡರನ್ನು ಒಟ್ಟಿಗೆ ಸೇರಿಸಿ ದಲಿತರ ಮೇಲೆ ಎತ್ತಿಕಟ್ಟಿ ಇವರ ನೆರವಿನಿಂದ ಬಂದೂಕು ಹಿಡಿದು ಗಸ್ತು ತಿರುಗುತ್ತಾ ದಲಿತರು ಸಾಗುವಳಿ ಮಾಡಿದ್ದ ದುರ್ಗಪ್ಪನ ಜಮೀನು ಮತ್ತು ಭೋವಿಗಳ ಜಮೀನುಗಳನ್ನು ಟ್ರಾಕ್ಟರ್‌ನಿಂದ ಮರುಉಳುಮೆ ಮಾಡಿಸಿದ.

ಈ ಎಲ್ಲಾ ಘಟನೆಗಳು ವಾರ್ ಗ್ರೂಫ್ ಅವರಿಗೆ ತಿಳಿಯಿತು. ಈ ವ್ಯಕ್ತಿಯನ್ನು ಹೀಗೆ ಬಿಟ್ಟರೆ ದಲಿತರ ಭೂಹೋರಾಟ ಮುಂದೆ ಸಾಗದು ಎಂದು ಅವರಿಗೆ ಅರಿವಾಯಿತು. “ಪಾವಗಡ ತಾಲ್ಲೂಕಿನ ೧೮ ಹಳ್ಳಿಗಳಲ್ಲಿ ಭೂಹೋರಾಟ ಕಾರ್ಯಕ್ರಮ ಹಮ್ಮಿಕೊಂಡು, ಅನೇಕ ಹಳ್ಳಿಗಳಲ್ಲಿ ಅಕ್ರಮವಾಗಿ ದಲಿತರ ಜಮೀನುಗಳನ್ನು ಆಕ್ರಮಿಸಿಕೊಂಡಿದ್ದ ಭೂಮಾಲೀಕರಿಂದ ಜಮೀನುಗಳನ್ನು ಬಿಡಿಸಿ ಕೊಡುತ್ತಿದ್ದು ಎಲ್ಲಿಯೂ ಯಾವ ಆಡಚಣೆ ಆಗಿರಲಿಲ್ಲ. ಆದರೆ ಸೂಲನಾಯಕನಹಳ್ಳಿಯಲ್ಲಿ ಈ ಭೂ ಹೋರಾಟ ಕಾರ್ಯಕ್ರಮಕ್ಕೆ ನಾಯ್ಡು ದೊಡ್ಡ ಅಡಚಣೆಯಾದ.

ಹಾಗೂ ವಾರ್ ಗ್ರೂಫ್‌ನ ಚಟುವಟಿಕೆಗಳ ಬಗ್ಗೆ ಸುಳ್ಳು ಆರೋಪಗಳನ್ನು ನಾಯ್ಡು ಪೊಲೀಸರಿಗೆ ತಿಳಿಸುತ್ತಾ ಬಂದನು. ಈ ಮೇಲ್ಕಂಡ ಎಲ್ಲಾ ಕಾರಣಗಳ ಆಧಾರದ ಮೇಲೆ ವಾರ್‌ಗ್ರೂಫ್ ಅವರು ನಾಯ್ಡು ಎಂಬ ವ್ಯಕ್ತಿಯನ್ನು ಮುಗಿಸಲು ಸಂಚು ರೂಪಿಸಿದರು."[೫೯]

"ದಿನಾಂಕ: ೫.೭.೧೯೯೬ರಂದು ಬೆಳಿಗ್ಗೆ ವೆಂಕಟೇಶ ನಾಯ್ಡು ತನ್ನ ಮಾವನ ಮನೆಯಿಂದ ತನ್ನ ಮನೆಗೆ ಬರುತ್ತಿದ್ದಾಗ ವಾರ್ ಗ್ರೂಫ್‌ನ ಸದಸ್ಯರು ತಡೆದು ಗುಂಡು ಹಾರಿಸಿ ಸಾಯಿಸಿ, ಎರಡು ಬಾಂಬ್ ಸಿಡಿಸಿ ಪರಾರಿಯಾದರು."[೬೦] ವಾರ್‌ಗ್ರೂಫ್ ಅವರೇ ವೆಂಕಟೇಶ್ ನಾಯ್ಡು ವ್ಯಕ್ತಿಯನ್ನು ಕೊಲೆ ಮಾಡಿದರು ಎಂಬುದಕ್ಕೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹಲವಾರು ಸಾಕ್ಷಿಗಳು ದೊರೆತಿವೆ. ಅವು ಈ ಕೆಳಕಂಡಂತಿವೆ.

ಮುನ್ಸಿಫ್ ಮತ್ತು ಪ್ರಥಮ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ, ಪಾವಗಡಕ್ಕೆ ನೀಡಿರುವಂತಹ ಸಾಕ್ಷಿಗಳ ವರದಿಗಳಾಗಿವೆ.

೧. ನೆಟ್ಟಮಿ ಗೋವಿಂದಪ್ಪ ಬಿನ್ ಸಣ್ಣಪ್ಪಯ್ಯ, ೭೫ ವರ್ಷ, ಕಮ್ಮ ವಕ್ಕಲಿಗರು, ವಾಸ ಸೂಲನಾಯಕನಹಳ್ಳಿ.

೨. ಸುನೀತ ಡಾಟರಾಫ್ ಎನ್.ಜಿ. ವೆಂಕಟೇಶ್ ನಾಯ್ಡು, ೧೧ ವರ್ಷ, ಕಮ್ಮ ವಕ್ಕಲಿಗರು, ೫ನೇ ತರಗತಿ ವಿದ್ಯಾರ್ಥಿನಿ.

೩. ಸುಗುಣಮ್ಮ ಕೋಂ ವೆಂಕಟೇಶನಾಯ್ಡು, ೨೮ ವರ್ಷ, ಕಮ್ಮ ವಕ್ಕಲಿಗರು, ಮನೆ ಕೆಲಸ, ವಾಸ ಸೂಲನಾಯಕನಹಳ್ಳಿ.

೪. ಲಕ್ಷ್ಮೀ ದೇವಮ್ಮ ಕೋಂ ನಾಗಪ್ಪ, ೫೦ ವರ್ಷ, ಕಮ್ಮ ವಕ್ಕಲಿಗರು, ಮನೆಕೆಲಸ, ಸೂಲನಾಯಕನಹಳ್ಳಿ.

೫. ರಾಮಾಂಜಿ ಅಲಿಯಾಸ್ ಮೆಂಬರ್ ರಾಮಾಂಜಿ ಬಿನ್ ರಾಮಪ್ಪ, ೩೮ ವರ್ಷ, ಬೋವಿ ಜನಾಂಗ, ಸೂಲನಾಯಕನಹಳ್ಳಿ.

ಮೇಲ್ಕಂಡ ಎಲ್ಲಾ ವ್ಯಕ್ತಿಗಳು ವೆಂಕಟೇಶ್‌ನಾಯ್ಡು ಹತ್ಯೆಯ ಪ್ರತ್ಯಕ್ಷ ಸಾಕ್ಷಿಗಳಾಗಿ ಹೇಳಿಕೆಗಳನ್ನು ನೀಡಿದ್ದಾರೆ.

**ದಲಿತರು ಊರು ಬಿಡಲು ಕಾರಣ**

"ದಲಿತರಿಗೂ ನಾಯ್ಡುವಿಗೆ ಮೊದಲಿನಿಂದಲೂ ಘರ್ಷಣೆ ನಡೆಯುತ್ತಿದ್ದುದರಿಂದ, ಈ ಕೊಲೆ ಪ್ರಕರಣ ತಮ್ಮ ಮೇಲೆ ಬರಬಹುದು ಹಾಗೂ ಪೊಲೀಸರು ನಮ್ಮನ್ನೇ ಬಂಧಿಸಬಹುದೆಂಬ

ಭಯದಿಂದ ಹಟ್ಟಿಯಲ್ಲಿದ್ದ, ದಲಿತ ಸಮುದಾಯದ ಗಂಡಸರು ಕೊಲೆಯಾದ ತಕ್ಷಣ ಓಡಿ ಹೋದರು. ಉದ್ರಿಕ್ತ ವಾತಾವರಣ ಉಂಟಾದಾಗ ಭಯದಿಂದ ಕೆಲವು ಮಹಿಳೆಯರು ಮಕ್ಕಳೊಂದಿಗೆ ಊರು ಬಿಟ್ಟರು."[೬೧]

**ಕೊಲೆಯಾದ ದಿನ ಊರಿನಲ್ಲಿ ನಡೆದ ದೌರ್ಜನ್ಯ**

ದಲಿತರು ಊರು ಬಿಟ್ಟು ಓಡಿದ ನಂತರ ಕೊಲೆಯ ವಿಷಯ ಪಕ್ಕದ ಹಳ್ಳಿಗಳಿಗೂ ಹಬ್ಬಿ ಎಲ್ಲರೂ, ಆ ಊರಿಗೆ ಧಾವಿಸಿದರು. ಗುಂಪು ದೊಡ್ಡದಾಗುತ್ತಾ ಬಂತು. ಪಕ್ಕದ ಊರುಗಳಲ್ಲಿ, ಆಂಧ್ರದಲ್ಲಿ ಇದ್ದ ನಾಯ್ಡುವಿನ ಸಂಬಂಧಿಗಳು ಬಂದರು. ಪೊಲೀಸರೂ ಬಂದಿದ್ದರು. "ರಾಯಚರ್ಲು ಗ್ರಾಮದಿಂದ ಬಂದ ಮೃತನ ಅಕ್ಕ ಮಂಗಮ್ಮ ತಮ್ಮನ ಶವ ನೋಡಿ ಕೋಪ ತಾಳಲಾರದೇ ತನ್ನ ತಮ್ಮ 'ನಾನು ಸತ್ತರೆ ಈ ಹಟ್ಟಿಯ ಒಂದೂ ಮನೆ ಉಳಿಸಬಾರದು" ಎಂದು ತಿಳಿಸಿದ್ದಾನೆಂದು ಕೂಗುತ್ತಾ ದಲಿತರ ಮನೆಗಳಿಗೆ ಬೆಂಕಿ ಹಚ್ಚಲು ತಾನೇ ಮೊದಲು ಪ್ರಾರಂಭಿಸಿದರು. ಆ ದಿನ ಆ ಊರಿಗೆ ಸೀಮೆ ಎಣ್ಣೆ ಲಾರಿ ಬಂದು ಕೆಟ್ಟು ಅಲ್ಲೇ ನಿಂತಿತ್ತು. ಆ ಸೀಮೆ ಎಣ್ಣೆಯನ್ನು ಬಕೆಟ್‌ಗಳಲ್ಲಿ ತುಂಬಿಕೊಂಡು ಮನೆಗಳ ಎಲ್ಲಾ ಭಾಗಗಳಿಗೆ ಎರಚಿ; ವೃದ್ಧರು ಮಕ್ಕಳನ್ನು ನಿರ್ದಾಕ್ಷಿಣ್ಯವಾಗಿ ಹೊರಗೆ ಎಳೆದು ಬೆಂಕಿ ಹಚ್ಚಿದರು. ಆಗ ಉಳಿದ ಹೆಂಗಸರು, ಮಕ್ಕಳು, ಮುದುಕರು ಪ್ರಾಣ ಭಯದಿಂದ ಊರು ಬಿಟ್ಟರು. ಮನೆಗಳಲ್ಲಿದ್ದ ಧವಸ ಧಾನ್ಯ, ಎಮ್ಮೆಗಳು, ಹಸುಗಳು, ಕೋಳಿಗಳು ಸುಟ್ಟು ಸತ್ತು ಹೋದವು. ೧೨ ಟೈರು ಬಾಡಿಗಳು, ೨೦ಕ್ಕೂ ಹೆಚ್ಚು ಸೈಕಲ್ಲುಗಳು ಸುಟ್ಟು ಹೋದವು. ಬೆಂಕಿ ಆರಿಸುವ ವಾಹನವನ್ನು ಒಳಗೆ ಬಿಡದೆ ತಡೆದು, ಬೆಂಕಿ ಆರಿಸುವವರೇ ಇಲ್ಲದೆ ಈ ಬೆಂಕಿ ಎರಡು ಮೂರು ದಿನಗಳು ಉರಿಯುತ್ತಲೇ ಇತ್ತು. ಹುಲ್ಲಿನ ಬಣವೆಗಳು ಸುಟ್ಟು ಬೂದಿಯಾದವು."[೬೨]

ಕೊನೆಗೆ ಶಿವರಾಮ ಕಾರಂತರ ಚೋಮನ ರೀತಿ ದುರ್ಗಪ್ಪನಿಗೆ ಭೂಮಿ ಸಿಗಲಿಲ್ಲ. ಅವನಿಗಾದ ಅನ್ಯಾಯಕ್ಕೆ ನ್ಯಾಯ ಸಿಗಲಿಲ್ಲ.

ಭಾರತದ ಜಾತಿ ವ್ಯವಸ್ಥೆಯನ್ನು ಬೆಂಬಲಿಸುವ ಶೋಷಕ ಸಮುದಾಯಗಳು, ತಳಸಮುದಾಯಗಳ ಮೇಲೆ ಯಾವ ರೀತಿ ದೌರ್ಜನ್ಯವೆಸಗುತ್ತವೆ ಎಂಬುದಕ್ಕೆ ಉದಾಹರಣೆಯಾಗಿ ಖೈರ್ಲಾಂಜಿ ಘಟನೆಯನ್ನು ಕೂಡ ಗಮನಿಸಲಾಗಿದೆ. ಖೈರ್ಲಾಂಜಿಯು ಮಹಾರಾಷ್ಟ್ರದ ನಾಗಪುರದ ಸಮೀಪವಿರುವ ಒಂದು ಹಳ್ಳಿ. ಖೈರ್ಲಾಂಜಿಯಲ್ಲಿ ಸ್ವಾವಲಂಬಿಗಳಾಗಿ ಮತ್ತು ಸ್ವಾಭಿಮಾನದಿಂದ ಬದುಕಲು ಪ್ರಯತ್ನಿಸಿದ ಅಪರಾಧಕ್ಕಾಗಿ ದಲಿತ ಸಮುದಾಯದ ಬೈಯಲಾಲ್ ಭೋತ್‌ಮಾಂಗೆ-ಸುರೇಖಾ ಭೋತ್‌ಮಾಂಗೆ ಕುಟುಂಬದ ಮೇಲೆ ೨೦೦೬ರ ಸೆಪ್ಟೆಂಬರ್

೨೯ ರಂದು ಸವರ್ಣೀಯ ಹಿಂದೂಗಳು ಘೋರ ಅತ್ಯಾಚಾರವೆಸಗುತ್ತಾರೆ. ಘಟನೆಗೆ ಪೂರ್ವದಲ್ಲಿ ಬೋತ್‌ಮಾಂಗೆ ಕುಟುಂಬದ ಮೇಲೆ ಆಗುತ್ತಿದ್ದಂತಹ ದೌರ್ಜನ್ಯಗಳು ಈ ಕೆಳಗಿನಂತಿವೆ.

"೧. ಜಾತಿ ತಾರತಮ್ಯದಿಂದಗಿ ಅವರು ಕಾಲುವೆಯಿಂದ ತಮ್ಮ ಜಮೀನಿಗೆ ನೀರು ಹಾಯಿಸಿಕೊಳ್ಳುವುದು ಕಷ್ಟವಾಗಿತ್ತು. ಈ ಗ್ರಾಮಸ್ಥರ ಕಿರುಕುಳದಿಂದ ತಪ್ಪಿಸಿಕೊಳ್ಳಲು ತಮ್ಮ ಜಮೀನಿಗೆ ರಾತ್ರಿ ಹೊತ್ತು ಅಥವಾ ಮುಂಜಾನೆ(ಹಗಲು ಮೂಡುವ ಮುನ್ನ) ನೀರು ಹಾಯಿಸಿಕೊಳ್ಳಬೇಕು.

೨. ಮನೆ ಕಟ್ಟಿಕೊಳ್ಳಲು ಗ್ರಾಮ ಪಂಚಾಯಿತಿ ಅವರು ಅನುಮತಿ ಕೊಡಲಿಲ್ಲ. ಅವರ ಗುಡಿಸಲಿಗೆ ವಿದ್ಯುತ್ ಸಂಪರ್ಕವನ್ನು ನೀಡಲಾಗಿರಲಿಲ್ಲ.

೩. ಊರ ಬಾವಿಯಿಂದ ಕುಡಿಯುವ ನೀರನ್ನು ಪಡೆಯುವಲ್ಲಿ ತಾರತಮ್ಯತೆ ಇತ್ತು.

೪. ಸವರ್ಣೀಯ ವ್ಯಕ್ತಿಗಳು ತಮ್ಮ ಜಮೀನುಗಳಿಗೆ ಹಾದು ಹೋಗಲು ಭೈಯ್ಯಲಾಲ್ ತನ್ನ ಜಮೀನಿನಲ್ಲಿ ಒಂದಷ್ಟು ಭಾಗವನ್ನು ರಸ್ತೆಗೆ ಬಿಟ್ಟುಕೊಡಬೇಕೆಂದು ತಗಾದೆ ಮಾಡುತ್ತಿದ್ದರು. ಕೊನೆಗೆ ಭೋತ್‌ಮಾಂಗೆ ಅವರು ತಮ್ಮ ಜಮೀನಿನಲ್ಲಿ ೧೦ ಅಡಿ ರಸ್ತೆಯನ್ನು ಬಿಟ್ಟು ಕೊಟ್ಟಿದ್ದರು."[೬೩]

ಸುರೇಖಾ ಭೋತ್‌ಮಾಂಗೆ ಅಂಬೇಡ್ಕರ್ ಚಿಂತನೆಗಳಿಂದ ಪ್ರಭಾವಿತಳಾಗಿ, ತಮ್ಮ ಮಕ್ಕಳನ್ನು ಸುಶಿಕ್ಷಿತರನ್ನಾಗಿ ಬೆಳೆಸಿದರು. ಸ್ವಾಭಿಮಾನದಿಂದ ಜೀವನ ಸಾಗಿಸುತ್ತಿದ್ದ ಭೋತ್ ಮಾಂಗೆ ಕುಟುಂಬವನ್ನು ನೋಡಿ ಸವರ್ಣೀಯರಿಗೆ ಸಹಿಸಲಾಗಲಿಲ್ಲ. ಕೊನೆಗೆ ಸವರ್ಣೀಯರು ಸುರೇಖಾ ಭೋತ್‌ಮಾಂಗೆ ಮತ್ತು ಅವಳ ಮಕ್ಕಳನ್ನು ಹತ್ಯೆ ಮಾಡುತ್ತಾರೆ. ಆನಂದ್ ತೇಲ್‌ತುಂಬ್ಡೆ ಅವರು ಸ್ವಾತಂತ್ರೋತ್ತರ ಭಾರತದ ಹೀನಾಯ ಜಾತಿ ದೌರ್ಜನ್ಯವನ್ನು ಖೈರ್ಲಾಂಜಿ ಪುಸ್ತಕದಲ್ಲಿ ನಿರೂಪಿಸಿದ್ದಾರೆ.

## ವೀರಬೊಮ್ಮನಹಳ್ಳಿ ಭೂಹೋರಾಟ

ಶಿರಾ ತಾಲ್ಲೂಕು ಹುಲಿಕುಂಟೆ ಹೋಬಳಿ ವೀರಬೊಮ್ಮನ ಹಳ್ಳಿಯಲ್ಲಿದ್ದ ಸುಮಾರು ೪೫ ಜಮೀನನ್ನು ಕಾಂಗ್ರೆಸ್ ಸರ್ಕಾರ ೨೦೦೨-೦೩ರಲ್ಲಿ ಮಂಜುರಾತಿ ನೀಡಿತು. ಖಾತೆ ಮತ್ತು ಪಹಣಿ ಆಯ್ತು. ಸುಮಾರು ೧೦ ವರ್ಷಗಳಿಂದ ದಲಿತರು, ಹಿಂದುಳಿದವರು ಸಾಗುವಳಿ ಮಾಡುತ್ತಾ ಬಂದಿದ್ದರು. ಅಲ್ಲಿನ ಪಟ್ಟಭದ್ರ ಹಿತಾಸಕ್ತಿಗಳು ದೌರ್ಜನ್ಯ ನಡೆಸುವುದರ ಮೂಲಕ ಸವಾಲನ್ನು ನೀಡಿದ್ದರು. "ಸರ್ಕಾರಿ ಜಮೀನನ್ನು ದೇವಸ್ಥಾನಕ್ಕೆ ಬಿಟ್ಟು ಕೊಡಿ ಎಂದು ಕೇಳಿದರು. ಆ ಪಂಚಾಯಿತಿಗೆ ಹೋಗದಿರುವ ಕಾರಣಕ್ಕಾಗಿ, ಮರುದಿನ ಬೆಳಗಿನ

ಜಾವ ನಲವತ್ತೈದು ಎಕರೆಯಲ್ಲಿದ್ದ ಕಡಲೆಕಾಯಿ ಬೆಳೆಯನ್ನು (ಫಸಲು ಬರುವುದಕ್ಕೆ ಒಂದು ತಿಂಗಳು ಬೇಕಾಗಿತ್ತು) ನಾಶ ಮಾಡಿದರು. ದಲಿತರು ಪಟ್ನಾಯಕನಹಳ್ಳಿ ಪೊಲೀಸರ ಮೊರೆ ಹೊಕ್ಕರು. ತಮ್ಮ ಗುಲಾಮರಾಗಿ ಬಾಳಬೇಕೆಂಬುದು ಭೂಮಾಲೀಕ ವರ್ಗವಾದ ಒಕ್ಕಲಿಗ ಸಮುದಾಯದ ಮನಸ್ಥಿತಿಯಾಗಿತ್ತು."[೬೪] ಈ ದೌರ್ಜನ್ಯವನ್ನು ವಿರೋಧಿಸಿ ದಲಿತ ಸಂಘಟನೆಗಳು ಮತ್ತು ಬಹುಜನ ಸಮುದಾಯವಾದಿ ಪಕ್ಷ ಕಾಲ್ನಡಿಗೆ ಜಾಥವನ್ನು ಹಮ್ಮಿಕೊಂಡಿತ್ತು. ಸುಮಾರು ೩೫ ಕಿ.ಮೀ. ಕಾಲ್ನಡಿಗೆ ಜಾಥವನ್ನು ಮಾಡಲಾಯಿತು. ಈ ಕಾಲ್ನಡಿಗೆ ಜಾಥದಲ್ಲಿ ಉಪನ್ಯಾಸಕಿಯಾದ ಸಮತಾ ದೇಶಮಾನೆ ಅವರು ಕೂಡ ಭಾಗವಹಿಸಿದ್ದರು. ಈ ಸಂದರ್ಭದಲ್ಲಿ ಅವರು "ಬಹುಜನ ಸಮಾಜವೆಲ್ಲ ಸಂಘಟಿತರಾಗಿ ಹೋರಾಟ ಮಾಡಬೇಕು. ಉತ್ತರ ಪ್ರದೇಶದಲ್ಲಿ ಮಾಯವತಿ ಅವರು ಮೂರುಬಾರಿ ಮುಖ್ಯಮಂತ್ರಿ ಆಗುವುದರ ಮೂಲಕ 'ಸರ್ಕಾರದ ಜಮೀನು ಬಡವರ ಜಮೀನು' ಎಂದು ಘೋಷಿಸುವುದರ ಜೊತೆಗೆ ಏಳುವರೆ ಲಕ್ಷ ಜಮೀನನ್ನು ನಿರ್ಗತಿಕರಿಗೆ ಹಂಚಿದರು"[೬೫] ಎಂದು ಹೇಳಿದರು. ವೀರಬೊಮ್ಮನಹಳ್ಳಿ ಭೂಹೋರಾಟ ಯಶಸ್ವಿಯಾಯಿತು. ಇದೇ ರೀತಿಯಾಗಿ ರಾಜಸಿಂಹ ಅವರು ಕರಿರಾಮನಹಳ್ಳಿ ಹಾಗೂ ತುರುವೇಕೆರೆ ತಾಲೂಕಿನ ಮೇಲ್‌ಹೊಲಗೇರ ಹಳ್ಳಿ ಭೂ ಹೋರಾಟದಲ್ಲಿ ಭಾಗವಹಿಸಿದ್ದಾರೆ. ಆದರೆ ಈ ಹೋರಾಟಗಳು ಯಶಸ್ವಿಯಾಗಲಿಲ್ಲವೆಂಬುದು ವಾಸ್ತವ.

### ದಲಿತರ ಭೂಮಿ ಮೇಲೆ ಮಂತ್ರವಾದಿಯ ಕಣ್ಣು

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು, ಹುಲಿಯೂರುದುರ್ಗ ಹೋಬಳಿಗೆ ಸೇರಿದ ಕೆಂಚನಹಳ್ಳಿ ಗ್ರಾಮದಲ್ಲಿ "ಸುಮಾರು ೨೦ ದಲಿತ ಕುಟುಂಬಗಳಿವೆ. ತೋಟಿ, ತಳವಾರಿಕೆಯಿಂದ ಬರುವ ಕೂಲಿಯೇ ಈ ಕುಟುಂಬಗಳ ಜೀವನ ನಿರ್ವಹಣೆಯ ಆರ್ಥಿಕ ಮೂಲವಾಗಿದೆ. ಜೊತೆಗೆ ಸರಕಾರ ಈ ಹಿಂದೆ ನೀಡಿದ ೧೨ ಎಕರೆ ೧೬ ಗುಂಟೆ ತೋಟ ಇನಾಮತಿ ಜಮೀನೂ ಆಧಾರಕ್ಕಿದೆ. ಆದರೆ ಅದೇ ಜಮೀನಿನ ಮೇಲೆ ಸ್ಥಳೀಯ ಮಂತ್ರವಾದಿ ಒಬ್ಬನ ಕಣ್ಣು ಬಿದ್ದಿದೆ."[೬೬] ಈತನ ಹೆಸರು ಶಂಕ್ರಯ್ಯ. ಸವರ್ಣೀಯ ಒಕ್ಕಲಿಗ ಸಮುದಾಯಕ್ಕೆ ಸೇರಿದವರು. ಈತ ಸ್ವಯಂ ಘೋಷಿತ ದೇವ ಮಾನವ. ಈತನ ದೇವಸ್ಥಾನವಿರುವುದು ದಲಿತರ ಜಮೀನಿನಲ್ಲಿ. "ಈಗ ವಾಮಾಚಾರದ ತಂತ್ರ ಬಳಸಿ ಒಕ್ಕಲೆಬ್ಬಿಸುತ್ತಿದ್ದಾನೆ. ಜಮೀನು ಕೊಡಲೊಪ್ಪದ ದಲಿತ ಕುಟುಂಬದವರಲ್ಲೇ ಒಡೆದಾಳುವ ನೀತಿಯನ್ನು ಹೇರುತ್ತಿದ್ದಾನೆ. ಭೂ ರಹಿತರಿಗೆ ಭೂಮಿ ಕೊಡಿ ಎಂದು ಊನಾ ಮಾದರಿಯಲ್ಲಿ 'ಉಡುಪಿ ಚಲೋ' ಹೋರಾಟ ಹಮ್ಮಿಕೊಳ್ಳಲಾಗಿದೆ. ಅದರ ಜತೆಗೆ ಹೋರಾಟಗಾರರು ದಲಿತರ ಜಮೀನನ್ನು ಮಂತ್ರವಾದಿಯ ಕೈಯಿಂದ ಉಳಿಸಿಕೊಡಬೇಕು"[೬೭] ಎಂಬುದು ಸ್ಥಳೀಯರ ಬೇಡಿಕೆ ಆಗಿದೆ.

ಹೀಗೆ ತುಮಕೂರು ಜಿಲ್ಲೆಯಲ್ಲಿ ತಳಸಮುದಾಯಗಳ ಭೂಮಿ ಪ್ರಶ್ನೆಗಳನ್ನು ಗಮನಿಸಬಹುದು.

೧೯೬೧ರ ಭೂ ಸುಧಾರಣಾ ಕಾಯಿದೆಗೆ ಹೋಲಿಸಿದರೆ ೧೯೭೪ರ ಕಾಯಿದೆ ಸಾಧನೆ ಮಾಡಿದೆ. ಇದರಿಂದಾಗಿ ತುಮಕೂರು ಜಿಲ್ಲೆಯಲ್ಲಿ ತಳಸಮುದಾಯಗಳು ಹೊಲದ ಒಡೆಯರಾದರು. ಆದರೆ ಇಂದು ತಳಸಮುದಾಯಗಳು ಭೂ ವಂಚಿತರಾಗುತ್ತಿದ್ದಾರೆ. ಭೂ ಸುಧಾರಣೆಯೋ? ಭೂ ಸ್ವಾಧೀನವೋ? ಎಂಬ ಪ್ರಶ್ನೆಗಳು ಉಂಟಾಗುತ್ತಿವೆ. ಘನ ತ್ಯಾಜ್ಯ ವಿಸ್ತರಣಾ ಘಟಕ, ಫುಡ್‌ಪಾರ್ಕ್ ಮೊದಲಾದ ಕೈಗಾರಿಕೆಗಳನ್ನು ಸ್ಥಾಪಿಸಲು ಬಂಡವಾಳಶಾಹಿಗಳಿಗೆ ಸರ್ಕಾರ ಭೂಮಿಯನ್ನು ನೀಡುತ್ತಿದೆ. ಇದರಿಂದ ತಳಸಮುದಾಯಗಳು ಭೂವಂಚಿತರಾಗಿ, ಆರ್ಥಿಕ ದುಸ್ಥಿತಿಗೆ ತಳ್ಳಲ್ಪಡುತ್ತಿದ್ದಾರೆ.

## ೬.೨. ಶೈಕ್ಷಣಿಕ ವ್ಯವಸ್ಥೆ

ಶತಮಾನಗಳಿಂದ ಶಿಕ್ಷಣದಿಂದ ವಂಚಿತರಾದಂತಹ ತಳಸಮುದಾಯಗಳಿಗೆ ಶಿಕ್ಷಣವನ್ನು ನೀಡುವಂತಹ ಪ್ರಯತ್ನಗಳು ವಸಾಹತುಶಾಹಿ ಕಾಲಘಟ್ಟದಲ್ಲಿ ನಡೆದವು. ಸ್ವಲ್ಪ ಮಟ್ಟಿಗಾದರೂ ತಳಸಮುದಾಯಗಳು ಸಾಮಾಜಿಕ ಸ್ಥಾನ ಹಾಗೂ ಆರ್ಥಿಕ ಸ್ವಾವಲಂಬನೆಯನ್ನು ಪಡೆಯುವಲ್ಲಿ ಶಿಕ್ಷಣ ಪ್ರಮುಖ ಪಾತ್ರ ವಹಿಸಿತು. ವಸಾಹತುಶಾಹಿ ಕಾಲಘಟ್ಟದಲ್ಲಿ ತಳಸಮುದಾಯಗಳ ಶೈಕ್ಷಣಿಕ ವ್ಯವಸ್ಥೆಯ ಬಗ್ಗೆ ನೋಡುವುದಾದರೆ-

ಭಾರತೀಯ ಸಮಾಜವು ಜಾತಿ ವ್ಯವಸ್ಥೆಯನ್ನು ಆಧಾರವಾಗಿಟ್ಟುಕೊಂಡಿದ್ದರಿಂದ ತಳಸಮುದಾಯಗಳು ಶತಮಾನಗಳಿಂದ ಶಿಕ್ಷಣದಿಂದ ವಂಚಿತವಾದವು. ಇಂತಹ ಸಂದರ್ಭದಲ್ಲಿ ತಳಸಮುದಾಯಗಳಿಗೆ ಹಾಗೂ ಮಹಿಳೆಯರಿಗಾಗಿ ಶಾಲೆಯನ್ನು ಆರಂಭಿಸಿ, ಶಿಕ್ಷಣವನ್ನು ನೀಡುವಲ್ಲಿ ಜ್ಯೋತಿಬಾ ಪುಲೆ ದಂಪತಿಗಳು ಮುಂದಾದರು. ಇದರಿಂದ ಅನೇಕ ತೊಂದರೆಗಳನ್ನು ಭಾರತೀಯ ಸಮಾಜದಿಂದ ಅನುಭವಿಸಿದರು. “ಬ್ರಾಹ್ಮಣ ಸ್ನೇಹಿತನ ಮದುವೆಯಲ್ಲಿ ಅವಮಾನಿತರಾಗಿ ಜ್ಯೋತಿಬಾ ಪುಲೆ ಅವರು ಹೊರದೂಡಲ್ಪಟ್ಟರು. ಅವರು ೧೯೪೮ರಲ್ಲಿ ಮೊದಲ ಬಾರಿಗೆ ಪುಣೆಯಲ್ಲಿ ತಳಸಮುದಾಯಗಳು ಮತ್ತು ಮಹಿಳೆಯರಿಗಾಗಿಯೇ ಪ್ರತ್ಯೇಕ ಶಾಲೆಯನ್ನು ತೆರೆದರು.”[೬೮] ಶಿಕ್ಷಕರಾಗಿ ಕೆಲಸ ಮಾಡಲು ಯಾರೂ ಮುಂದೆ ಬಾರದಿದ್ದಾಗ ತಮ್ಮ ಮಡದಿಯನ್ನೇ ಶಿಕ್ಷಕಿಯನ್ನಾಗಿ ನೇಮಕ ಮಾಡಿದರು.

೧೮೪೭ರಲ್ಲಿ ಸಾವಿತ್ರ ಬಾಯಿ ಅವರು ಫಾತೀಮಾ ಶೇಖ್ ಎಂಬ ಮುಸ್ಲಿಂ ಮಹಿಳೆಯಿಂದ ಅಧ್ಯಾಪಕ ತರಬೇತಿ ಪಡೆದಿದ್ದರು. ಸಾವಿತ್ರಿಬಾಯಿ ಮಹಾರಾಷ್ಟ್ರದಲ್ಲಿ ತರಬೇತಾದ ‘ಮೊದಲ

ಮಹಿಳಾ ಶಿಕ್ಷಕಿ' ಎಂಬ ಹೆಗ್ಗಳಿಕೆಗೆ ಪಾತ್ರರಾದರು. "೧೮೪೮ರಲ್ಲಿ ಮೊಟ್ಟ ಮೊದಲ ಬಾರಿಗೆ ಪುಣೆಯ ಬುಧವಾರ ಪೇಟೆಯ 'ಭೀಡೆ' ಎಂಬುವರ ಮನೆಯಲ್ಲಿ ಹೆಣ್ಣುಮಕ್ಕಳ ಶಾಲೆ ತೆರೆದರು. ೧೮೫೧ರಲ್ಲಿ ಪುಣೆಯ ರಸ್ತಾ ಪೇಟೆಯಲ್ಲಿ ಹೆಣ್ಣು ಮಕ್ಕಳಿಗಾಗಿಯೇ ಮತ್ತೊಂದು ವಿಶೇಷ ಶಾಲೆ, ೧೮೫೧-೫೨ರಲ್ಲಿ ಎಲ್ಲ ವರ್ಗದ ಮಕ್ಕಳಿಗಾಗಿ ಮತ್ತೆರಡು ಶಾಲೆಗಳನ್ನು ತೆರೆದರು. ಇದಾದ ಎರಡು ವರ್ಷಗಳ ಅನಂತರ ಮಹರರು, ಮಾಂಗ ಜನಾಂಗದವರಿಗಾಗಿಯೇ ಒಂದು ಶಾಲೆಯನ್ನು ತೆರೆದರು."[೬] ಜಾತಿ ವ್ಯವಸ್ಥೆಯಿಂದ ತಮ್ಮ ಶಿಕ್ಷಣವನ್ನೇ ಕಳೆದುಕೊಂಡಿದ್ದ ತಳಸಮುದಾಯಗಳಿಗೆ ಶಿಕ್ಷಣವನ್ನು ನೀಡಿದರು.

**ಪುಲೆ ದಂಪತಿಯ ಅಕ್ಷರ ಕ್ರಾಂತಿ**

ಸುಮಾರು "೧೮ ಶಾಲೆಗಳನ್ನು ಪುಲೆ ದಂಪತಿ ತೆರೆದು ಅಕ್ಷರಕ್ರಾಂತಿಯನ್ನೇ ಮಾಡಿದರು. ತಾವು ಸ್ಥಾಪಿಸಿದ ಸತ್ಯಶೋಧಕ ಸಮಾಜದ ಮೂಲಕ ೧೮೭೬-೭೭ರ ವೇಳೆಗಾಗಲೇ ಐವತ್ತಕ್ಕೂ ಹೆಚ್ಚು ಹಾಸ್ಟೆಲ್‌ಗಳನ್ನು ನಡೆಸುತ್ತಿದ್ದರು."[೭೦] ಪುಲೆ ದಂಪತಿ ಸ್ಥಾಪಿಸಿದ ಶಾಲೆಯಲ್ಲಿ ಓದಿದ ಡಾ.ಬಿ.ಆರ್.ಅಂಬೇಡ್ಕರ್ ಅವರ ತಂದೆ ರಾಮ್‌ಜೀ ಸಕ್ಪಾಲ್ ಅವರು ನಾಲ್ಕನೇ ತರಗತಿ ತೇರ್ಗಡೆಯಾಗಿ ಮಿಲಿಟರಿ ಸೇರಿದ್ದರು.

**ಕ್ರೈಸ್ತ ಮಿಶನರಿಗಳು**

ಭಾರತದಲ್ಲಿ ಬ್ರಿಟೀಷರು ೧೮೧೩ರ ಚಾರ್ಟರ್ ಆಕ್ಟ್‌ನ ಮೂಲಕ ಕ್ರೈಸ್ತ ಮಿಶನರಿಗಳು ಭಾರತದಲ್ಲಿ ನೆಲೆಸಲು ಅವಕಾಶ ಮಾಡಿಕೊಟ್ಟಾಗ, ಕ್ರೈಸ್ತ ಧರ್ಮದ ಚಟುವಟಿಕೆಗಳು ತೀವ್ರಗೊಂಡವು. ಈ ಮಿಶನರಿಗಳು ತಳಸಮುದಾಯಗಳ ಶಿಕ್ಷಣಕ್ಕಾಗಿ ಶ್ರಮಿಸಿದವು. ಅಂತಹ ಉದಾಹರಣೆಯನ್ನು ತುಮಕೂರು ಜಿಲ್ಲೆಯಲ್ಲೂ ಕೂಡ ಗಮನಿಸಬಹುದು.

ಮಧುಗಿರಿ ತಾಲ್ಲೂಕಿನಲ್ಲಿ ಜಯಮಂಗಲಿ ಎಂಬ ಸಣ್ಣ ಹೊಳೆಯ ತೀರದಲ್ಲಿ ಬಡಚೌಡನ ಹಳ್ಳಿ ಎಂಬ ಹಳ್ಳಿ ಇದೆ. ಇಲ್ಲಿ "೧೮೭೫ಕ್ಕೂ ಮುಂಚೆಯೇ ಪ್ರೊಟೆಸ್ಟೆಂಟ್ ಮಿಶನರಿಗಳ ವೇಸ್ಲಿಯನ್ನರು ತಮ್ಮ ಕಾರ್ಯಕ್ಷೇತ್ರವನ್ನಾಗಿ ಮಾಡಿಕೊಂಡಿದ್ದರು. ಈ ಹಳ್ಳಿಯಲ್ಲಿ ಬಂದಕ್ಕೈನ ಎಂಬುವಳ ಮಗ ನರಸಪ್ಪ ಎಂಬುವವರು ಇದ್ದರು."[೭೧] ನರಸಪ್ಪ ಶಿಕ್ಷಣದಲ್ಲಿ ಆಸಕ್ತಿಯನ್ನು ಹೊಂದಿದವರಾಗಿದ್ದರು. ಆ ಸಂದರ್ಭದಲ್ಲಿ ತಳಸಮುದಾಯಗಳು ವಿದ್ಯೆಯನ್ನು ಕಲಿಯುವುದು ಸುಲಭವಾಗಿರಲಿಲ್ಲ. ದನ ಕಾಯುವ ವೃತ್ತಿ ಮಾಡುತ್ತಿದ್ದ ನರಸಪ್ಪ ಅವರು ಕ್ರೈಸ್ತ ಚರ್ಚ್‌ಗೆ ಕ್ರಮವಾಗಿ ಹೋಗುತ್ತಿದ್ದರು. ಈ ರೀತಿಯಾಗಿ ಇವರು ಕ್ರೈಸ್ತ ಧರ್ಮದ ಪ್ರಭಾವಕ್ಕೆ ಒಳಗಾದರು. "೧೮೭೬ರಲ್ಲಿ ಜೆ.ಸಿ.ಡಬ್ಲ್ಯೂ ಗೋಸ್ಪಿಕ್ ಅವರು ಕ್ರೈಸ್ತ ಮತಕ್ಕೆ ಸೇರಿಸಿದರು. ಈ ಮೂಲಕ

ಇವರನ್ನು ಬೋರ್ಡಿಂಗ್ ಸ್ಕೂಲಿಗೆ ಸೇರಿಸಿದರು."[೨೨] ಕ್ರೈಸ್ತರ ಮೂಲ ಉದ್ದೇಶ ತಳಸಮುದಾಯಗಳಿಗೆ ಶಿಕ್ಷಣವನ್ನು ನೀಡುವುದರ ಮೂಲಕ, ಕ್ರೈಸ್ತ ಧರ್ಮಕ್ಕೆ ಮತಾಂತರಿಸುವುದಾಗಿತ್ತು.

### ಮೈಸೂರು ಸಂಸ್ಥಾನ

ಮೈಸೂರು ಮಾದರಿ ಸಂಸ್ಥಾನವಾಗುವಲ್ಲಿ ಹಾಗೂ ತಳಸಮುದಾಯಗಳಿಗೆ ಶಿಕ್ಷಣ ನೀಡುವಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಪಾತ್ರ ಪ್ರಮುಖವಾದದ್ದು. ನಾಲ್ವಡಿ ಕೃಷ್ಣರಾಜ ಒಡೆಯರ ಕೊಡುಗೆಗಳನ್ನು ಕುರಿತು ಚಿನ್ನಸ್ವಾಮಿ ಸೋಸಲೆ ಅವರು ಅಧ್ಯಯನ ಮಾಡಿದ್ದಾರೆ. "ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಆರಂಭವಾದದ್ದು ೧೮೩೩ರಲ್ಲಿ. ಮೂರನೇ ಕೃಷ್ಣರಾಜ ಒಡೆಯರು ೧೮೩೩ರಲ್ಲಿ ಪ್ರಥಮ ಬಾರಿಗೆ ಮೈಸೂರಲ್ಲಿ ಉಚಿತ ಇಂಗ್ಲಿಷ್ ಶಾಲೆಯನ್ನು ಪ್ರಾರಂಭಿಸಿದರು."[೨೩] ೧೮೫೪ರಲ್ಲಿ ಬೋರ್ಡ್ ಆಫ್ ಕಂಟ್ರೋಲಿನ ಅಧ್ಯಕ್ಷನಾಗಿದ್ದ ಸರ್ ಚಾರ್ಲ್ಸ್‌ವುಡ್ ಇಂಗ್ಲೀಷ್ ಶಿಕ್ಷಣದ ಬಗ್ಗೆ ವರದಿಯನ್ನು ತಯಾರಿಸಿದ. ಈ ವರದಿಯನ್ನು "ಭಾರತೀಯ ಶಿಕ್ಷಣದ 'ಮ್ಯಾಗ್ನಕಾರ್ಟ್' ಅಥವಾ ಬಿಡುಗಡೆಯ ಶಾಸನ ಎಂದು ಕರೆಯುತ್ತಾರೆ. ಈ ವರದಿಯು ಭಾರತದಲ್ಲಿ ಆಧುನಿಕ ಮಾದರಿಯ ಶಿಕ್ಷಣ ಪದ್ಧತಿಗೆ ಅಡಿಪಾಯ ಹಾಕಿತು."[೨೪] ಈ ರೀತಿಯಾಗಿ ಭಾರತದಲ್ಲಿ ಇಂಗ್ಲೀಷ್ ಶಿಕ್ಷಣ ಪದ್ಧತಿ ಜಾರಿಗೆ ಬಂದಿತು.

೧೯೦೦ರ ನಂತರ ತುಮಕೂರು ಜಿಲ್ಲೆಯಲ್ಲಿ ಶಿಕ್ಷಣದ ಬೆಳವಣಿಗೆಯನ್ನು ಗುರುತಿಸಬಹುದು. ತಳಸಮುದಾಯಗಳ ಶಿಕ್ಷಣಕ್ಕಾಗಿ ಮೈಸೂರು ಸಂಸ್ಥಾನ ಯಾವ ಯೋಜನೆಗಳನ್ನು ಕೈಗೊಂಡಿತು ಎಂಬುದಕ್ಕೆ ದಾಖಲೆಗಳನ್ನು ಪರಿಶೀಲಿಸೋಣ.

ಮೈಸೂರಿನ ಸಾಮ್ರಾಜ್ಯ ಶಿಕ್ಷಣದ ಇನ್ಸ್‌ಪೆಕ್ಟರ್ ಆದಂತಹ ಎಚ್.ಜೆ.ಬಾಬಾ ಅವರು, ಮೈಸೂರು ಮಹಾರಾಜ ಸರ್ಕಾರದ ಕಾರ್ಯದರ್ಶಿಯಾದ ಕೆ.ಎಸ್.ಚಂದ್ರಶೇಖರ್ ಅಯ್ಯರ್ ಅವರಿಗೆ ಬರೆದ ಪತ್ರದಲ್ಲಿ ಈ ಕೆಳಕಂಡಂತೆ ಉಲ್ಲೇಖವಾಗಿದೆ. "ಗೌರಿ ಬಿದನೂರು ತಾಲ್ಲೂಕಿನ ಹೊಸೂರಿನ ಲಂಡನ್ ಮಿಷನ್ ಪಂಚಮ ಶಾಲೆಗೆ ಸಂಬಂಧಪಟ್ಟಿದೆ. ಈ ಶಾಲೆಯ ಅಭಿವೃದ್ಧಿಗೆ ಐದು ರೂಪಾಯಿಗಳನ್ನು ಕೊಡಿ ಎಂಬ ಬೇಡಿಕೆಯನ್ನಿಟ್ಟಿದ್ದಾರೆ. ಈ ಶಾಲೆಯನ್ನು ದೇವನಹಳ್ಳಿ ತಾಲೂಕು ವಡಿಗೇನಹಳ್ಳಿಗೆ ವರ್ಗಾವಣೆ ಮಾಡಿ ಪ್ರಸ್ತುತ ಶಾಲೆಯು ಪ್ರಮುಖವಾದದ್ದು ಹಾಗೂ ಉಪಯುಕ್ತವಾಗಿದೆ"[೨೫] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೧೯೧೧ರಲ್ಲಿ ಮೈಸೂರಿನ ಸಾಮಾನ್ಯ ಶಿಕ್ಷಣದ ತನಿಖಾಧಿಕಾರಿಯಾದಂತಹ ಎಚ್.ಜೆ.ಬಾಬ ಅವರು, ಮೈಸೂರು ಮಹಾರಾಜ ಸರ್ಕಾರದ ಕಾರ್ಯದರ್ಶಿಗಳಾದ ಸಿ.ಎನ್.ಬಾಲಸುಂದರಮ್ ಅಯ್ಯರ್ ಅವರಿಗೆ ಬರೆದ ಪತ್ರ, ಈ ಪತ್ರವು ಕೆಲಕಂಡ ಅಂಶಗಳನ್ನು ಒಳಗೊಂಡಿದೆ.

"ಸೊರಬದಲ್ಲಿರುವ ತಾಲ್ಲೂಕು ಪಂಚಮ ಶಾಲೆಯು ತೃಪ್ತಿದಾಯಕವಾಗಿ ಕೆಲಸ ಮಾಡುತ್ತಿಲ್ಲ. ಸ್ಥಳವೂ ಕೂಡ ಸೂಕ್ತವಾಗಿಲ್ಲ. ಆದ್ದರಿಂದಾಗಿ ಶಾಲೆಯನ್ನು ಪ್ರಸ್ತುತ ವರ್ಷದಿಂದ ಖಾಯಂ ಆಗಿ ಮುಚ್ಚಿ. ಪಂಚಮ ಶಾಲೆಗೆ ನೀಡುತ್ತಿದ್ದಂತಹ ಹತ್ತು ರೂಪಾಯಿ ಹಣವನ್ನು, ಯಾವುದೇ ಪ್ರೋತ್ಸಾಹವಿಲ್ಲದೆ ನಡೆಯುತ್ತಿರುವ ಸ್ಥಳೀಯ ಆಂಗ್ಲೋ-ವರ್ನಾಕ್ಯುಲರ್ ಶಾಲೆಗೆ ವರ್ಗಾವಣೆ ಮಾಡಿ"[೭೬] ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

೧೯೧೨–೧೩ನೇ ಸಾಲಿನಲ್ಲಿ, ತಾಂತ್ರಿಕ ಶಿಕ್ಷಣದ ಸೂಪರಿಂಟೆಂಡೆಂಟ್ ಹಾಗೂ ಕಾರ್ಯದರ್ಶಿಗಳಾದ ಎಂ.ಜಿ.ಶಾಮ ಅಯ್ಯಂಗಾರ್ ಅವರು ಮಹಾರಾಜರ ಪ್ರೋತ್ಸಾಹದ ಮೇರೆಗೆ, 'ಡಿಪ್ರೆಸ್ಡ್ ಕ್ಲಾಸಸ್ ಎಜುಕೇಷನ್ ಲೀಗ್' ಸಮ್ಮೇಳನವನ್ನು ಹಮ್ಮಿಕೊಂಡಿದ್ದರು. "ಪಂಚಮರ ಸಮ್ಮೇಳನವು ಮಾರ್ಚ್ ೧೯೧೩ರ ೨೧, ೨೨, ೨೩ರವರೆಗೆ ನಡೆಯಿತು. ಈ ಸಮ್ಮೇಳನವು ಮೇಲುಕೋಟೆಯಲ್ಲಿ ನಡೆಯಿತು. ಕಾಂತರಾಜ ಅರಸ್ ಅವರು ಲೀಗ್‌ನ ಅಧ್ಯಕ್ಷರಾಗಿದ್ದರು. ಸಮ್ಮೇಳನದಲ್ಲಿ ತಳಸಮುದಾಯಗಳ ಅಭಿವೃದ್ಧಿಗಾಗಿ ಹಾಗೂ ಅವರ ಶಿಕ್ಷಣಕ್ಕಾಗಿ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು."[೭೭] ಅವರಿಗೆ ವಿದ್ಯಾರ್ಥಿ ವೇತನ, ಉಚಿತ ವಸತಿ, ಬಟ್ಟೆಗಳ ವಿತರಣೆ ಹಲವಾರು ಸೌಲಭ್ಯಗಳನ್ನು ಒದಗಿಸಿಕೊಡುವ ಉದ್ದೇಶವನ್ನು ಹೊಂದಿತ್ತು.

೧೯೧೩ರಲ್ಲಿ ಮೈಸೂರಿನ ಸಾಮಾನ್ಯ ಶಿಕ್ಷಣದ ತನಿಖಾಧಿಕಾರಿಯಾದಂತಹ ಎಂ.ಶಾಮರಾವ್ ಅವರು, ಮೈಸೂರಿನ ಮಹಾರಾಜ ಸರ್ಕಾರದ ಕಾರ್ಯದರ್ಶಿಗಳಾದ ಸಿ.ಎಸ್.ಬಾಲಸುಂದರಮ್ ಅಯ್ಯರ್ ಅವರಿಗೆ ಪತ್ರವನ್ನು ಬರೆಯುತ್ತಾರೆ. ಪತ್ರದಲ್ಲಿ ಇರುವ ಅಂಶಗಳು ಈ ಕೆಳಕಂಡಂತಿವೆ. "ಆರ್ಥಿಕ ನೆರವಿಲ್ಲದೆ ಪಂಚಮರ ಬೋರ್ಡಿಂಗ್ ಶಾಲೆಯನ್ನು ನಿರ್ವಹಿಸುವುದು ಕಷ್ಟವಾಗುತ್ತಿದೆ. ಆದ್ದರಿಂದಾಗಿ ಶಾಲೆಯ ನಿರ್ವಹಣೆಗೆ ಮುಂಗಡ ಖಾಯಂ ಆಗಿ ೫೦ ರೂಪಾಯಿಗಳನ್ನು ಬಿಡುಗಡೆ ಮಾಡಿ" ಎಂಬ ಮನವಿಯನ್ನು ಒಳಗೊಂಡಿತ್ತು.

ಮೈಸೂರಿನ ಸಾಮಾನ್ಯ ಶಿಕ್ಷಣದ ತನಿಖಾಧಿಕಾರಿಯಾದಂತಹ ಎಂ.ಶಾಮರಾವ್ ಅವರು ೧೯೧೩ರಲ್ಲಿ ಮೈಸೂರು ಮಹಾರಾಜ ಸರ್ಕಾರದ ಸಿ.ಎಸ್.ಕಾರ್ಯದರ್ಶಿಗಳಾದ ಅವರಿಗೆ, ಬರೆದ ಪತ್ರದಲ್ಲಿನ ಅಂಶಗಳು ಈ ಕೆಳಕಂಡಂತಿವೆ. "ಮೈಸೂರಿನ ಪಂಚಮ ಬೋರ್ಡಿಂಗ್ ಶಾಲೆಯ ಒಂದು ತಿಂಗಳ ವೆಚ್ಚವು, ಅಲ್ಲಿನ ವಿದ್ಯಾರ್ಥಿಗಳ ವಸತಿ, ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಗಳ ವೇತನ, ತರಗತಿಗಳನ್ನು ಪ್ರಾರಂಭಿಸುವುದರ ಮೇಲೆ ಅವಲಂಬಿತವಾಗಿದೆ. ಆದ್ದರಿಂದಾಗಿ ೪೦೦೦ ರೂಪಾಯಿಗಳನ್ನು ಪಂಚಮರ ಬೋರ್ಡಿಂಗ್ ಶಾಲೆಗೆ ಅನುದಾನವಾಗಿ ನೀಡಬೇಕು"[೭೯] ಎಂದು ಮನವಿಯನ್ನು ಒಳಗೊಂಡಿತ್ತು.

೧೯೧೫ರಲ್ಲಿ ಮೈಸೂರು ಸಾಮಾನ್ಯ ಶಿಕ್ಷಣದ ತನಿಖಾಧಿಕಾರಿಯಾದ ಎಂ.ಶಾಮರಾವ್ ಅವರು ಮೈಸೂರು ಮಹಾರಾಜ ಸರ್ಕಾರದ ಕಾರ್ಯದರ್ಶಿಗಲಾದ ಪೀಟರ್ ಜಾರ್ಜ್ ಡಿಸೋಜಾ ಅವರಿಗೆ ಪತ್ರವನ್ನು ಬರೆಯುತ್ತಾರೆ. ಪತ್ರದಲ್ಲಿನ ಅಂಶಗಳು ಈ ಕೆಳಕಂಡಂತಿವೆ. “ಕೋಲಾರ ಜಿಲ್ಲೆಯ ಜಿಲ್ಲಾ ಸಮಿತಿಯ ಅಧ್ಯಕ್ಷರು ಹಾಗೂ ಡೆಪ್ಯುಟಿ ಕಮಿಷನರ್ ಅವರಿಗೆ, ಬಾಗೇಪಲ್ಲಿಯಲ್ಲಿ ತಾಲ್ಲೂಕು ಪಂಚಮ ಶಾಲೆಯನ್ನು ಸ್ಥಾಪಿಸುವ ಯೋಜನೆಯನ್ನು ಕೈಗೊಳ್ಳಲಾಗಿದೆ. ಕಟ್ಟಡ ನಿರ್ಮಾಣಕ್ಕೆ ವೆಚ್ಚವಾಗುವ ಹಣ ೩೭೫ ರೂಪಾಯಿಗಳಾಗಿರುತ್ತದೆ.”[೮೦] ಆದ್ದರಿಂದಾಗಿ ಕಟ್ಟಡ ನಿರ್ಮಾಣಕ್ಕಾಗಿ ಅನುದಾನವನ್ನು ನೀಡಬೇಕೆಂದು ಸರ್ಕಾರಕ್ಕೆ ಕೇಳಿಕೊಂಡಿದ್ದಾರೆ.

ಮೈಸೂರಿನ ರೆವಿನ್ಯೂ ಕಮಿಷನರ್ ಆದಂತಹ ಕೆ. ದೊರೆಸ್ವಾಮಿ ಅಯ್ಯರ್ ಅವರು ಮೈಸೂರು ಮಹಾರಾಜ ಸರ್ಕಾರದ ಕಾರ್ಯದರ್ಶಿಗಳಿಗೆ ೧೯೧೫-೧೬ನೆ ಸಾಲಿನಲ್ಲಿ ಪತ್ರವನ್ನು ಬರೆಯುತ್ತಾರೆ. “ಮಳವಳ್ಳಿ ತಾಲ್ಲೂಕು ಹಾಗಲವಾಡಿ ಎಂಬ ಹಳ್ಳಿಯಲ್ಲಿ ಹುಡುಗರ ಪಂಚಮ ಶಾಲೆಯ ಕಟ್ಟಡವನ್ನು ಕಟ್ಟಲು ಅನುಮತಿಯನ್ನು ನೀಡಬೇಕು”[೮೧] ಎಂದು ಸರ್ಕಾರದ ಕಾರ್ಯದರ್ಶಿಗಳಿಗೆ ಮನವಿ ಮಾಡಿಕೊಳ್ಳಲಾಗಿದೆ.

ಶಿಕ್ಷಣ ಸಮಿತಿಯ ಕಾರ್ಯದರ್ಶಿಗಳಾದ ವಿ.ಸುಬ್ರಹ್ಮಣ್ಯ ಅಯ್ಯರ್ ಅವರು ಶಿಕ್ಷಣ ಮತ್ತು ಕೃಷಿ ವಿಭಾಗದ ಕಾರ್ಯದರ್ಶಿಗಳಾದ ಪಿ.ಜಿ.ಡಿಸೋಜಾ ಅವರಿಗೆ ೧೫ ಫೆಬ್ರವರಿ ೧೯೧೮ರಲ್ಲಿ ಪತ್ರವನ್ನು ಬರೆಯುತ್ತಾರೆ “೨೮ ಜನವರಿ ೧೯೧೮ರಂದು ಶಿಕ್ಷಣ ಸಮಿತಿಯ ಸಭೆ ನಡೆಯಿತು. ಮೈಸೂರಿನ ಪ್ರತಿ ಇಂಗ್ಲೀಷ್ ಶಾಲೆಯಲ್ಲಿ ಅಧ್ಯಯನ ಮಾಡುತ್ತಿರುವ ಪಂಚಮ ವಿದ್ಯಾರ್ಥಿಗಳಿಗೆ, ೬ ರೂಪಾಯಿಗಳಿಂದ ೧೫ ರೂಪಾಯಿಗಳವರೆಗೆ ವಿಶೇಷ ಶಿಷ್ಯ ವೇತನಗಳನ್ನು ನೀಡಬೇಕು”[೮೨] ಎಂಬ ಮನವಿಯನ್ನು ಸಲ್ಲಿಸಿತು. ಶಿಷ್ಯ ವೇತನವನ್ನು ನೀಡುವುದರ ಮೂಲಕ ತಳಸಮುದಾಯಗಳ ಶಿಕ್ಷಣಕ್ಕೆ ಪ್ರೋತ್ಸಾಹ ನೀಡಿರುವುದನ್ನು ಗಮನಿಸಬಹುದು.

ಪತ್ರದಲ್ಲಿರುವಂತಹ ಮತ್ತೊಂದು ಪ್ರಮುಖ ಅಂಶವೆಂದರೆ, ತುಮಕೂರು ಜಿಲ್ಲೆಯ ಡಿಪ್ಯುಟಿ ಕಮಿಷನರ್ ಅವರ ಪ್ರೋತ್ಸಾಹದಿಂದಾಗಿ, ೩ ಜನವರಿ ೧೯೧೮ರಂದು ಇಬ್ಬರು ಪಂಚಮ ವಿದ್ಯಾರ್ಥಿಗಳು ಕನ್ನಡ ಲೋಯರ್ ಸೆಕೆಂಡರಿ ಪರೀಕ್ಷೆಯಲ್ಲಿ ಉತ್ತೀರ್ಣರಾಗಿದ್ದಾರೆ. ಜೊತೆಗೆ ಇವರು ಮೈಸೂರಿನ ಇಂಗ್ಲೀಷ್ ತರಗತಿಯಲ್ಲಿ ಅಧ್ಯಯನ ಮಾಡುತ್ತಿದ್ದಾರೆ”[೮೩] ಎಂದು ಉಲ್ಲೇಖವಿದೆ. ಶಿಕ್ಷಣ ಸಮಿತಿಯು ಸರ್ಕಾರದ ಯೋಜನೆಗಳ ಮೇಲೆ ಮಹತ್ವವಾದ ಪರಿಣಾಮವನ್ನು ಬೀರಿತು.

ಮೈಸೂರಿನ ಸಾಮಾನ್ಯ ಶಿಕ್ಷಣದ ತನಿಖಾಧಿಕಾರಿಯಾದಂತಹ ಸಿ.ಆರ್.ರೆಡ್ಡಿ ಅವರು, ಶಿಕ್ಷಣ ಮತ್ತು ಕೃಷಿ ವಿಭಾಗದ ಸರ್ಕಾರದ ಕಾರ್ಯದರ್ಶಿಗಳಾದ ಪಿ.ಜಿ.ಡಿಸೋಜಾ ಅವರಿಗೆ

೧೬ ಮೇಲ ೧೯೧೮ರಲ್ಲಿ ಪತ್ರವನ್ನು ಬರೆಯುತ್ತಾರೆ. ಪತ್ರದ ಅಂಶಗಳು, ವಿ.ಸುಬ್ರಹ್ಮಣ್ಯ ಅಯ್ಯರ್ ಅವರ ಮನವಿಯನ್ನು ಹೋಲುವಂತಿದೆ. ಆದರೆ ಇದರಲ್ಲಿನ ಪ್ರಮುಖವಾದ ಅಂಶವೆಂದರೆ, 'ನಿಮ್ನ ವರ್ಗಗಳು ಎಂಬ ಹೆಸರಿನಡಿಯಲ್ಲಿ ಹಲವಾರು ಸಮುದಾಯಗಳು ಬರುತ್ತವೆ. ಇದರಲ್ಲಿನ ಒಂದು ಭಾಗವದಂತಹ ಪಂಚಮರಿಗೆ ಪ್ರಮುಖವಾಗಿ ಶಿಷ್ಯ ವೇತನವನ್ನು ನೀಡಿ"[೮೪] ಎಂಬ ಮನವಿಯನ್ನು ಒಳಗೊಂಡಿತ್ತು. ಪಂಚಮರ ಅಭಿವೃದ್ಧಿ ಆಗಬೇಕು ಎಂಬುದು ಸಿ.ಆರ್.ರೆಡ್ಡಿ ಅವರ ನಿಲುವು ಆಗಿರುವುದನ್ನು ಗಮನಿಸಬಹುದು.

ಸಿ.ಆರ್.ರೆಡ್ಡಿ ಅವರು ೧೮ನೇ ಮೇ ೧೯೧೮ರಲ್ಲಿ ಸರ್ಕಾರದ ಕಾರ್ಯದರ್ಶಿಗಳಾದ ಪಿ.ಜಿ.ಡಿಸೋಜಾ ಅವರಿಗೆ ಪತ್ರವನ್ನು ಬರೆಯುತ್ತಾರೆ. ಪತ್ರದಲ್ಲಿನ ಪ್ರಮುಖ ಅಂಶಗಳು ಈ ಕೆಳಕಂಡಂತಿವೆ. "೧೯೧೭-೧೮ರಲ್ಲಿ ಸಾಕಷ್ಟು ಶಿಷ್ಯವೇತನ ನಿಮ್ನ ವರ್ಗಗಳ ಅಭಿವೃದ್ಧಿಗೆ ಬಳಕೆಯಾಗಿಲ್ಲ. ಶಾಲಾ ಕಟ್ಟಡಗಳ ಪುನರ್ ನಿರ್ಮಾಣ, ಹೊಸ ಶಾಲೆಗಳು ಹಾಗೂ ವಸತಿ ನಿಲಯಗಳ ನಿರ್ಮಾಣ, ಬಟ್ಟೆ, ಪುಸ್ತಕಗಳು, ಸ್ಲೇಟುಗಳು ತಳಸಮುದಾಯಗಳಿಗೆ ಅವಶ್ಯಕವಾಗಿವೆ. ಆದ್ದರಿಂದಾಗಿ ಬಳಕೆಯಾಗದೆ ಉಳಿದ ಹಣವನ್ನು ತಳಸಮುದಾಯಗಳ ಅಭಿವೃದ್ಧಿಗೆ ಬಳಕೆಯಾಗಬೇಕು"[೮೫] ಎಂದು ಮನವಿಯನ್ನು ಸಲ್ಲಿಸಿದ್ದರು.

ಈಗಾಗಲೇ ಚರ್ಚಿಸಿರುವಂತೆ ಪಂಚಮರ ಶಿಕ್ಷಣದ ಅಭಿವೃದ್ಧಿಗಾಗಿ ಮಿಲ್ಲರ್ ಕಮಿಟಿಯ ಪಾತ್ರ ಪ್ರಮುಖವಾದದ್ದು. ಬ್ರಾಹ್ಮಣೇತರ ಚಳವಳಿಯು ಕೂಡ ಪಂಚಮರ ಶಿಕ್ಷಣಕ್ಕೆ ಪ್ರೋತ್ಸಾಹವನ್ನು ನೀಡಿತು. ಈ ಸಂದರ್ಭದಲ್ಲಿ "ಪಂಚಮರಿಗಾಗಿ ಹಾಗೂ ನಿಮ್ನ ವರ್ಗಗಳ ಶಿಕ್ಷಣದ ಅಭಿವೃದ್ಧಿಗಾಗಿ ಸರ್ಕಾರ ೫೦,೦೦೦ ರೂಪಾಯಿಗಳನ್ನು ಬಿಡುಗಡೆ ಮಾಡಿತು. ಈ ಆರ್ಥಿಕ ನೆರವಿನ ಮೂಲಕ ವಿಶೇಷ ಶಿಷ್ಯವೇತನ, ಉಚಿತ ಶಾಲಾ ಕಟ್ಟಡಗಳ ನಿರ್ಮಾಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು. ಜೊತೆಗೆ ಕೇಂದ್ರ ಪರಿಚಯ ಶಾಲೆಯ ಸ್ಥಾಪನೆ, ವಿದ್ಯಾರ್ಥಿಗಳಿಗಾಗಿ ಉಚಿತ ವಸತಿನಿಲಯಗಳ ಸ್ಥಾಪನೆಯ ಉದ್ದೇಶವನ್ನು ಹೊಂದಿತ್ತು."[೮೬] ನಿಮ್ನ ವರ್ಗಗಳ ಶಿಕ್ಷಣಕ್ಕೆ ಸಂಬಂಧಪಟ್ಟ ಇನ್ನೊಂದು ಪತ್ರವನ್ನು ಗಮನಿಸಬಹುದು. ಮೈಸೂರು ವಿಶ್ವವಿದ್ಯಾನಿಲಯದ ಕುಲಸಚಿವರಾದ ವಿ.ಗೋಪಾಲಸ್ವಾಮಿ ಅಯ್ಯಂಗಾರ್ ಅವರು, ಸರ್ಕಾರದ ಸಾಮಾನ್ಯ ಕಾರ್ಯದರ್ಶಿಗಳಾದ ಹೆಚ್.ವಿ.ರಾಮಸ್ವಾಮಿ ಅವರಿಗೆ ಬರೆದ ಪತ್ರವಾಗಿದೆ.

"ವಿಶ್ವವಿದ್ಯಾನಿಲಯದ ನಿಮ್ನವರ್ಗ ವಿದ್ಯಾರ್ಥಿಗಳ ಬೋಧನಾ ಶುಲ್ಕ, ಪರೀಕ್ಷಾ ಶುಲ್ಕಗಳನ್ನು ಸರ್ಕಾರ ನೀಡಬೇಕು. ಜುಲೈ ೧೯೩೨ರವರೆಗೆ ಮೂರು ವರ್ಷಗಳ ಪರೀಕ್ಷಾ ಶುಲ್ಕಗಳನ್ನು ನೀಡಬೇಕು"[೮೭] ಎಂದು ಪತ್ರದಲ್ಲಿ ಮನವಿಯನ್ನು ಸಲ್ಲಿಸಲಾಗಿತ್ತು.

ಮೇಲ್ಕಂಡ ಪತ್ರಗಳನ್ನು ಗಮನಿಸಿದಾಗ, ಪ್ರಶ್ನೆಗಳು ಹುಟ್ಟುತ್ತವೆ. ಶತಮಾನಗಳಿಂದ ತಳಸಮುದಾಯಗಳನ್ನು ಅಕ್ಷರ ವಂಚಿತರನ್ನಾಗಿ ಮಾಡಿದವರನ್ನು ಶಿಕ್ಷಣ ನೀಡಲು ಮುಂದಾದ್ದು ಏಕೆ? ೧೯ನೇ ಶತಮಾನದ ಕೊನೆಯ ಭಾಗದಲ್ಲಿ ದಯಾನಂದ ಸರಸ್ವತಿ ಅವರು ಆರ್ಯ ಸಮಾಜದ ಮೂಲಕ ಶುದ್ಧಿ ಚಳುವಳಿಯನ್ನು ಆರಂಭಿಸಿದರು. ವಿದೇಶಿಯರ ಪ್ರಭಾವಕ್ಕೆ ಒಳಗಾಗಿ ಕ್ರೈಸ್ತ ಹಾಗೂ ಇಸ್ಲಾಂ ಧರ್ಮಕ್ಕೆ ಮತಾಂತರಗೊಂಡ ಅಸ್ಪೃಶ್ಯ ಜಾತಿಯ ದಲಿತರನ್ನು ಶುದ್ಧೀಕರಿಸಿ ಹಿಂದೂ ಧರ್ಮಕ್ಕೆ ಕರೆತರುವ ಕಾರ್ಯದಲ್ಲಿ ತೊಡಗಿದ್ದು, ಮತಾಂತರ ಹೊಂದಿದವರನ್ನು ಮತ್ತೆ ಹಿಂದೂ ಧರ್ಮಕ್ಕೆ ಸೇರಿಸಿಕೊಳ್ಳುವುದೇ ಶುದ್ಧಿ ಚಳವಳಿಯ ಮುಖ್ಯ ಉದ್ದೇಶವಾಗಿತ್ತು. ೨೦ನೇ ಶತಮಾನದಲ್ಲಿ ಮೈಸೂರು ಸಂಸ್ಥಾನದಲ್ಲಿ ಶತಮಾನಗಳಿಂದ ಅಧಿಕಾರದಿಂದ ತಳಸಮುದಾಯಗಳು ವಂಚಿತವಾಗಿದ್ದವು. ಕ್ರೈಸ್ತರ ಉಚಿತ ಸೇವೆಯಿಂದಾಗಿ ಹಾಗೂ ಮಾನವ ಪ್ರೀತಿಯಿಂದಾಗಿ ತಳಸಮುದಾಯಗಳು ಕ್ರೈಸ್ತ ಧರ್ಮದ ಪ್ರಭಾವಕ್ಕೆ ಒಳಗಾದವು. ಕ್ರೈಸ್ತ ಮತ ಸ್ವೀಕಾರ ಮಾಡುವ ಅಸ್ಪೃಶ್ಯರನ್ನು ತಡೆಯುವುದು ಇವರ ಉದ್ದೇಶವಾಗಿತ್ತು. ಒಟ್ಟಾರೆಯಾಗಿ ಹೇಳುವುದಾದರೆ, ಹಿಂದೂ ಧರ್ಮದ ರಕ್ಷಣೆ ಮಾಡುವುದು ಅವರ ಪ್ರಮುಖ ಉದ್ದೇಶವಾಗಿರುವುದನ್ನು ಗಮನಿಸಬಹುದು.

ಅಂಬೇಡ್ಕರ್ ಅವರು ತಳಸಮುದಾಯಗಳ ಶಿಕ್ಷಣಕ್ಕಾಗಿ ಸಾಕಷ್ಟು ಶ್ರಮಿಸಿದರು. ತಳಸಮುದಾಯಗಳು ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಅಭಿವೃದ್ಧಿಯಾಗಬೇಕೆಂಬುದು ಅವರ ಉದ್ದೇಶವಾಗಿತ್ತು. "ಕೇವಲ ದೇವಸ್ಥಾನದ ಪ್ರವೇಶ ಪಡೆಯುವ ಅಥವಾ ಸಹ ಪಂಕ್ತಿ ಭೋಜನ ಮಾಡುವುದಷ್ಟಕ್ಕೆ ಮಾತ್ರ ಸೀಮಿತಗೊಳಿಸದೆ ಇವರು ತಮ್ಮ ಗಮನವನ್ನು ಶೋಷಿತ ಜನರ ಆರ್ಥಿಕ, ಸಾಮಾಜಿಕ ಹಾಗೂ ಶೈಕ್ಷಣಿಕ ಏಳಿಗೆಯತ್ತಲೂ ನೀಡಬೇಕು. ಆದ್ದರಿಂದ ಅವರು ಸಾರ್ವಜನಿಕ ಪ್ರಕಟಣೆಗಳನ್ನು ನೀಡಿ ಸಾರ್ವಜನಿಕ ಕೆರೆ, ಬಾವಿಗಳಿಗೆ ಹಾಗೂ ಶಾಲೆಗಳಿಗೆ ಅಸ್ಪೃಶ್ಯರಿಗೂ ಪ್ರವೇಶದ ಅವಕಾಶ ಸಿಗುವಂತೆ ಮಾಡಬೇಕು"[೮೮] ಎಂಬುದಾಗಿತ್ತು.

"ಶಿಕ್ಷಣ, ಸಂಘಟನೆ ಮತ್ತು ಹೋರಾಟ ಎಂಬ ಮೂರು ಮಂತ್ರಗಳನ್ನು ಅಂಬೇಡ್ಕರ್ ನೀಡಿದರು. ಅವರ ಗುರುಗಳಾಗಿದ್ದ ಜ್ಯೋತಿಬಾ ಪುಲೆ ಅವರು ದಲಿತರ ಅವನತಿಗೆ ಶಿಕ್ಷಣದ ಅಭಾವವೇ ಕಾರಣ"[೮೯] ಎಂದು ಹೇಳಿದರು. ಉಡುಪಿಯಲ್ಲಿ ಪಂಚಮ ಶಿಕ್ಷಣಕ್ಕಾಗಿ ಹಲವಾರು ಕಾರ್ಯಕ್ರಮಗಳು ಜಾರಿಗೆ ಬಂದವು. ದಕ್ಷಿಣ ಕನ್ನಡ ಜಿಲ್ಲಾ ಹರಿಜನ ವೆಲ್‌ಫೇರ್ ಕಮಿಟಿ ಸಭೆಯು ೧೯೫೧ರಲ್ಲಿ ಜಿಲ್ಲಾ ಕಲೆಕ್ಟರ್‌ಗಳಾದ ಎ.ಆರ್.ರಾಜರತ್ನಂ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಸಭೆಯಲ್ಲಿ "ಪುತ್ತೂರು ಮತ್ತು ಚರ್ವತ್ತೂರು ಹರಿಜನ ವಿದ್ಯಾರ್ಥಿಭವನ ಸಮಿತಿಗಳಿಗೆ ಸದಸ್ಯರನ್ನೂ ನಾಮಕರಣ ಮಾಡಲಾಯಿತು. ಹೊಸದುರ್ಗ ಹರಿಜನ ವೆಲ್‌ಫೇರ್

ಶಾಲೆಯನ್ನು ಬೋರ್ಡ್ ಶಾಲೆಯೊಂದಿಗೆ ಸೇರಿಬೇಕೆಂಬುದಾಗಿ, ಹರಿಜನ ವಿದ್ಯಾರ್ಥಿಗಳಿಗೆ ದೊರೆಯುವ ಸೌಕರ್ಯಗಳು ಅಲ್ಲಿಯೂ ದೊರೆಯುವಂತೆ ಸಂಬಂಧಪಟ್ಟ ಅಧಿಕಾರಿಗಳ ಅವಗಾಹನೆಗೆ ತರಲಾಯಿತು. ಸಪ್ಟೆಂಬರ್ ತಾರೀಖು ೩೦ ನ್ನು ಹರಿಜನ ಧ್ವಜ ದಿನವೆಂದಾಚರಿಸ ಬೇಕೆನ್ನುವ, ಕಾಸರಗೋಡಿನಲ್ಲಿ ಮೂರು, ಉಡುಪಿಯಲ್ಲೊಂದು ಹೊಸ ಶಾಲೆಗಳನ್ನು ತೆರೆಯಬೇಕೆನ್ನುವ, ಐದು ಶಾಲೆಗಳಲ್ಲಿ ವಿದ್ಯಾರ್ಥಿ ಸಂಖ್ಯೆ ಏರಿದುದರಿಂದ ಹೆಚ್ಚು ಉಪಾಧ್ಯಾಯರನ್ನು ನೇಮಿಸಬೇಕೆನ್ನುವ ನಿರ್ಧಾರವಾಯಿತು."[೯೦]

ಉಡುಪಿಯಲ್ಲೂ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಪಂಚಮರ ಶಿಕ್ಷಣಕ್ಕೆ ಪ್ರೋತ್ಸಾಹವನ್ನೂ ನೀಡಲಾಯಿತು.

೧೯೫೬ರಲ್ಲಿ ಅಸ್ಪೃಶ್ಯತೆಯ ನಿವಾರಣೆಯ ಬಗ್ಗೆ ಹಲವಾರು ಕ್ರಮಗಳನ್ನು ಕೈಗೊಳ್ಳಲಾಯಿತು. ಅವುಗಳೆಂದರೆ, ಸಿಹಿ ನೀರಿನ ಬಾವಿಗಳನ್ನೂ, ಸಮ್ಮಿಶ್ರವಾಸದ ಮನೆಗಳನ್ನೂ, ಸಾರ್ವಜನಿಕ ಸಾಮುದಾಯಿಕ ಕೇಂದ್ರಗಳನ್ನೂ ಒದಗಿಸುವುದರ ಮೂಲಕ ಪರಿಶಿಷ್ಟ ವರ್ಗದ ಜನರ ಆರ್ಥಿಕ ಉದ್ಧಾರದ ಬಗ್ಗೆ ವಿಶೇಷ ಗಮನವನ್ನು ನೀಡುವುದು. ೧೯೫೬ರಲ್ಲಿ ಕೇಂದ್ರ ಸರಕಾರದ ಶಿಕ್ಷಣ ಶಾಲೆಯು "೧೯೬೦ರೊಳಗೆ ದೇಶದಲ್ಲಿನ ೬ರಿಂದ ೧೪ ವರ್ಷದ ಮಕ್ಕಳಿಗೆ ಖಡ್ಡಾಯ ಪ್ರಾಥಮಿಕ ಶಿಕ್ಷಣ ಕೊಡಿಸಲು ನಿರ್ಧರಿಸಿತು."[೯೧] ಹೀಗೆ ಖಡ್ಡಾಯ ಶಿಕ್ಷಣ ವ್ಯವಸ್ಥೆಯು ಜಾರಿಗೆ ಬಂದಿತು. ಖಡ್ಡಾಯ ಶಿಕ್ಷಣ ಯೋಜನೆಯನ್ನು ಜಾರಿಗೆ ತರಲು ಮುಖ್ಯ ಕಾರಣ ಬಹುಸಂಖ್ಯಾತ ಹಿಂದುಳಿದ ವರ್ಗದವರು ತಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸುತ್ತಿರಲಿಲ್ಲ. ಇದಕ್ಕೆ ಮುಖ್ಯ ಕಾರಣ, ಹಿಂದುಳಿದ ವರ್ಗದ ಬಹುಸಂಖ್ಯಾತರು ಹಳ್ಳಿಗಳಲ್ಲಿ ವಾಸಿಸುತ್ತಿದ್ದು, ಕೃಷಿ ಕಾರ್ಮಿಕರಾಗಿದ್ದರು. ಜೊತೆಗೆ ಜೀತದಾಳುಗಳಾಗಿರುತ್ತಿದ್ದರು. ಆರ್ಥಿಕ ಅವನತಿಯಿಂದಾಗಿ ಹೊಟ್ಟೆ-ಬಟ್ಟೆ ಪ್ರಶ್ನೆಯೇ ಸಮಸ್ಯೆಯಾಯಿತು. ಆರು ವರ್ಷಗಳಾಗುತ್ತಲೇ ಕೂಲಿಗಾರರಿಗೆ ಮಕ್ಕಳಾಡಿಸಲು, ಮನೆ ಕಾಯಲು, ದನಕರುಗಳನ್ನು ನೋಡಿಕೊಳ್ಳಲು ಅವಶ್ಯ ಬೀಳುತ್ತಿದ್ದರು. ಇನ್ನೊಂದು ಪ್ರಮುಖ ಕಾರಣವೆಂದರೆ ಹಿಂದೂ ಸಮಾಜದಲ್ಲಿನ ಜಾತಿ ವ್ಯವಸ್ಥೆಯಿಂದಾಗಿ ಅವರಿಗೆ ಸಮಾನತೆ ದೊರೆಯದಿರುವುದು.

ಈ ನಿಟ್ಟಿನಲ್ಲಿ ೧೯೫೮ರಲ್ಲಿ ಮೈಸೂರಿನ ವಿದ್ಯಾಮಂತ್ರಿಗಳಾದ ಅಣ್ಣಾರಾವ್ ಗಣಮುಖಿ ಅವರು ಪತ್ರಿಕಾ ಪ್ರಕಟಣೆಯಲ್ಲಿ "ಸರಕಾರವು ದ್ವಿತೀಯ ಯೋಜನೆಯ ಅವಧಿಯಲ್ಲಿ ೬ ರಿಂದ ೧೧ ವರ್ಷ ಒಳಗಿನ ಮಕ್ಕಳಿಗೆ ಉಚಿತ ಶಿಕ್ಷಣ ನೀಡುವ ಮತ್ತು ಸಾರ್ವತ್ರಿಕ ಶಿಕ್ಷಣ ಕ್ರಮವನ್ನು ಜಾರಿಗೆ ತರುವ ನಿರ್ಧಾರವನ್ನು ಮಾಡಿರುವುದು"[೯೨] ಎಂದು ತಿಳಿಸಿದರು. ರಾಜ್ಯ ಸರ್ಕಾರ ೧೪ ವರ್ಷದೊಳಗಿನ ಎಲ್ಲ ಮಕ್ಕಳಿಗೆ ಉಚಿತ ಮತ್ತು ಖಡ್ಡಾಯ ಶಿಕ್ಷಣವನ್ನು

ಕೊಡುವ, ಸೌಲಭ್ಯವನ್ನು ಒದಗಿಸಬೇಕೆಂಬ ಸಂವಿಧಾನದ ತತ್ವಕ್ಕೆ ಅನುಗುಣವಾಗಿ ನಿರ್ಧಾರವನ್ನು ಮಾಡಲಾಯಿತು.

ಹಿಂದುಳಿದ ವರ್ಗಗಳ ಆಯೋಗ ಮತ್ತು ಪರಿಶಿಷ್ಟ ಜಾತಿ ಹಾಗೂ ಸಮುದಾಯಗಳ ಸಾಮಾಜಿಕ ಸ್ಥಿತಿಗತಿ ಪರಿಶೀಲನಾ ಆಯೋಗಗಳನ್ನು ರಾಷ್ಟ್ರಪತಿಗಳು ನೇಮಿಸಿದ್ದರು. ಕರ್ನಾಟಕ ರಾಜ್ಯ ಸರ್ಕಾರ ನಾಗನಗೌಡ ಸಮಿತಿಯನ್ನು ರಚಿಸಿ, ಹಿಂದುಳಿದ ವರ್ಗ ವಿಭಜನೆಯಲ್ಲಿ ಸಲಹೆ ನೀಡುವಂತೆ ಕೇಳಿಕೊಂಡಿತು. "ಶತಮಾನಗಳಿಂದ ಜಾತೀಯ ಆಧಾರದ ಮೇಲೆಯೇ ಸಾಮಾನ್ಯವಾಗಿ ಸಾಮಾಜಿಕ ಸ್ಥಾನಮಾನಗಳನ್ನು ಕೊಡಲಾಗುತ್ತಿದ್ದುದನ್ನು ಅವು ನೆನೆದು, ಜಾತಿಯೇ ಹಿಂದುಳಿಯುವಿಕೆಯ ಮಾನದಂಡ"[೯೩] ಎಂದು ತಿಳಿದವು. ಆದ್ದರಿಂದಾಗಿ ಸಮಿತಿಯು ಮಾಡಿದ ವರ್ಗೀಕರಣ ಹಾಗೂ ಅದು ಸ್ವೀಕರಿಸಿದ ಹಿಂದುಳಿದ ಸಮಾಜಗಳ ಗಣನೆಗಳು, ವರ್ಗಗಳನ್ನು ಜಾತಿಗಳೊಂದಿಗೆ ಸಮಾನಗೊಳಿಸಿದವು. ಆದರೆ "ಸಂವಿಧಾನದ ೧೫(೧) ಮತ್ತು ೨೯(೨)ನೆ ಕಲಂಗಳಿಂದ ರಕ್ಷಿಸಲಾಗುವ ಮೂಲಭೂತ ಹಕ್ಕುಗಳು ೧೫(೪)ನೆ ಕಲಮಿನ ಮೇರೆಗೆ ಅನುಮತಿಸಲಾದ ವಿಶೇಷ ಅವಕಾಶದ ಕ್ರಮಬದ್ಧತೆಗೆ ತೊಂದರೆಯಾಗಲಾರದು"[೯೪] ಎಂದು ತಿಳಿಸಿದವು.

"೧೯೭ರಲ್ಲಿ ಉಡುಪಿಯಲ್ಲಿದ್ದ ಹರಿಜನ ಹುಡುಗಿಯರ ಬೋರ್ಡಿಂಗ್ ಇದನ್ನು ಮುಚ್ಚಲಾಗಿತ್ತು. ಈ ವಿಷಯ ಕುರಿತು ಸಂಬಂಧಪಟ್ಟವರೂ ಕ್ರಮ ಕೈಗೊಳ್ಳಬೇಕು"[೯೫] ಎಂದೂ ಮುನ್ಸಿಪಲ್ ಕೌನ್ಸಿಲ್ ಗೋಪಾಲಕೃಷ್ಣ ಅವರು ಪತ್ರಿಕೆಯಲ್ಲಿ ಹೇಳಿಕೆ ನೀಡಿದ್ದರು.

**ವಿದ್ಯಾರ್ಥಿಗಳು**

ನಾಲ್ವಡಿ ಕೃಷ್ಣರಾಜ ಒಡೆಯರ್ ಅವರಿಂದ ಸ್ಫೂರ್ತಿ ಪಡೆದ ಗೋಪಾಲಸ್ವಾಮಿ ಅಯ್ಯರ್ ಅವರು ಪಂಚಮರಿಗಾಗಿ ವಸತಿ ಶಾಲೆಗಳನ್ನು ಪ್ರಾರಂಭಿಸಿ, ಶಿಕ್ಷಣ ನೀಡಲು ಶ್ರಮಿಸಿದರು. ತಲಕಾಡು ರಂಗೇಗೌಡರು ಹಾಗೂ ವರದರಾಜ್ ಅಯ್ಯಂಗಾರ್ ಅವರಂತಹ ದಲಿತೇತರ ಗುರುಗಳ ಪ್ರೀತಿ ಹಾಗೂ ಸಹಕಾರದಿಂದಾಗಿ ತಳಸಮುದಾಯಗಳಲ್ಲಿ ಕೆಲವರು ಅಕ್ಷರಸ್ಥರಾಗಲು ಮುಂದಾದರು. ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ ಮೊದಲ ತಲೆಮಾರಿನ ದಲಿತರನ್ನು ಕುರಿತು ಚೆನ್ನಸ್ವಾಮಿ ಸೋಸಲೆ ಅವರು ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು ಕೃತಿಯಲ್ಲಿ ಚರ್ಚಿಸಿದ್ದಾರೆ. ೧೯೧೪ರಲ್ಲಿ ಮೈಸೂರಿನ ಸೆಂಟ್ರಲ್ ಪಂಚಮ ಬೋರ್ಡಿಂಗ್ ಶಾಲೆಯಲ್ಲಿ ಅಧ್ಯಯನ ಮಾಡಿದ ವಿದ್ಯಾರ್ಥಿಗಳ ವಿವರದ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ. ಈ ಪಟ್ಟಿಯಲ್ಲಿ ತುಮಕೂರು ಜಿಲ್ಲೆಯ ಪಂಚಮ ವಿದ್ಯಾರ್ಥಿಗಳ ಮಾಹಿತಿಯೂ ಇದೆ.

ಮೈಸೂರು ಸಂಸ್ಥಾನದಲ್ಲಿ ಶಿಕ್ಷಣ ಪಡೆದ, ತುಮಕೂರು ಜಿಲ್ಲೆಯ ಮೊದಲ ತಲೆಮಾರಿನ ದಲಿತ ಮಾಹಿತಿ ಈ ಕೆಳಕಂಡಂತಿದೆ.

**ಆರ್.ಚನ್ನಿಗರಾಮಯ್ಯ**

ಇವರು ತುಮಕೂರು ಜಿಲ್ಲೆಯ "ಕೊರಟಗೆರೆಯಲ್ಲಿ ಜೂನ್ ೪, ೧೯೧೧ ರಂದು ಜನಿಸಿದರು. ತಂದೆ ರಾಮಹನುಮಯ್ಯ ಅವರು."[೯೬] ಇವರು ಪ್ರಾಥಮಿಕ ವಿದ್ಯಾಭ್ಯಾಸವನ್ನು ಕೊರಟಗೆರೆಯಲ್ಲಿ ಮುಗಿಸಿದರು. "೧೯೨೯ರಲ್ಲಿ ಬೆಂಗಳೂರಿನ ಕೋಟೆ ಪ್ರೌಢಶಾಲೆಗೆ ಸೇರಿ, ನರಸಿಂಹರಾಜ ಹಾಸ್ಟೆಲ್ ವಿದ್ಯಾರ್ಥಿಯಾಗಿ ೧೯೩೧ರಲ್ಲಿ ಎಸ್.ಎಸ್.ಎಲ್.ಸಿ.ವರೆಗೆ ಓದಿದರು."[೯೭] ಇವರು ಕರ್ನಾಟಕ ಕಂಡ ಅಪರೂಪದ ರಾಜಕೀಯ ಚಿಂತಕರಾಗಿದ್ದಾರೆ.

**ಶಿಕ್ಷಣ ತಜ್ಞ ಹೆಚ್.ಎಂ.ಗಂಗಾಧರಯ್ಯ**

"ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಅಮೃತೂರು ಎಂಬ ಗ್ರಾಮದಲ್ಲಿ ೧೯೧೫ ರಂದು ಜನಿಸಿದರು. ಇವರ ತಂದೆ ಮರಿಯಪ್ಪ, ತಾಯಿ ಹುಚ್ಚಮ್ಮ. ಮರಿಯಪ್ಪ ಅವರು ತುಮಕೂರು ಜಿಲ್ಲೆಯ ಕುಣಿಗಲ್ ತಾಲ್ಲೂಕಿನ ಅಮೃತೂರಿನ ದಲಿತರಿಗೆಂದೇ ಮೀಸಲಾದ ಪ್ರಾಥಮಿಕ ಶಾಲೆಯಲ್ಲಿ ಉಪಾಧ್ಯಾಯರಾಗಿ ಕಾರ್ಯ ನಿರ್ವಹಿಸುತ್ತಿದ್ದರು."[೯೮] ಗಂಗಾಧರಯ್ಯ ಅವರ ಪ್ರಾಥಮಿಕ ವಿದ್ಯಾಭ್ಯಾಸ ಅಮೃತೂರಿನ ಶಾಲೆಯಲ್ಲಿ ನಡೆಯಿತು. ಇವರು ತಮ್ಮ ಮಾಧ್ಯಮಿಕ ವಿದ್ಯಾಭ್ಯಾಸವನ್ನು ತುಮಕೂರಿನ ಬೋರ್ಡಿಂಗ್ ಹೋಂನಲ್ಲಿ ಮುಂದುವರೆಸಿದರು.

**ಎಲ್. ಲಿಂಗಯ್ಯ**

ಎಲ್.ಲಿಂಗಯ್ಯ ಅವರು ತುಮಕೂರು ಜಿಲ್ಲೆಯ ಶಿರಾ ತಾಲ್ಲೂಕಿನ ದೊಡ್ಡ ಅಗ್ರಹಾರದಲ್ಲಿ ಜನಿಸಿದರು. ತಳಸಮುದಾಯದಲ್ಲಿ ಐ.ಎ.ಎಸ್. ಹುದ್ದೆಗೇರಿದ ಪ್ರಥಮರಲ್ಲಿ ಒಬ್ಬರಾಗಿದ್ದಾರೆ.

**ಚಿಕ್ಕ ಹನುಮಂತಯ್ಯ**

"ಚಿಕ್ಕ ಹನುಮಂತಯ್ಯ ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ ನವೆಂಬರ್ ೬ ೧೯೦೦ ರಂದು ಅಸ್ಪೃಶ್ಯ ಸಮುದಾಯದ ಸಿದ್ಧಹನುಮಯ್ಯ ಮತ್ತು ನಾಗಮ್ಮ ಎಂಬ ದಂಪತಿಗಳಿಗೆ ಮಗನಾಗಿ ಜನಿಸಿದರು."[೯೯] ೧೯೧೯ರಲ್ಲಿ ಜಿಲ್ಲಾ ಕೇಂದ್ರಗಳಲ್ಲಿ ತೆರೆದಿದ್ದ ಪಂಚಮ ಹಾಸ್ಟೆಲಿನಲ್ಲಿ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಇವರು "೧೯೨೨ರಲ್ಲಿ ತುಮಕೂರಿನ ಸರ್ಕಾರಿ ಪ್ರೌಢಶಾಲೆಗೆ ಸೇರುವುದರ ಮೂಲಕ ಏಕೈಕ ದಲಿತ ವಿದ್ಯಾರ್ಥಿ ಎನಿಸಿದ್ದರು."[೧೦೦]

## ದೊಡ್ಡ ಓಬಳಯ್ಯ

"ದೊಡ್ಡ ಓಬಳಯ್ಯ ಅವರು ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ ಬೂದಿಓಬಳಪ್ಪ ಮತ್ತು ಶ್ರೀಮತಿ ಸಂಜೀವಮ್ಮ ಎಂಬ ದಂಪತಿಗಳಿಗೆ ದಿನಾಂಕ ೨೮/೨/೧೯೦೮ರಲ್ಲಿ ಮಗನಾಗಿ ಜನಿಸಿದರು. ಇವರು ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವನ್ನು ತುಮಕೂರಿನ ಪಂಚಮ ಬೋರ್ಡಿಂಗ್ ಹೋಂ ಶಾಲೆಯಲ್ಲಿ ಮುಗಿಸಿ, ಪ್ರೌಢಶಿಕ್ಷಣದ ವಿದ್ಯಾಭ್ಯಾಸವನ್ನು ಬೆಂಗಳೂರು ಹಳೆಕೋಟೆ ಹೈಸ್ಕೂಲಿನಲ್ಲಿ ಪ್ರಾರಂಭಿಸಿದರು."[೧೦೧] ಇವರು ೧೯೮೨ರಲ್ಲಿ ಕೊರಟಗೆರೆಯಲ್ಲಿ ಬುದ್ಧನ ಹೆಸರಿನಲ್ಲಿ ಪ್ರಥಮ ದರ್ಜೆ ಕಾಲೇಜನ್ನು ಸ್ಥಾಪಿಸಿದರು.

## ಜಸ್ಟೀಸ್ ಕೊರಟಗೆರೆ ಭೀಮಯ್ಯ

"ಕೆ.ಭೀಮಯ್ಯ ಅವರು ತುಮಕೂರು ಜಿಲ್ಲೆಯ ಕೊರಟಗೆರೆಯಲ್ಲಿ ಪಂಚಮ ಶಾಲೆಯ ಮುಖ್ಯ ಶಿಕ್ಷಕರಾಗಿದ್ದ ಕೆ.ದೊಡ್ಡಯ್ಯ ಅವರ ಮಗನಾಗಿ ದಿನಾಂಕ ೧೧/೦೪/೧೯೨೧ರಲ್ಲಿ ಜನಿಸಿದರು."[೧೦೨] ಇವರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಹುಟ್ಟೂರಿನಲ್ಲಿ ಮುಗಿಸಿದರು. ದಲಿತ ಸಮುದಾಯದಿಂದ ಬಂದ ಪ್ರಥಮ ಮುಖ್ಯ ನ್ಯಾಯಾಧೀಶರಾಗಿದ್ದಾರೆ.

## ಸ್ವಾತಂತ್ರ್ಯೋತ್ತರ ಶೈಕ್ಷಣಿಕ ಅಭಿವೃದ್ಧಿ

೧೯೫೮ನೇ ವರ್ಷದಲ್ಲಿ ಸರ್ವೋದಯದ ನೇತಾರರಾದ ವಿನೋಬಾ ಭಾವೆ ಅವರು ತಮ್ಮ ಭೂದಾನ ಚಳವಳಿಯನ್ನು ತೀವ್ರಗೊಳಿಸುವ ಉದ್ದೇಶದಿಂದ ಸರ್ವೋದಯ ಕಾರ್ಯಕರ್ತರೊಂದಿಗೆ ಪಾದಯಾತ್ರೆಯ ಮೂಲಕ ದೇಶವನ್ನು ಸುತ್ತತೊಡಗಿದರು. ಪಾದಯಾತ್ರೆ ಮಾಡುವ ತುಮಕೂರು ಜಿಲ್ಲೆಯ ಗೊಲ್ಲಹಳ್ಳಿಯಲ್ಲಿನ ಗಂಗಾಧರಯ್ಯ ಅವರ ಮನೆಯಲ್ಲಿ ಒಂದು ರಾತ್ರಿ ತಂಗಿದ್ದರು. ಆ ಸಂದರ್ಭದಲ್ಲಿ ವಿನೋಬಾ ಭಾವೆ ಅವರು ಗಂಗಾಧರಯ್ಯ ಅವರೊಂದಿಗೆ ಮಾತನಾಡುತ್ತಾ "May you be a staunch social worker and may this gollahalli be a shantinikethan. let your honesty be a beacon for your efforts."[೧೦೩]

ವಿನೋಬಾ ಭಾವೆ ಅವರ ಮಾತಿನಂತೆ ಅವರು ಗೊಲ್ಲಹಳ್ಳಿಯನ್ನು ಶಾಂತಿ ನಿಕೇತನವಾಗಿ ಪರಿವರ್ತಿಸಲು ನಿರ್ಧರಿಸಿದರು. "೧೯೫೯ರ ಜೂನ್ ತಿಂಗಳಲ್ಲಿ ಗೊಲ್ಲಹಳ್ಳಿಯಲ್ಲಿ ಶ್ರೀ ಸಿದ್ಧಾರ್ಥ ಪ್ರೌಢಶಾಲೆ ಪ್ರಾರಂಭವಾಯಿತು."[೧೦೪] ಹೀಗೆ ಗೊಲ್ಲಹಳ್ಳಿಯಲ್ಲಿ ಪ್ರಾರಂಭವಾದ ಶಿಕ್ಷಣ ಚಳವಳಿ ತುಮಕೂರು ಜಿಲ್ಲೆಯಾದ್ಯಂತ ವ್ಯಾಪಿಸಿದ್ದಲ್ಲದೆ, ತನ್ನ ಕಾರ್ಯಕ್ಷೇತ್ರವನ್ನು ನೆರೆಹೊರೆಯ ಜಿಲ್ಲೆಗಳಿಗೂ ವಿಸ್ತರಿಸಿತು. ಬೆಂಗಳೂರು, ಮೈಸೂರು, ಮಂಡ್ಯ, ಹಾಸನ, ಕೋಲಾರ ಮೊದಲಾದ ಜಿಲ್ಲೆಗಳಲ್ಲಿ ಸಿದ್ಧಾರ್ಥ ಶಿಕ್ಷಣ ಸಂಸ್ಥೆ ತನ್ನ ಶಾಖೆಗಳನ್ನು ಸ್ಥಾಪಿಸಿತು.

ಒಟ್ಟಾರೆಯಾಗಿ ಹೇಳುವುದಾದರೆ ಸರ್ಕಾರ ತಳಸಮುದಾಯಗಳ ಶಿಕ್ಷಣ ಅಭಿವೃದ್ಧಿಗಾಗಿ ಶ್ರಮಿಸಿತು. ಪರಿಣಾಮವಾಗಿ ತುಮಕೂರು ಜಿಲ್ಲೆಯಲ್ಲಿ ತಳಸಮುದಾಯಗಳ ಅಕ್ಷರಸ್ಥ ಸಂಖ್ಯೆ ಹಂತ ಹಂತವಾಗಿ ಅಭಿವೃದ್ಧಿಯಾಗುತ್ತ ಬಂದಿತು. ೨೦೦೭-೦೮ನೇ ಸಾಲಿನಿಂದ ೨೦೧೧-೧೨ರವರೆಗೆ ಜಿಲ್ಲೆಯಲ್ಲಿರುವ ಪರಿಶಿಷ್ಟ ಜಾತಿ/ಪ.ಪಂಗಡದ ವಿದ್ಯಾರ್ಥಿ ನಿಲಯಗಳು ಹಾಗೂ ವಿದ್ಯಾರ್ಥಿಗಳ ಸಂಖ್ಯೆಯ ವಿವರಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

### ೬.೩. ರಾಜಕೀಯ ವ್ಯವಸ್ಥೆ

ಸೈಮನ್ ಸಮಿತಿಯ ಕಾರ್ಯವೈಖರಿಯು ಭಾರತೀಯ ರಾಜಕೀಯ ಇತಿಹಾಸದ ಪಥವನ್ನೇ ಬದಲಿಸಿತು. ಇದರೊಂದಿಗೆ ಇಡೀ ದೇಶಕ್ಕೆ ಡಾ.ಅಂಬೇಡ್ಕರ್ ಅವರ ಬುದ್ಧಿಶಕ್ತಿ ಮತ್ತು ಚೈತನ್ಯಗಳ ಪರಿಚಯವನ್ನು ಮಾಡಿಸಿತು. "೧೮ ಶೋಷಿತ ವರ್ಗದ ಸಂಘಗಳು ಈ ಸಮಿತಿಯ ಮುಂದೆ ತಮ್ಮ ಅಹವಾಲನ್ನು ಇರಿಸಿದ್ದವು. ಅದರಲ್ಲಿ ೧೬ ಸಂಘಗಳು ಶೋಷಿತ ವರ್ಗಗಳಿಗೆಂದೇ ಪ್ರತ್ಯೇಕ ಚುನಾವಣಾ ಕಣ ಇರಬೇಕೆಂದು ಕೇಳಿಕೊಂಡವು. ಬಹಿಷ್ಕೃತ ಹಿತಕಾರಣಿ ಸಭೆಯ ಪರವಾಗಿ ಸೈಮನ್ ಸಮಿತಿಗೆ ಡಾ.ಅಂಬೇಡ್ಕರ್ ಪ್ರಸ್ತಾವನೆ ಸಲ್ಲಿಸಿ ಜಂಟಿ ಮತಕ್ಷೇತ್ರಗಳಿದ್ದು ಶೋಷಿತ ವರ್ಗದ ಪ್ರತಿನಿಧಿಗಳಿಗೆಂದು ಸ್ಥಾನಗಳನ್ನು ಮೀಸಲಾತಿ ನೀಡಲಿ"[೧೦೫] ಎಂದು ಮನವಿ ಸಲ್ಲಿಸಿದ್ದರು.

ಸ್ವಾತಂತ್ರ್ಯಾನಂತರ ಭಾರತದಲ್ಲಿ ರಾಜಕೀಯವಾಗಿ ದಲಿತರ ಸ್ಥಿತಿ ಏನಾಗಲಿದೆ ಎಂಬ ಸ್ಪಷ್ಟ ಅರಿವು ಅಂಬೇಡ್ಕರ್ ಅವರಿಗಿತ್ತು. ಅದಕ್ಕಾಗಿಯೇ ಅವರು ದಲಿತ ಪ್ರತಿನಿಧಿಗಳನ್ನು ದಲಿತ ಮತದಾರರೇ ಆಯ್ಕೆ ಮಾಡುವಂತಹ ಪ್ರತ್ಯೇಕ ಮತದಾನದ ಹಕ್ಕನ್ನು ನೀಡುವಂತೆ ದುಂಡು ಮೇಜಿನ ಪರಿಷತ್‌ನಲ್ಲಿ ವಾದಿಸಿದ್ದರು. "ದಲಿತ ಮತದಾರರು ಉಳಿದೆಲ್ಲರ ಜತೆಯಲ್ಲಿ ಸೇರಿ ಸಾಮಾನ್ಯ ಅಭ್ಯರ್ಥಿಗೆ ಮತದಾನ ಮಾಡುವುದರೊಂದಿಗೆ, ಕೇವಲ ತಮ್ಮ ಮತದಿಂದಲೇ ದಲಿತ ಅಭ್ಯರ್ಥಿಯನ್ನು ಚುನಾಯಿಸುವ ಅಧಿಕಾರವೂ ಇರಬೇಕು. ಇಲ್ಲದೆ ಹೋದರೆ ದಲಿತ ಜನಪ್ರತಿನಿಧಿಗಳು ರಾಜಕೀಯ ಪಕ್ಷಗಳ ಗುಲಾಮರಾಗುತ್ತಾರೆ"[೧೦೬] ಎಂದು ಅವರು ಪ್ರತಿಪಾದಿಸಿದ್ದರು.

ದಿನಾಂಕ ೦೭-೦೫-೧೯೩೨ ರಂದು ನಾಗಪುರದ ಹತ್ತಿರವಿರುವ ಕಾಂಪ್‌ಟೀನಲ್ಲಿ ವ್ಯವಸ್ಥೆಗೊಳಿಸಲಾಗಿದ್ದ ನಿಮ್ನ ವರ್ಗಗಳ ಕಾಂಗ್ರೆಸ್‌ನಲ್ಲಿ ಭಾಗವಹಿಸಿದ್ದರು. ಸಮ್ಮೇಳನವನ್ನು ಉದ್ದೇಶಿಸಿ ಮಾತನಾಡುತ್ತಾ ಡಾ. ಅಂಬೇಡ್ಕರ್ ಅವರು ಹೇಳಿದ್ದೇನೆಂದರೆ "ಅಸ್ಪೃಶ್ಯರ ಕೈಗೆ ರಾಜಕೀಯ ಲಗಾಮು ಬರಲೇಬೇಕಾದುದು ಅತಿ ಅವಶ್ಯಕವಾಗಿದೆ. ಅದಕ್ಕೋಸ್ಕರ ನಾವೆಲ್ಲ

ಒಗ್ಗಟ್ಟಾಗಿದ್ದುಕೊಂಡು ರಾಜಕೀಯ ಸ್ಥಾನಮಾನ ಪಡೆದುಕೊಳ್ಳಬೇಕು. ಭಾರತದಲ್ಲಿ ಎಲ್ಲಿಯವರೆಗೆ ಅಸ್ಪೃಶ್ಯರು ರಾಜಕೀಯ ದಾಳಗಳನ್ನು ತಮ್ಮ ಹತೋಟಿಯಲ್ಲಿ ಇಟ್ಟುಕೊಳ್ಳುವುದಿಲ್ಲವೋ ಅಲ್ಲಿಯವರೆಗೆ ಅಸ್ಪೃಶ್ಯತೆಯನ್ನು ತೊಡೆದುಹಾಕಲಾಗುವುದಿಲ್ಲ"[೧೦೭] ಎಂದು ಹೇಳುತ್ತಾರೆ.

ದಿನಾಂಕ ೨೫-೫-೧೯೩೨ ರಂದು ಬೆಳಗಾವಿಯಲ್ಲಿ ಡಾ.ಬಿ.ಆರ್.ಅಂಬೇಡ್ಕರ್ ಅವರು ಸಭೆಯನ್ನು ಉದ್ದೇಶಿಸಿ ಹೀಗೆ ಹೇಳಿದರು. "ಸಾಮಾಜಿಕ ಸುಧಾರಣೆಗಿಂತ ಮುಂಚೆ ರಾಜಕೀಯ ಸುಧಾರಣೆ ಆಗಬೇಕು. ರಾಜಕೀಯ ಅಧಿಕಾರವಿಲ್ಲದೆ ನಿಮ್ಮ ವರ್ಗಗಳವರ ಸ್ಥಾನಮಾನ ಅಭಿವೃದ್ಧಿಯಾಗುವುದಿಲ್ಲ. ನಿಮ್ಮ ವರ್ಗಗಳವರ ಏಳಿಗೆಗೆ ಮಾತ್ರ ನಾವು ಪರಿಶ್ರಮ ಪಡುತ್ತಿರುವುದು ಸ್ವಾರ್ಥವೆಂದು ಪರಿಗಣಿಸಲ್ಪಡಬಹುದಾದರೂ, ಇದುವರೆಗೆ ಈ ದೇಶ ಅವರಿಗೆ ಮಾಡಿದ ದೊಡ್ಡ ಅನ್ಯಾಯವನ್ನು ಗಮನದಲ್ಲಿಟ್ಟುಕೊಂಡರೆ, ಅದನ್ನು ಸಮರ್ಥಿಸಿಕೊಳ್ಳಬಹುದು"[೧೦೮] ಎಂದರು. ಸಾಮಾಜಿಕ ಸುಧಾರಣೆ ಆಗಬೇಕಾದರೆ, ಅದಕ್ಕೂ ರಾಜಕೀಯ ಸುಧಾರಣೆ ಬರಲೇಬೇಕು ಎಂಬುದು ಅವರ ಅಭಿಪ್ರಾಯವಾಗಿತ್ತು.

ಕೊನೆಗೂ ಬ್ರಿಟಿಷ್ ಪ್ರಧಾನಿ ರಾಮ್ಸೆ ಮ್ಯಾಕ್ ಡೊನಾಲ್ಡ್ ಅಂಬೇಡ್ಕರ್ ಅಭಿಪ್ರಾಯವನ್ನು ಒಪ್ಪಿಕೊಂಡರೂ, ಗಾಂಧೀಜಿ ಅವರ ವಿರೋಧದಿಂದಾಗಿ ಅದು ಕಾರ್ಯರೂಪಕ್ಕೆ ಬರಲಿಲ್ಲ. ದಲಿತರಿಗೆ ಪ್ರತ್ಯೇಕ ಮತದಾನದ ಹಕ್ಕು ನೀಡುವುದನ್ನು ವಿರೋಧಿಸಿ ಗಾಂಧೀಜಿ ಪ್ರಾರಂಭಿಸಿದ್ದ ಅಮರಣಾಂತ ಉಪವಾಸಕ್ಕೆ ಮಣಿದ ಅಂಬೇಡ್ಕರ್ ಒಲ್ಲದ ಮನಸ್ಸಿನಿಂದಲೇ ತಮ್ಮ ಬೇಡಿಕೆಯನ್ನು ಕೈಬಿಟ್ಟು ಪೂನಾ ಒಪ್ಪಂದಕ್ಕೆ ಸಹಿ ಹಾಕಿದರು.

ಇದರ ಪರಿಣಾಮವಾಗಿ, ಸ್ವತಂತ್ರ ಭಾರತದಲ್ಲಿ ಸ್ವಂತ ಪಕ್ಷ ಕಟ್ಟಿ ಸ್ಪರ್ಧಿಸಿದ್ದ ಎರಡೂ ಚುನಾವಣೆಗಳಲ್ಲಿ ಅಂಬೇಡ್ಕರ್ ಸೋಲಬೇಕಾಯಿತು. ಲಂಡನ್ನಿನಲ್ಲಿ ಇರುವಾಗ ಡಾ.ಬಿ.ಆರ್. ಅಂಬೇಡ್ಕರ್ ಅವರು ಕನ್ಸರ್ವೇಟೀವ್ ಇಂಡಿಯನ್ ಕಮಿಟಿಯನ್ನು ಉದ್ದೇಶಿಸಿ ಸಂಸತ್ತಿನ ಕೆಳಮನೆಯಲ್ಲಿ ಭಾಷಣ ಮಾಡಿದರು. ಈ ಸಭೆಯಲ್ಲಿ ೧೯೪೬ರ ನವೆಂಬರ್ ೫ ರಂದು ಲೇಬರ್ ಮತ್ತು ಲಿಬರಲ್ ಪಕ್ಷದ ಸಂಸತ್ ಸದಸ್ಯರೂ ಭಾಗವಹಿಸಿದ್ದರು. ಸಭೆಯಲ್ಲಿ ಅಂಬೇಡ್ಕರ್ ಅವರು "ತಾವೂ ಹಾಗೂ ಮಹಾತ್ಮ ಗಾಂಧೀ ಅವರು ಸಹಿ ಮಾಡಿರುವ ಪೂನಾ ಒಪ್ಪಂದವನ್ನು ರದ್ದು ಮಾಡಬೇಕೆಂದೂ ಮತ್ತು ಮ್ಯಾಕ್ಡೊನಾಲ್ಡ್ ಅವರ ತೀರ್ಪಿನ ಪ್ರಕಾರ ಉದ್ದೇಶಿಸಿದ್ದ ಪ್ರತ್ಯೇಕ ಮತಕ್ಷೇತ್ರಗಳನ್ನು ಪುನಃ ಜಾರಿಗೆ ತರಬೇಕು"[೧೦೯] ಎಂದು ಅವರು ಒತ್ತಾಯ ಮಾಡಿದರು.

ಈ ರೀತಿಯಾಗಿ ಅಸ್ಪೃಶ್ಯರನ್ನು ರಾಜಕೀಯಕ್ಕೆ ತರುವಲ್ಲಿ ಅಂಬೇಡ್ಕರ್ ಅವರ ಪಾತ್ರ ಪ್ರಮುಖವಾದದ್ದು. ತುಮಕೂರು ಜಿಲ್ಲೆಯಲ್ಲಿ ತಳಸಮುದಾಯದಿಂದ ಬಂದಂತಹ ರಾಜಕಾರಣಿಗಳನ್ನು ಕುರಿತು ಚರ್ಚಿಸಲಾಗುವುದು. ಚನ್ನಿಗರಾಮಯ್ಯ ಅವರು ಮೊದಲಿಗೆ "೧೯೩೨ರಲ್ಲಿ ಕೊರಟಗೆರೆ ಪುರಸಭೆ ಮತ್ತು ತುಮಕೂರು ಜಿಲ್ಲಾ ಬೋರ್ಡಿನ ಸದಸ್ಯರಾದರು. ೧೯೩೬ರ ಸುಮಾರಿನಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಸದಸ್ಯರಾಗಿ, ೧೯೪೧ರಲ್ಲಿ ಲೆಜಿಸ್ಲೇಟಿವ್ ಕೌನ್ಸಿಲ್‌ನ ಸದಸ್ಯರಾಗಿ ನೇಮಕವಾದರು. ಕರ್ನಾಟಕ ರಾಜ್ಯದ ಮೊಟ್ಟ ಮೊದಲ ಮುಖ್ಯಮಂತ್ರಿ ಕೆ.ಸಿ.ರೆಡ್ಡಿ ಅವರ ಸಚಿವ ಸಂಪುಟದ ಏಳು ಮಂದಿ ಮಂತ್ರಿಗಳಲ್ಲಿ ಕ್ಯಾಬಿನೆಟ್ ದರ್ಜೆಯ ಪ್ರಥಮ ದಲಿತ ಮಂತ್ರಿಗಳಾಗಿ ಕಾರ್ಯನಿರ್ವಹಿಸಿದರು. ೧೯೫೬ರಲ್ಲಿ ಮುಖ್ಯ ಮಂತ್ರಿಗಳಾಗಿದ್ದ ಎಸ್.ನಿಜಲಿಂಗಪ್ಪ ಅವರ ಸಚಿವ ಸಂಪುಟದಲ್ಲಿ ಕ್ಯಾಬಿನೆಟ್ ದರ್ಜೆಯ ಸಚಿವರಾಗಿ ಮತ್ತೊಮ್ಮೆ ಸೇವೆ ಸಲ್ಲಿಸಿದರು."[೧೧೦] ಆರ್.ಚನ್ನಿಗರಾಮಯ್ಯ ಅವರು ಕರ್ನಾಟಕದ ಪ್ರಾಮಾಣಿಕತೆ, ಸರಳತೆಯ ರಾಜಕೀಯ ಚಿಂತಕರಲ್ಲಿ ಒಬ್ಬರಾಗಿದ್ದಾರೆ.

ಹೆಚ್.ಎಂ.ಗಂಗಾಧರಯ್ಯ ಅವರು ಸಮಾಜ ಸೇವಕರಾಗುವುದಲ್ಲದೆ ರಾಜಕೀಯ ಕ್ಷೇತ್ರಕ್ಕೂ ಕಾಲಿರಿಸಿದರು. ಅವರು ಜಿಲ್ಲಾ ಬೋರ್ಡು ಸದಸ್ಯರಾಗಿ ಗಂಗಾಧರಯ್ಯ ಅವರು ಉತ್ತಮ ಸೇವೆ ಸಲ್ಲಿಸಿದರು. "೧೯೪೫ರಲ್ಲಿ ರಾಜ್ಯಾದ್ಯಂತ ನ್ಯಾಯವಿಧಾಯಕ ಸಭೆಗೆ ಚುನಾವಣೆಗಳು ನಡೆದವು. ನ್ಯಾಯವಿಧಾಯಕ ಸಭೆಗೆ ಮೀಸಲು ಕ್ಷೇತ್ರದಿಂದ ಗಂಗಾಧರಯ್ಯ ಆಯ್ಕೆಯಾದರು. ೧೯೪೮ರಲ್ಲಿ ಗಂಗಾಧರಯ್ಯ ಅವರನ್ನು ಕೆಂಗಲ್ ಹನುಮಂತಯ್ಯ ಅವರು ವಿಧಾನ ಪರಿಷತ್ತಿಗೆ ನಾಮಕರಣ ಮಾಡಿದರು. ೧೯೫೧ರಲ್ಲಿ ಅವರು ಮೈಸೂರು ವಿಶ್ವವಿದ್ಯಾನಿಲಯದ ಸದಸ್ಯರಾಗಿಯೂ ನಾಮಕರಣಗೊಂಡರು."[೧೧೧]

ಹೀಗೆ ಸ್ವಾತಂತ್ರ್ಯ ಪೂರ್ವ ಮತ್ತು ಸ್ವಾತಂತ್ರೋತ್ತರ ಕಾಲಘಟ್ಟದಲ್ಲಿ ತುಮಕೂರು ಜಿಲ್ಲೆಯಲ್ಲಿ ತಳಸಮುದಾಯದ ಪ್ರಮುಖ ರಾಜಕಾರಣಿಗಳು ಕಾಣಿಸಿಕೊಳ್ಳುತ್ತಾರೆ.

ತುಮಕೂರು ಜಿಲ್ಲೆಯ್ಲಲಿ ೧೯೬೦ ರಿಂದ ೧೯೬೮ ರವರೆಗೆ ನಡೆದ ತಾಲ್ಲೂಕು ಅಭಿವೃದ್ಧಿ ಬೋರ್ಡ್‌ಗಳ ಚುನಾವಣೆಗಳು ನಡೆದವು. "೧೯೬೦ರ ಚುನಾವಣೆಯಲ್ಲಿ ೧೬೮ ಸದಸ್ಯರು ಚುನಾಯಿತರಾದರು. ಇವರಲ್ಲಿ ಪರಿಶಿಷ್ಟ ಜಾತಿ ತ್ತು ಪರಿಶಿಷ್ಟ ಪಂಗಡದ ೩೦ ಸದಸ್ಯರು ಚುನಾಯಿತರಾದರು."[೧೧೨] "೧೯೬೮-೬೯ರ ಸಾಲಿನಲ್ಲಿ ತುಮಕೂರು ಜಿಲ್ಲೆಯ ತಾಲ್ಲೂಕುಗಳಲ್ಲಿನ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಸಮುದಾಯದ ೧,೨೭೯ ಸದಸ್ಯರು ಚುನಾಯಿತರಾದರು."[೧೧೩] ಇದೇ ರೀತಿಯಾಗಿ

೨೦೧೨ರಲ್ಲಿ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಗ್ರಾಮ ಪಂಚಾಯತ್ ಚುನಾವಣೆಯಲ್ಲಿ ಚುನಾಯಿತರಾದಂತಹ ಸದಸ್ಯರ ಪಟ್ಟಿಯನ್ನು ಅನುಬಂಧದಲ್ಲಿ ನೀಡಲಾಗಿದೆ.

ತುಮಕೂರು ಜಿಲ್ಲೆಯ ಸ್ವಾತಂತ್ರೋತ್ತರ ಕಾಲಘಟ್ಟದಲ್ಲಿ ಜಿ.ಪರಮೇಶ್ವರ್, ಗಂಗಹನುಮಯ್ಯ ಮೊದಲಾದ ಪ್ರಮುಖ ರಾಜಕಾರಣಿಗಳಿದ್ದಾರೆ. ರಾಜಕೀಯ ನಾಯಕರ ಯಶಸ್ಸಿನಲ್ಲಿ ಜಾತಿ ಪ್ರಮುಖ ಪಾತ್ರ ವಹಿಸುತ್ತದೆ. ಪರಿಶಿಷ್ಟ ಜಾತಿಯವರಲ್ಲಿ ಯಾರೊಬ್ಬರೂ ಪ್ರಧಾನಮಂತ್ರಿ ಆಗಲಿಲ್ಲ. ಪ್ರಧಾನಿಯಾಗುವ ಅರ್ಹತೆಯನ್ನು ಸಾಧನೆಯ ಬಲದಿಂದಲೇ ಹೊಂದಿದ್ದ ಬಾಬು ಜಗಜೀವನರಾಂ ಅವರಿಗೆ ಪ್ರಧಾನಿ ಪಟ್ಟದ ಸಮೀಪವೂ ಸುಳಿಯಲೂ ಸಾಧ್ಯವಾಗಲಿಲ್ಲ. "ಆಂಧ್ರ ಪ್ರದೇಶ(ಸಂಜೀವಯ್ಯ), ರಾಜಸ್ಥಾನ(ಜಗನ್ನಾಥ ಪಹಾಡಿಯಾ), ಉತ್ತರ ಪ್ರದೇಶ (ಮಾಯಾವತಿ), ಬಿಹಾರ(ರಾಮಸುಂದರದಾಸ್) ಮತ್ತು ಮಹಾರಾಷ್ಟ್ರವನ್ನು(ಸುಶೀಲ್‌ಕುಮಾರ್ ಶಿಂಧೆ) ಹೊರತುಪಡಿಸಿದರೆ ಬೇರೆ ಯಾವ ರಾಜ್ಯಗಳಲ್ಲಿಯೂ ದಲಿತರು ಮುಖ್ಯಮಂತ್ರಿ ಯಾಗಲಿಲ್ಲ."[೧೧೪] ಇಲ್ಲಿ ಜಾತಿ ವ್ಯವಸ್ಥೆಯೇ ಪ್ರಮುಖ ಕಾರಣವಾಗುತ್ತದೆ.

ಒಟ್ಟಾರೆಯಾಗಿ ಹೇಳುವುದಾದರೆ ದಲಿತರು ರಾಜಕೀಯ ಹಕ್ಕುಗಳನ್ನು ಪಡೆಯುವಲ್ಲಿ ಡಾ.ಬಿ.ಆರ್.ಅಂಬೇಡ್ಕರ್ ಅವರ ಪಾತ್ರ ಪ್ರಮುಖವಾದದ್ದು. ಪರಿಣಾಮವಾಗಿ ರಾಜಕೀಯ ಹಕ್ಕುಗಳನ್ನು ಪಡೆದರು. "೧೯೬೯ರಲ್ಲಿ ಇಂದಿರಾಗಾಂಧಿ ಮತ್ತು ನಿಜಲಿಂಗಪ್ಪ ಅವರ ನಡುವೆ ಭಿನ್ನಾಭಿಪ್ರಾಯಗಳು ಬಂದವು. ನಿಜಲಿಂಗಪ್ಪ ಅವರು ಇಂದಿರಾ ಕಾಂಗ್ರೆಸ್ ತೊರೆದು ಕಾಂಗ್ರೆಸ್(ಓ) ಪಕ್ಷ ಸ್ಥಾಪಿಸಿದರು. ರಾಜ್ಯದ ಬಹುತೇಕ ಶಾಸಕರು ನಿಜಲಿಂಗಪ್ಪ ಅವರ ಜತೆ ಉಳಿದರು. ಆದರೆ ದೇವರಾಜ ಅರಸ್ ಇಂದಿರಾಗಾಂಧಿ ಕಡೆ ಹೋದರು."[೧೧೫] ಈ ಸಂದರ್ಭದಲ್ಲಿ ಅರಸು ಅವರು ಹೆಚ್ಚಿನ ಸಂಖ್ಯೆಯಲ್ಲಿ ಹಿಂದುಳಿದ ಜಾತಿಗಳಾದ ದಲಿತರು ಮತ್ತು ಬುಡಕಟ್ಟು ಅಭ್ಯರ್ಥಿಗಳಿಗೆ ಟಿಕೇಟು ನೀಡಿದರು. ಹಿಂದುಳಿದ ವರ್ಗಗಳ ಕಮಿಶನ್‌ಗೆ ಹಾವನೂರು ಅವರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಿದರು. ಆ ಮೂಲಕ ಹಿಂದುಳಿದ ಜಾತಿ ಜನರಿಗೆ ಶಿಕ್ಷಣ ಮತ್ತು ಉದ್ಯೋಗಗಳಲ್ಲಿ ಮೀಸಲಾತಿ ತಂದರು.

ಹೀಗೆ ತಳಸಮುದಾಯದ ವ್ಯಕ್ತಿಗಳು ಹೆಚ್ಚಿನ ಸಂಖ್ಯೆಯಲ್ಲಿ ರಾಜಕೀಯಕ್ಕೆ ಬಂದರು. ಆದರೆ ಗ್ರಾಮ ಅಥವಾ ರಾಜ್ಯ ಮಟ್ಟದಲ್ಲಿ ನಿರ್ಣಾಯಕವಾದ ಅಧಿಕಾರವನ್ನು ತಳಸಮುದಾಯಗಳು ಹೊಂದಿಲ್ಲ. ಗ್ರಾಮ ಪಂಚಾಯತಿ ಮಟ್ಟದಲ್ಲಿ ಬಹುತೇಕವಾಗಿ ರಾಜಕೀಯ ಅಧಿಕಾರ ಅನ್ನುವಂತದ್ದು, ಸವರ್ಣೀಯರ, ಮೇಲ್ವರ್ಗಗಳ ಹಿಡಿತದಲ್ಲಿದೆ.

## ೬.೪. ಪ್ರಜಾಸತ್ತಾತ್ಮಕ ಕಾನೂನು

ಭಾರತದ ಸಂವಿಧಾನ ರಚನಾ ಸಭೆಯಿಂದ ರಚನೆಗೊಂಡು, ಜನವರಿ ೨೬, ೧೯೫೦ ರಂದು ಜಾರಿಗೆ ಬಂದಿತು. ಈ ಸಂವಿಧಾನವು ಭಾರತದಲ್ಲಿರುವಂತಹ ಪ್ರಜೆಗಳಿಗೆ ಸಮಾನಾರಾಗಿ ಬದುಕಲು ಮೂಲಭೂತ ಹಕ್ಕುಗಳನ್ನು ಕೊಟ್ಟಿದೆ. ಅಧ್ಯಯನ ವಿಷಯಕ್ಕೆ ಪೂರಕವಾದ ಕೆಲವು ಹಕ್ಕುಗಳನ್ನು ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.

**ಸಮಾನತೆಯ ಹಕ್ಕುಗಳು**

"೧. ಧರ್ಮ, ಜಾತಿ, ಪಂಗಡ, ಲಿಂಗ ಭೇದ ಭಾವನೆಗಳನ್ನು ವಿರೋಧಿಸುವುದು.

೨. ಅಸ್ಪೃಶ್ಯತಾ ನಿವಾರಣೆ."[೧೧೬]

ಧರ್ಮ, ಜಾತಿ, ಪಂಗಡಗಳ ಆಧಾರದ ಮೇಲೆ ಭಾರತೀಯ ಸಮಾಜ ತಳಸಮುದಾಯಗಳನ್ನು ಹಂತ ಹಂತವಾಗಿ ಯಾವ ರೀತಿ ಶೋಷಣೆಗೆ ಗುರಿ ಮಾಡುತ್ತಿದೆ ಎಂಬುದನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ತಳಸಮುದಾಯಗಳು ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಭಾರತದಲ್ಲಿ ಅಸ್ಪೃಶ್ಯತೆ ನಿವಾರಣೆ ಆಗಿದೆಯಾ? ನೂರಕ್ಕೆ ಐದರಷ್ಟು ಆಗಿದೆ. ಜಾತಿ ಹೆಸರಿನಲ್ಲಿ ದೌರ್ಜನ್ಯಗಳು ನಡೆಯುತ್ತಿವೆ. ಕಂಬಾಲಪಲ್ಲಿ ಘಟನೆ, ಖೈರ್ಲಾಂಜಿಯಲ್ಲಿ ಆದಂತಹ ನರಮೇಧ, ತುಮಕೂರಿನ ಗುಬ್ಬಿಯಲ್ಲಿ ಅಭಿಷೇಕ್‌ನ ಮೇಲೆ ನಡೆದಂತಹ ಅಮಾನವೀಯ ದೌರ್ಜನ್ಯ, ಬಹಿಷ್ಕಾರ ಇವುಗಳೆಲ್ಲಾ ಜಾತಿಯ ಹೆಸರಿನಲ್ಲಿ ನಡೆಯುತ್ತಿರುವ ದೌರ್ಜನ್ಯಗಳಾಗಿವೆ. ಅಸ್ಪೃಶ್ಯತೆ ನಿವಾರಣೆ ಆಗಿದೆಯಾ? ಸಾರ್ವಜನಿಕ ಸ್ಥಳಗಳಲ್ಲಿ ಅಸ್ಪೃಶ್ಯತೆಯನ್ನು ಕಾನೂನು ಬದ್ಧವಾಗಿ ನಿಷೇಧಿಸಲಾಗಿದೆ. ಆದರೆ, ಸಾರ್ವಜನಿಕ ಸ್ಥಳಗಳನ್ನು ಹೊರತುಪಡಿಸಿ ಉಳಿದೆಲ್ಲ ಕಡೆ ಅಸ್ಪೃಶ್ಯತೆ ಆಳವಾಗಿ ಬೇರೂರಿದೆ. ತಳಸಮುದಾಯಗಳನ್ನು ರಕ್ಷಿಸಬೇಕಾದ ಪೊಲೀಸರೇ ಕೆಲವು ಸಂದರ್ಭಗಳಲ್ಲಿ ಅವರ ಮೇಲೆ ದೌರ್ಜನ್ಯವೆಸಗುತ್ತಾರೆ. ಉದಾಹರಣೆಗೆ ೧೯೯೬ರಲ್ಲಿ ಪಾವಗಡ ತಾಲ್ಲೂಕು ಸೂಲನಾಯಕನಹಳ್ಳಿಯ ಭೂಮಾಲೀಕನ ಹತ್ಯೆಯಾದ ನಂತರ ಇಡೀ ಊರಿನ ದಲಿತರ ಮನೆಗಳಿಗೆ ಬೆಂಕಿ ಹಚ್ಚಿ ನಾಶ ಮಾಡುತ್ತಾರೆ. ಈ ಘಟನೆ ಪೊಲೀಸ್‌ರ ಎದುರಿನಲ್ಲಿಯೇ ನಡೆಯುತ್ತದೆ.

ಶಾಲೆಗಳಲ್ಲಿ ಜಾತಿ ತಾರತಮ್ಯ ನಡೆಯುವುದನ್ನು ಸಂವಿಧಾನ ವಿರೋಧಿಸುತ್ತದೆ. ಸರ್ಕಾರ ಜಾರಿಗೆ ತಂದ ಬಿಸಿಯೂಟ ಯೋಜನೆಗಳಲ್ಲಿ ದಲಿತ ಮಹಿಳೆಯರು ಅಡುಗೆ ಮಾಡುವುದನ್ನು ಭಾರತೀಯ ಸಮಾಜ ಅಲಿಖಿತವಾಗಿ ವಿರೋಧಿಸಿದ್ದನ್ನ ಈಗಾಗಲೇ ಚರ್ಚಿಸಲಾಗಿದೆ.

ಭಾರತೀಯ ವಕೀಲರ ಸಂಘದ ೯ನೇ ರಾಷ್ಟ್ರೀಯ ಸಮಾವೇಶದಲ್ಲಿ ಉಪರಾಷ್ಟ್ರಪತಿ ಹಮೀದ್ ಅನ್ಸಾರಿ ಅವರು ಹೀಗೆ ಹೇಳಿದ್ದಾರೆ. "೨೦೧೨ರ ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ವರದಿ ಪ್ರಕಾರ ೮ ನಿಮಿಷಕ್ಕೊಂದರಂತೆ ದಲಿತರ ಮೇಲೆ ದೌರ್ಜನ್ಯ ನಡೆಯುತ್ತಿದೆ. ಗ್ರಾಮೀಣ ಪ್ರದೇಶದಲ್ಲಿ ಶೇ.೨೮ರಷ್ಟು ದಲಿತರನ್ನು ಪೊಲೀಸ್ ಠಾಣೆಗೆ ಬರದಂತೆ ತಡೆಯಲಾಗುತ್ತಿದೆ. ಶೇ.೩೭ರಷ್ಟು ದಲಿತರು ಬಡತನ ರೇಖೆಗಿಂತ ಕೆಳಗಿದ್ದಾರೆ. ಶೇ.೫೪ರಷ್ಟು ಜನರಿಗೆ ಪೌಷ್ಟಿಕ ಆಹಾರ ಸಿಗುತ್ತಿಲ್ಲ. ೬೦.೬೪ ಲಕ್ಷ ಮಕ್ಕಳು ಶಾಲೆಯಿಂದ ಹೊರಗಿದ್ದಾರೆ. ಶೇ.೪೫ರಷ್ಟು ಸಂಪತ್ತು ಶೇ.೧ ರಷ್ಟು ಜನರ ಹಿಡಿತದಲ್ಲಿದೆ. ದೇಶದ ಶೇ.೩೯ ರಷ್ಟು ಸರ್ಕಾರಿ ಶಾಲೆಗಳಲ್ಲಿ ದಲಿತರ ಮಕ್ಕಳನ್ನು ಪ್ರತ್ಯೇಕವಾಗಿ ಊಟಕ್ಕೆ ಕೂರಿಸಲಾಗುತ್ತಿದೆ."[೧೧೭] ಅಲಿಖಿತ ಸಂವಿಧಾನದ ಮುಂದೆ ಕಾನೂನು ಕೂಡ ಬಹುತೇಕವಾಗಿ ವಿಫಲವಾಗುತ್ತಿದೆ.

**ಸರ್ಕಾರದ ಯೋಜನೆಗಳು**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿನ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಬಡಜನರಿಗೆ "ರಾಜ್ಯ ಸರ್ಕಾರದ ವಸತಿ ಯೋಜನೆಗಳಾದ ಬಸವ ವಸತಿ ಯೋಜನೆ, ಗ್ರಾಮೀನ ಅಂಬೇಡ್ಕರ್ ಯೋಜನೆ ಮತ್ತು ಕೇಂದ್ರ ಪುರಸ್ಕೃತ ಇಂದಿರಾ ಆವಾಸ್ ಇತ್ಯಾದಿ ಯೋಜನೆಗಳಡಿ ಮನೆಗಳನ್ನು ನಿರ್ಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ."[೧೧೮] ಸ್ವಂತ ನಿವೇಶನ ಉಳ್ಳವರು ಅಥವಾ ಸರ್ಕಾರದ ನಿವೇಶನಗಳ ಯೋಜನೆಯಡಿ ನಿವೇಶನ ಪಡೆಯದವರು ಮಾತ್ರ ಈ ಯೋಜನೆಗಳಡಿಯಲ್ಲಿ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ.

ಉದ್ಯೋಗ ಖಾತ್ರಿ ಯೋಜನೆ ಹಾಗೂ ಮೇಲ್ಕಂಡ ವಸತಿ ಯೋಜನೆಗಳಡಿ ಬಿಡುಗಡೆಯಾದ ಹಣ ತಳಸಮುದಾಯಗಳನ್ನು ಪೂರ್ಣ ಪ್ರಮಾಣದಲ್ಲಿ ಅರ್ಹ ಫಲಾನುಭವಿಗಳನ್ನು ತಲುಪುತ್ತಿಲ್ಲ. ಬಹುತೇಕ ಗ್ರಾಮ ಪಂಚಾಯತಿಗಳಲ್ಲಿ ಯೋಜನೆಗಳ ಹಣ ಬಿಡುಗಡೆಗಾಗಿ ಅಧಿಕಾರಿಗಳು ಫಲಾನುಭವಿಗಳಿಂದ ಲಂಚ ಪಡೆಯುತ್ತಿರುವುದು ಕ್ಷೇತ್ರಕಾರ್ಯದಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ, ವಸಾಹತುಶಾಹಿ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿ ತಳಸಮುದಾಯಗಳು ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಹಾಗೂ ರಾಜಕೀಯ ಹಕ್ಕುಗಳನ್ನು ಪಡೆಯುವುದಕ್ಕಾಗಿ ಸಂಘಟಿತರಾಗಿ ಹೋರಾಟ ಮಾಡಿದರು. ಹಕ್ಕುಗಳನ್ನು ಪಡೆಯುವಲ್ಲಿ ಅಲ್ಪಮಟ್ಟಿಗೆ ಯಶಸ್ವಿಯಾಗಿದ್ದಾರೆ.

**ಕೊನೆ ಟಿಪ್ಪಣಿಗಳು**

೧. ಚಂದ್ರ ಪೂಜಾರಿ ಎಂ. **ಯಾಕೀಗ ಭೂಮಿ ಪ್ರಶ್ನೆ**, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫.

೨. ಚಿನ್ನಸ್ವಾಮಿ ಸೋಸಲೆ ಎನ್., **ದಲಿತ ಚರಿತ್ರೆ ರಚನೆಯಲ್ಲಿ ಕಾಡಲೇಬೇಕಾದ ಪ್ರಶ್ನೆಗಳು**, ೨೦೧೫, ಗೀತಾಂಜಲಿ ಪುಸ್ತಕ ಪ್ರಕಾಶನ, ಶಿವಮೊಗ್ಗ, ಪು.೨೧೦.

೩. ಚಂದ್ರ ಪೂಜಾರಿ ಎಂ., **ಯಾಕೀಗ ಭೂಮಿ ಪ್ರಶ್ನೆ**, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೭೧.

೪. ಬರ್ನಾರ್ಡ್ ಎಸ್. ಕೋಹನ್, ೧೯೮೭, **ಆನ್ ಆನ್‌ಥ್ರೋಪಾಲಾಜಿಸ್ಟ್ ಅಮಾಂಗ್ ದ ಹಿಸ್ಟೋರಿಯನ್ಸ್ ಅಂಡ್ ಅದರ್ ಎಸ್ಸೇಸ್**, ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂ ಡೆಲ್ಲಿ, ಇಂಡಿಯಾ.

೫. ಅದೇ, ಪು.೨೫೭.

೬. ಅದೇ, ಪು.೨೫೮.

೭. ಚಂದ್ರ ಪೂಜಾರಿ ಎಂ., **ಯಾಕೀಗ ಭೂಮಿ ಪ್ರಶ್ನೆ**, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೭೨.

೮. ಅದೇ, ಪು.೭೨.

೯. ಪುಟ್ಟಯ್ಯ ಬಿ.ಎಂ., ೨೦೦೮, **ದಲಿತರು ಮತ್ತು ಭೂಮಿಯ ಪ್ರಶ್ನೆ**(ಮಂಟಪ ಮಾಲೆ-೧೬೧) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೩.

೧೦. ಚಂದ್ರ ಪೂಜಾರಿ ಎಂ., **ಯಾಕೀಗ ಭೂಮಿ ಪ್ರಶ್ನೆ**, ೨೦೧೦, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೯.

೧೧. ಪುಟ್ಟಯ್ಯ ಬಿ.ಎಂ., ೨೦೦೮, **ದಲಿತರು ಮತ್ತು ಭೂಮಿಯ ಪ್ರಶ್ನೆ**(ಮಂಟಪ ಮಾಲೆ-೧೬೧) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೭.

೧೨. ನವಯುಗ ವಾರಪತ್ರಿಕೆ, ೧೯೫೬, **ಮೇಲು ನಡೆಯ ಭೂ ಸುಧಾರಣೆ**, ಸಂಪುಟ ೩೫.

೧೩. ಅದೇ ಪು.

೧೪. ನವಯುಗ ವಾರಪತ್ರಿಕೆ, ೧೯೫೫, **ನ್ಯಾಯವಾದ ಗೇಣಿ ನಿರ್ಣಯ ಕ್ರಮ ಪರಿಶೀಲಕ ಸಮಿತಿಯ ವರದಿಯ ಸಾರಾಂಶ**, ಪು.೩.

೧೫. ನವಯುಗ ವಾರಪತ್ರಿಕೆ, ೧೯೫೬, **ಸಾಗುವಳಿ ಒಕ್ಕಲುಗಳ ನ್ಯಾಯ ಗೇಣಿ ಕಾನೂನು**, ಪು.೯.

೧೬. ನವಯುಗ ವಾರಪತ್ರಿಕೆ, ೧೯೫೭, **ನ್ಯಾಯವಾದ ಮತ್ತು ಶಾಂತಿಯುತವಾದ ಕಾನೂನಿನ ರಚನೆಯಾಗಲಿ.**

೧೭. ನವಯುಗ ವಾರಪತ್ರಿಕೆ, ಜೂನ್ ೧೯೫೭, **ಭೂ ಕಾನೂನು.**

೧೮. ಪುಟ್ಟಯ್ಯ ಬಿ.ಎಂ., ೨೦೦೮, **ದಲಿತರು ಮತ್ತು ಭೂಮಿಯ ಪ್ರಶ್ನೆ**(ಮಂಟಪ ಮಾಲೆ-೧೬೧) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೩.

೧೯. ಅದೇ, ಪು.೪೪.

೨೦. ನವಯುಗ ವಾರಪತ್ರಿಕೆ, ೧೯೫೭, **ಧಾನ್ಯಗಳ ಧಾರಣೆ.**

೨೧. ನವಯುಗ ವಾರಪತ್ರಿಕೆ, ೧೯೫೭, **ಮೈಸೂರಲ್ಲಿ ಭೂಸುಧಾರಣೆ ಗೇಣಿದಾರರು ಕರ್ತವ್ಯಶೀಲರಾಗಲಿ!**

೨೨. ಅದೇ, ಪು.

೨೩. ನವಯುಗ ವಾರಪತ್ರಿಕೆ, ೧೯೫೭, **ಮೈಸೂರಿನಲ್ಲಿ ಭೂಸುಧಾರಣೆ.**

೨೪. ನವಯುಗ ವಾರಪತ್ರಿಕೆ, ೧೯೫೭, **ಜತ್ತಿ ಸಮಿತಿಯ ವರದಿ-ಉಳುವವನೇ ಹೊಲದೊಡೆಯನಾಗುವನು.**

೨೫. ನವಯುಗ ವಾರಪತ್ರಿಕೆ, ೧೯೫೭, **ಜತ್ತಿ ಸಮಿತಿಯ ವರದಿ.**

೨೬. ನವಯುಗ ವಾರಪತ್ರಿಕೆ, ನವೆಂಬರ್ ೧೯೫೭, **ಭೂಸುಧಾರಣಾ ವಿಧೇಯಕಕ್ಕೆ ವಿಳಂಬ.**

೨೭. ಗೋವಿಂದ ಭಟ್ ಜಿ.ಕೆ., ೧೯೫೭, **ಜತ್ತಿ ಸಮಿತಿಯ ವರದಿ, ಭೂಸುಧಾರಣೆಯ ಹೆಸರಲ್ಲಿ ಆಸ್ತಿ ದರೋಡೆಯೇ?**, ಬೆಂಗಳೂರು.

೨೮. ಶಿವರಾಮ ಕಾರಂತ, ೨೦೧೨, **ಚೋಮನ ದುಡಿ**, ಎಸ್.ಬಿ.ಎಸ್ ಪಬ್ಲಿಷನ್ಸ್ ಡಿಸ್ಟ್ರಿಬ್ಯೂಟರ್ಸ್, ಬೆಂಗಳೂರು, ಪು.೧೧.

೨೯. ಅದೇ, ಪು.೨೦.

೩೦. ಅದೇ, ಪು.೨೦.

೩೧. ಅದೇ, ಪು.೨೦.

೩೨. ಅದೇ, ಪು.೪೪.

೩೩. **ಜತ್ತಿ ಸಮಿತಿಯ ವರದಿಗೆ ವಿರೋಧವೇಕೆ? ಅವ್ಯಾವಹಾರಿಕ ಮತ್ತು ಅನಪೇಕ್ಷಿತ**, ನವೆಂಬರ್ ೧೯೫೭, ಪು.೯.

೩೪. ಅದೇ, ಪು.೯.

೩೫. **ಕೂತಿಗೋಡು ನಾಗಭೂಷಣ ಭಟ್ಟ, ನವೆಂಬರ್ ೧೯೫೭, ಭೂಸುಧಾರಣೆ-ಅದರ ಪೂರ್ವೋತ್ತರಗಳೇನು?** ನವಯುಗ ವಾರಪತ್ರಿಕೆ, ಪು.೧೧.

೩೬. **ಭೂಸುಧಾರಣಾ ವಿಧೇಯಕ,** ಫೆಬ್ರವರಿ ೧೯೫೮.

೩೭. **ವಿನೋಬಾ ಅವರೂ ಕರ ಹೇರುವರೆ? ಸರ್ವೋದಯ ಪಾತ್ರೆಯಿಡಲು ಕರೆ,** ಏಪ್ರಿಲ್ ೧೯೫೮, ನವಯುಗ ವಾರಪತ್ರಿಕೆ.

೩೮. ಪುಟ್ಟಯ್ಯ ಬಿ.ಎಂ., **ದಲಿತರು ಮತ್ತು ಭೂಮಿಯ ಪ್ರಶ್ನೆ,** ೨೦೦೮, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೪.

೩೯. ಅದೇ, ಪು.೪೪.

೪೦. **ಕರ್ನಾಟಕದಲ್ಲಿ ಭೂದಾನ ಚಳವಳಿ-ಜನತೆಯಿಂದ ಆಶಾದಾಯಕ ಪ್ರೋತ್ಸಾಹ,** ಆಗಸ್ಟ್ ೧೯೫೮, ನವಯುಗ ವಾರಪತ್ರಿಕೆ, ಪು.೧೦.

೪೧. ಅದೇ, ಪು.೧೦.

೪೨. **ನಗರಗಳೊಡನೆ ಗ್ರಾಮಗಳ ಉದ್ಧಾರವನ್ನೂ ಕೈಗೊಳ್ಳಬೇಕು. ಭಾರತದಲ್ಲಿಯ ಭೂರಹಿತ ಕೃಷಿಕರ ಸಮಸ್ಯೆಯೂ ಒಂದು ಮಹಾಮಾರಿಯಾಗಿದೆ,** ಅಕ್ಟೋಬರ್ ೧೯೫೮, ನವಯುಗ ವಾರಪತ್ರಿಕೆ, ಪು.೪.

೪೩. **ಕಾಂಗ್ರೇಸ್ ಅಧಿವೇಶನ ತೃತೀಯ ಯೋಜನೆಯ ರೂಪರೇಷೆಗಳ ರಚನೆ, ಭೂಸುಧಾರಣೆಯನ್ನು ಮಾಡುವಂತೆ ರಾಜ್ಯಸರ್ಕಾರಗಳ ಮೇಲೆ ಒತ್ತಾಯ,** ಅಕ್ಟೋಬರ್ ೧೯೫೮, ನವಯುಗ ವಾರಪತ್ರಿಕೆ, ಉಡುಪಿ.

೪೪. ಭೂಸುಧಾರಣೆ ಏಕಪಕ್ಷೀಯವಾದ ಭೂಸುಧಾರಣಾ ಶಾಸನ ಬೇಡ ಧನಿ, ಒಕ್ಕಲುಗಳಿಬ್ಬರ ಹಿತವನ್ನೂ ಸಾಧಿಸುವ ಶಾಸನವಿಂದು ಮುಂದೆ ಬರಲಿ, ಅಕ್ಟೋಬರ್ ೧೯೫೮, ನವಯುಗ ವಾರಪತ್ರಿಕೆ.

೪೫. ಅದೇ, ಪು.

೪೬. ಭೂಸುಧಾರಣೆ, ಎಲ್ಲ ಜನರ ಗಮನವನ್ನು ಬರಸೆಳೆದ ಸುಧಾರಣೆ, ಪಶ್ಚಿಮ ವಲಯದ ಬೊಂಬಾಯಿ ಮತ್ತು ಮೈಸೂರುಗಳಲ್ಲಿ ವಿವೇಚನೆ, ನವೆಂಬರ್ ೧೯೫೮, ನವಯುಗ ವಾರಪತ್ರಿಕೆ, ಉಡುಪಿ, ಪು.೩.

೪೭. ಭೂ ವಿಧೇಯಕ, ಡಿಸೆಂಬರ್ ೧೯೫೮, ನವಯುಗ ರಾಷ್ಟ್ರೀಯ ವಾರಪತ್ರಿಕೆ.

೪೮. ಅನಪೇಕ್ಷಿತ ಭೂಸುಧಾರಣೆ ನಮ್ಮ ಸರಕಾರ ದಾರಿ ತಪ್ಪಿದ ನೀತಿಯನ್ನು ಅನುಸರಿಸುತ್ತಿದೆ. ಮಾರ್ಚ್ ೧೯೫೯, ನವಯುಗ ವಾರಪತ್ರಿಕೆ, ಪು.೩.

೪೯. ಭಾರತದಲ್ಲಿ ಭೂಸುಧಾರಣಾ ಪ್ರಗತಿ, ಭೂರಹಿತ ರೈತನಿಗೆ ಭೂಮಿ, ಜುಲೈ ೧೯೬೦, ನವಯುಗ ವಾರಪತ್ರಿಕೆ.

೫೦. ಚಂದ್ರ ಪೂಜಾರಿ ಎಂ., ೨೦೧೦, ಯಾಕೀಗ ಭೂಮಿ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೭೬.

೫೧. ಶಾರದಾ ಗೋಪಾಲ, ಜೂನ್ ೨೦೧೬, ಮಹಾರಾಷ್ಟ್ರದ ಭೂಮಿ ಹಕ್ಕಿನ ಹೋರಾಟ ದೇಶದಲ್ಲಿ ದಲಿತರ ಇಂದಿನ ಸ್ಥಿತಿಗತಿಯ ಚಿತ್ರಣದಂತಿದೆ. ಇದು ಜಾತಿ ಕದನವೇ? ಭೂಮಿ ಹಕ್ಕಿನ ಹೋರಾಟವೇ?

೫೨. ಚಂದ್ರ ಪೂಜಾರಿ ಎಂ., ೨೦೧೦, ಯಾಕೀಗ ಭೂಮಿ ಪ್ರಶ್ನೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೦೮.

೫೩. ರಂಗಸ್ವಾಮಿ ಬೆಲ್ಲದಮಡು, ೧೯೯೬, ಜಿಲ್ಲಾ ಸಂಚಾಲಕರು, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಕರ ಪತ್ರ, ಪು.೨.

೫೪. ಸುಬ್ಬರಾಯಪ್ಪ, ವಕೀಲರು, ಪಾವಗಡ.

೫೫. ಅದೇ.

೫೬. ರಂಗಸ್ವಾಮಿ ಬೆಲ್ಲದಮಡು, ಜಿಲ್ಲಾ ಸಂಚಾಲಕರು, ೧೯೯೬, ಕರ್ನಾಟಕ ದಲಿತ ಸಂಘರ್ಷ ಸಮಿತಿ ಕರಪತ್ರ, ಪು.೨.

೫೭. ಅದೇ, ಪು.೩.

೫೮. ಅದೇ, ಪು.೪.

೫೯. ಸುಬ್ಬರಾಯಪ್ಪ, ವಕೀಲರು, ಪಾವಗಡ.

೬೦. ಅದೇ.

೬೧. ಅದೇ.

೬೨.

೬೩. ಆನಂದ್ ತೇಲ್ ತುಂಬ್ಡೆ(ಮೂಲ), ಶಿವಸುಂದರ್(ಸಂ.), ೨೦೦೯, **ಖೈರ್ಲಾಂಜಿ,** ಲಂಕೇಶ್ ಪ್ರಕಾಶನ, ಬೆಂಗಳೂರು, ಪು.೨೬ ರಿಂದ ೩೦.

೬೪. ರಾಜಸಿಂಹ, ವಕೀಲರು ಹಾಗೂ ಜಿಲ್ಲಾ ಪ್ರಧಾನ ಕಾರ್ಯದರ್ಶಿ, ಬಿ.ಎಸ್.ಪಿ., ತುಮಕೂರು.

೬೫. ಸಮತಾ ದೇಶಮಾನೆ, ಉಪನ್ಯಾಸಕರು, ಬೆಂಗಳೂರು.

೬೬. **ದಲಿತರ ಭೂಮಿ ಮೇಲೆ ಮಂತ್ರವಾದಿಯ ಕಣ್ಣು, 'ಉಡುಪಿ ಚಲೋ' ಹೋರಾಟಗಾರರಿಗೆ ಮೊದಲ ಸವಾಲು,** ಸೆಪ್ಟಂಬರ್ ೨೨, ೨೦೧೬, ಸಮಚಾರ.

೬೭. ಅದೇ.

೬೮. ಸಿದ್ದರಾಜು ಎಂ.ಕಪ್ಪಸೋಗೆ, ಡಿಸೆಂಬರ್ ೩೧, ೨೦೧೬, **ಅಕ್ಷರ ಮಾತೆಯ ಯಶೋಗಾಥೆ,** ಪ್ರಜಾವಾಣಿ

೬೯. ಅದೇ, ಪು.

೭೦. ಅದೇ, ಪು.

೭೧. ಲಿಂಗರಾಜು ಪಿ.(ಲೇ), ೨೦೦೨, **ತುಮಕೂರು ಜಿಲ್ಲೆಯಲ್ಲಿ ಕ್ರೈಸ್ತ ಮಿಷನರಿಗಳ ಚಟುವಟಿಕೆ,** ಕವಿತಾಕೃಷ್ಣ(ಸಂ), ಜಯಮಂಗಲಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪು. ೧೪೮

೭೨. ಅದೇ, ಪು. ೧೪೮

೭೩. ಅಭಿಶಂಕರ್ ಕೆ.(ಸಂ), ೨೧ ಮಾರ್ಚ್ ೧೯೬೯, **ಮೈಸೂರ್ ಗೆಜೆಟಿಯರ್,** ಬೆಂಗಳೂರು, ಪು. ೪೬೬

೭೪. **The Newsism,** April 29, 2017

೭೫. **Office of Inspector General of Education in Mysore,** 1907, Bangalore

೭೬. **Office of Inspector General of Education in Mysore,** 1911, Bangalore

೭೭. **General and Revenue Secretariat,** 1912-13

೭೮. **Office of Inspector General of Education in Mysore,** 29th October1913, Bangalore

೭೯. **Office of Inspector General of Education in Mysore,** 17th July 1913, Bangalore

೮೦. **Office of Inspector General of Education in Mysore,** 28th September 1913, Bangalore

೮೧. **Office of the Revenue Commissioner in Mysore,** 22nd February 1917, Bangalore

೮೨. **Mysore Economic Conference,** 15th February 1918, Bangalore

೮೩. Ibid, 15th February, 1918

೮೪. **Office of the Inspector General of Education in Mysore,** 16th May 1918, Bangalore

೮೫. **Office of the Inspector General of Education in Mysore,** 18th May 1918, Bangalore

೮೬. Dewans Office, 1918-1919, **Demi Official Correspondence with the palace in regard to the Representation of Non-Brahmins in the Public Service**

೮೭. **General and Revenue Secretariat,** 1932, Pp.2

೮೮. ದೇವಸ್ಥಾನ ಪ್ರವೇಶ ಪಡೆಯುವುದಕ್ಕಿಂತ ಹೆಚ್ಚಿನ ಆದ್ಯತೆಯನ್ನು ಆರ್ಥಿಕ, ಶೈಕ್ಷಣಿಕ ಹಾಗೂ ಸಾಮಾಜಿಕ ಏಳಿಗೆಗೆ ನೀಡಿ, **ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ಸಂಪುಟ ೧೭, ಪು.೨೦೯

೮೯. ಚಿನ್ನಸ್ವಾಮಿ ಸೋಸಲೆ ಎನ್., ೨೦೧೩, **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೯೩

೯೦. **ನವಯುಗ ವಾರಪತ್ರಿಕೆ,** ಆಗಸ್ಟ್ ೧೯೫೧, ಉಡುಪಿ, ಪು.೭

೯೧. **ಹಿಂದುಳಿದ ವರ್ಗಗಳಲ್ಲಿ ಶಿಕ್ಷಣಾಸಕ್ತಿ ಹೆಚ್ಚಬೇಕು–ಅಧ್ಯಾಪಕರ ಸ್ಥಿತಿಯನ್ನು ಉತ್ತಮವಾಗಿರಿಸಬೇಕು, ಪ್ರಾಥಮಿಕ ಶಿಕ್ಷಣ,** ಜುಲೈ ೧೯೫೭, ನವಯುಗ ವಾರಪತ್ರಿಕೆ.

೯೨. **ಮೈಸೂರು ರಾಜ್ಯದಲ್ಲಿ ಉಚಿತ ಅನಿವಾರ್ಯ ಶಿಕ್ಷಣ,** ಸೆಪ್ಟೆಂಬರ್ ೧೯೫೮, ನವಯುಗ ವಾರಪತ್ರಿಕೆ, ಪು.೫

೯೩. **ಪರಿಶಿಷ್ಟರು ಬೇರೆಯಲ್ಲವೆ?,** ಅಕ್ಟೋಬರ್ ೧೯೬೨, ನವಯುಗ ವಾರಪತ್ರಿಕೆ.

೯೪. ಅದೇ, ಪು.

೯೫. **ಉಡುಪಿ ಹರಿಜನ ಹುಡುಗಿಯರ ಬೋರ್ಡಿಂಗ್,** ೧೯೬೨, ನವಯುಗ ವಾರಪತ್ರಿಕೆ.

೯೬. ಬಸವರಾಜು ಕೆ.ಆರ್., ೨೦೧೩, **ಕರ್ನಾಟಕದ ಪ್ರಥಮ ದಲಿತಮಂತ್ರಿ ಆರ್.ಚನ್ನಿಗರಾಮಯ್ಯ ಜೀವನ ಮತ್ತು ಸಾಧನೆ,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೮

೯೭. ಚಿನ್ನಸ್ವಾಮಿ ಸೋಸಲೆ ಎನ್., **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು,** ೨೦೧೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೯೩.

೯೮. ವೀಣಾಕುಮಾರಿ ಡಿ.ಎಂ., ೨೦೧೦, **ಶಿಕ್ಷಣ ತಜ್ಞ ಡಾ.ಹೆಚ್.ಎಂ.ಗಂಗಾಧರಯ್ಯ ಅವರ ಜೀವನ ಮತ್ತು ಸಾಧನೆ,** ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೧೧.

೯೯. ಚಿನ್ನಸ್ವಾಮಿ ಸೋಸಲೆ ಎನ್., **ನಾಲ್ವಡಿ ಕೃಷ್ಣರಾಜ ಒಡೆಯರ್ ಕಾಲದ ಮೈಸೂರು ಸಂಸ್ಥಾನದಲ್ಲಿ ದಲಿತರು,** ೨೦೧೩, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೨೧೩.

೧೦೦. ಅದೇ, ಪು.೨೧೩

೧೦೧. ಅದೇ, ಪು.೨೨೪

೧೦೨. ಅದೇ, ಪು.೨೩೧

೧೦೩.ಲಕ್ಷ್ಮಣ ಸಿ.ಎಂ., **ತುಮಕೂರು ಜಿಲ್ಲೆಯ ಭೌಗೋಳಿಕ ಪರಿಸರ ಮತ್ತು ಅಭಿವೃದ್ಧಿ,** ೨೦೦೦, ದರ್ಶನ್ ಪ್ರಕಾಶನ, ತುಮಕೂರು, ಪು.೧೧೭.

೧೦೪.ವೀಣಾಕುಮಾರಿ ಡಿ.ಎಂ., ೨೦೧೦, **ಶಿಕ್ಷಣ ತಜ್ಞ ಡಾ.ಹೆಚ್.ಎಂ.ಗಂಗಾಧರಯ್ಯ ಅವರ ಜೀವನ ಮತ್ತು ಸಾಧನೆ,** ಎಂ.ಫಿಲ್.ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೬೦.

೧೦೫.**ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ೨೦೧೫, ಭಾರತದ ರಾಜಕೀಯ ಕ್ಷೇತ್ರಕ್ಕೆ ಅಸ್ಪೃಶ್ಯರನ್ನು ತರುವಲ್ಲಿ ಡಾ.ಅಂಬೇಡ್ಕರ್ ಅವರ ಪಾತ್ರ ಹಾಗೂ ಡಾ.ಅಂಬೇಡ್ಕರ್ ಅವರಿಂದ ಪ್ರಜಾಪ್ರಭುತ್ವಕ್ಕೆ ಅಡಿಪಾಯ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಸಂಪುಟ ೧೭, ಪು.೬೩.

೧೦೬.ದಿನೇಶ್ ಅಮಿನ್‌ಮಟ್ಟು, ಏಪ್ರಿಲ್ ೨೦೧೨, **ದಲಿತ ರಾಜಕಾರಣಕ್ಕೆ ಯಾರು ಮಾದರಿ?,** ಪ್ರಜಾವಾಣಿ.

೧೦೭.**ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ೨೦೧೫, ಅಸ್ಪೃಶ್ಯರಿಗೆ ರಾಜಕೀಯ ಅಧಿಕಾರ ಇರಲೇಬೇಕು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು ಸಂಪುಟ ೧೮, ಪು.೩೧೮.

೧೦೮.ಅದೇ, **ಸಾಮಾಜಿಕ ಸುಧಾರಣೆ ಆಗುವುದಕ್ಕಿಂತ ಮುಂಚೆ ರಾಜಕೀಯ ಸುಧಾರಣೆ ಬರಲೇಬೇಕು,** ಪು.೩೨೧.

೧೦೯.**ಡಾ.ಬಾಬಾಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು,** ೨೦೧೫, ಪ್ರತ್ಯೇಕ ಮತಕ್ಷೇತ್ರಗಳನ್ನು ಪುನಃ ಜಾರಿಗೆ ತನ್ನಿ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಸಂಪುಟ ೧೭, ಪು.೬೪೩.

೧೧೦.ಬಸವರಾಜು ಕೆ.ಆರ್., ೨೦೧೩, **ಕರ್ನಾಟಕದ ಪ್ರಥಮ ದಲಿತ ಮಂತ್ರಿ ಆರ್.ಚನ್ನಿಗರಾಮಯ್ಯ ಜೀವನ ಮತ್ತು ಸಾಧನೆ,** ದಲಿತ ಅಭಿವೃದ್ಧಿ ಸಂಸ್ಥೆ, ಹೊಸಪೇಟೆ, ಪು.೯.

೧೧೧.ವೀಣಾಕುಮಾರಿ ಡಿ.ಎಂ., ೨೦೧೦, **ಶಿಕ್ಷಣ ತಜ್ಞ ಡಾ.ಹೆಚ್.ಎಂ.ಗಂಗಾಧರಯ್ಯ ಅವರ ಜೀವನ ಮತ್ತು ಸಾಧನೆ,** ಎಂ.ಫಿಲ್ ನಿಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೫೫, ೫೭.

೧೧೨.Abhishankar K.(C.E), 1969, Tumkur District, **Mysore State Gagetteer,** p.no.458.

೧೧೩.ಅದೇ, ಪು.೪೬೦

೧೧೪.ದಿನೇಶ್ ಅಮಿನ್‌ಮಟ್ಟು, ಏಪ್ರಿಲ್ ೨೦೧೨, **ದಲಿತ ರಾಜಕಾರಣಕ್ಕೆ ಯಾರು ಮಾದರಿ?,** ಪ್ರಜಾವಾಣಿ ದಿನಪತ್ರಿಕೆ.

೧೧೫.ಚಂದ್ರ ಪೂಜಾರಿ ಎಂ., ೨೦೧೦, **ಯಾಕೀಗ ಭೂಮಿ ಪ್ರಶ್ನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯೪.

೧೧೬.**ಬಾಬಾಸಾಹೇಬ್ ಅಂಬೇಡ್ಕರ್ ಅವರ ಬರೆಹಗಳು ಮತ್ತು ಭಾಷಣಗಳು, ಸಂಪುಟ ೧೨,** ೨೦೧೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೧೧೦.

೧೧೭.ಪ್ರಜಾವಾಣಿ ದಿನಪತ್ರಿಕೆ, ಡಿಸೆಂಬರ್ ೨೦೧೬.

೧೧೮.**ತುಮಕೂರು ಗ್ರಾಮೀಣ ಭಾರತ,** ಮಾರ್ಚ್ ೨೦೧೨, ತುಮಕೂರು ಜಿಲ್ಲಾ ಪಂಚಾಯಿತಿಯಿಂದ ಪ್ರಕಟಿತ.

## ಅಧ್ಯಾಯ: ಏಳು

# ಚಳವಳಿಗಳು

### ೭.೧. ದಲಿತ ಚಳವಳಿ

ಮಹಾರಾಷ್ಟ್ರದಲ್ಲಿ ಹುಟ್ಟಿದ ಅಂಬೇಡ್ಕರ್ ಚಿಂತನೆಗಳು, ಕರ್ನಾಟಕದಲ್ಲಿ ಅದರ ಪ್ರಭಾವ ಬೀರಲು, ಅವರ ಪರಿನಿರ್ವಾಣದ ನಂತರ ಎರಡು ದಶಕಗಳೇ ಬೇಕಾಯಿತು. 'ದಲಿತ' ಎಂಬ ಪದವು ಮರಾಠಿ ಮೂಲದಿಂದ ಬಂದಿದ್ದು, 'ದಲ್' ಎಂದರೆ ತುಳಿತಕ್ಕೆ 'ಲಿತ' ಎಂದರೆ ಒಳಪಟ್ಟವರು ಎಂಬ ಅರ್ಥ ನೀಡುತ್ತದೆ. ಶತಶತಮಾನಗಳಿಂದ ಆರ್ಥಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಿಕವಾಗಿ ತುಳಿತಕ್ಕೆ ಒಳಪಟ್ಟವರು ಎಂಬರ್ಥ ನೀಡುತ್ತದೆ. ಎಂಭತ್ತರ ದಶಕದ ಆದಿಯಲ್ಲಿ ಜಾತಿ ಅಸ್ಮಿತೆಯ ಬದಲಾಗಿ "ದಲಿತ" ಎನ್ನುವ ಸಮಗ್ರ ಶೋಷಿತರ ಸಾಮಾಜಿಕ ಒಕ್ಕೂಟದ ವಿಶಾಲ ತಳಹದಿಯನ್ನು ನಿರ್ಮಿಸಿದ್ದು, ಚಳವಳಿಗೆ ಸಮಗ್ರತೆಯನ್ನೂ ತಂದುಕೊಟ್ಟಿತು. ಬುದ್ಧ–ಬಸವ–ಫುಲೆ–ಶಾಹು–ಅಂಬೇಡ್ಕರ್ ಇವರೆಲ್ಲರ ಒಟ್ಟು ಚಿಂತನೆಗಳನ್ನು ಒಳಗೊಂಡ ದಲಿತ ಚಳವಳಿಯು ದನಿಯಿಲ್ಲದವರ ದನಿಯಾಗಿ ಎಲ್ಲಾ ಶೋಷಿತ ಜಾತಿಗಳ ಸಾಂಸ್ಕೃತಿಕ ಮತ್ತು ಸಾಮಾಜಿಕ ಮುಖವಾಣಿಯಾಗಿ ರಾಜ್ಯದಲ್ಲಿ ರಾಜಕೀಯ ಒತ್ತಡದ ಗುಂಪಾಗಿ 'ದಲಿತ', 'ಬಂಡಾಯ' ಸಾಹಿತ್ಯ ಎಂಬ ಹೊಸ ಪರಂಪರೆಗೆ ನಾಂದಿಯಾಯಿತು. ಕಾಲು ಶತಮಾನದಷ್ಟು ದೀರ್ಘ ಕಾಲ ಕರ್ನಾಟಕದ ಶೋಷಿತ ಸಮುದಾಯದ ದನಿಯಾಗಿದ್ದ ಈ ಚಳವಳಿ ಈಗ ನಿಸ್ತೇಜ ಸ್ಥಿತಿಗೆ ಬಂದು ತಲುಪಿದೆ.

ಶತಮಾನಗಳಿಂದ ಆರ್ಥಿಕವಾಗಿ, ಸಾಮಾಜಿಕವಾಗಿ ಮತ್ತು ತಳಸಮುದಾಯಗಳ ಮೇಲೆ ನಡೆದ ನಿರಂತರ ಶೋಷಣೆಯೇ ಈ ಚಳವಳಿಯ ಹುಟ್ಟಿಗೆ ಪ್ರಮುಖ ಕಾರಣವಾಗಿದೆ. ಬಿ. ಬಸವಲಿಂಗಪ್ಪ ಅವರ ಬೂಸ ಪ್ರಕರಣವೂ ಒಂದು ಸಾಂದರ್ಭಿಕ ಕಾರಣವಷ್ಟೇ. ಅಲ್ಲದೆ ಹಿಂದೆ ಇದ್ದ ಕಮ್ಯುನಿಸ್ಟ್ ಮತ್ತು ಸಮಾಜವಾದಿ ಚಳವಳಿಗಳು ಕೇವಲ ಕಾರ್ಮಿಕರ ಹಾಗೂ

ವಿಚಾರ ಸಂಕಿರಣ, ಘೋಷಣೆಗಳಿಗೆ ಮಾತ್ರವೇ ಸೀಮಿತವಾಗಿದ್ದು, ಈ ಚಳವಳಿಯ ಹುಟ್ಟಿಗೆ ಮತ್ತೊಂದು ಪ್ರಮುಖ ಕಾರಣವಾಗಿದೆ. ಈ ಚಳವಳಿಯು ಕಾಲುಶತಮಾನದಷ್ಟು ದೀರ್ಘಕಾಲ ಮುನ್ನಡೆದದ್ದು ಪ್ರೊ.ಬಿ.ಕೃಷ್ಣಪ್ಪ ಅವರಂತಹ ಸಮರ್ಥ ನಾಯಕತ್ವ, ಪ್ರಾಮಾಣಿಕ ಜನಪರ ವೈಚಾರಿಕತೆಯ ನಾಯಕತ್ವ ಇದ್ದುದರಿಂದಲೇ ಸಾಧ್ಯವಾಯಿತು. ಆದ್ದರಿಂದಲೇ ಇವರು ಕರ್ನಾಟಕದ ಅಂಬೇಡ್ಕರ್ ಎಂಬ ರೂಪಕವಾಗಿದ್ದಾರೆ.

ವಿದ್ಯಾಕೇಂದ್ರವಾಗಿದ್ದ ತುಮಕೂರಿನಲ್ಲಿ ವಿಶೇಷವಾಗಿ ಬ್ರಾಹ್ಮಣ ಲಿಂಗಾಯತ ಕೋಮಿಗೆ ಸೇರಿದ ವಿದ್ಯಾರ್ಥಿಗಳು ಕೆಲವು ಹಿಂದುಳಿದ ಕೋಮಿಗೆ ಸೇರಿದ ವಿದ್ಯಾರ್ಥಿಗಳ ಜೊತೆಗೂಡಿ ಸಣ್ಣಪುಟ್ಟ ಕಾರಣಗಳಿಂದ ದಲಿತ ವಿದ್ಯಾರ್ಥಿ ನಿಲಯಗಳಿಗೆ ನುಗ್ಗಿ ದಾಳಿ ನಡೆಸುತ್ತಿದ್ದರು. ಇದರಿಂದ ಅನೇಕ ದಲಿತ ವಿದ್ಯಾರ್ಥಿಗಳು ತಮ್ಮ ವಿದ್ಯಾಭ್ಯಾಸವನ್ನು ಬಿಟ್ಟು ತಮ್ಮ ಊರುಗಳಿಗೆ ಹಿಂತಿರುಗಿದರು. ಈ ಸಂದರ್ಭದಲ್ಲಿ "ತಳಸಮುದಾಯದ ವಿದ್ಯಾರ್ಥಿಗಳು ತುಮಕೂರಿನ ಎನ್.ಆರ್.ಕಾಲೋನಿಯಲ್ಲಿ ಆಶ್ರಯ ಪಡೆದರು. ಅಂದಿನ ಹಟ್ಟಿಯ ಮುಖಂಡರಾದ ವೆಂಕಟ ನರಸಯ್ಯ, ಲಕ್ಷ್ಮೀನರಸಯ್ಯ, ಹಟ್ಟಿ ಸೀನಪ್ಪ, ಹಟ್ಟಿ ಸಿದ್ಧಪ್ಪ ಮುಂತಾದವರು ವಿದ್ಯಾರ್ಥಿಗಳ ರಕ್ಷಣೆಗೆ ಮುಂದಾದರು. ಇದೇ ವೇಳೆಯಲ್ಲಿ ಸರ್ಕಾರಿ ಕಲಾ ಕಾಲೇಜಿನಲ್ಲಿ ಹಿಂದಿ ಉಪನ್ಯಾಸಕರಾಗಿದ್ದು, ಬೌದ್ಧ ಬಿಕ್ಕುವಾಗಿರುವ ಎನ್.ಮರಿಸ್ವಾಮಿ ಎಂಬುವವರ ಸಲಹೆಯಂತೆ ತುಮಕೂರಿನಲ್ಲಿ ದಲಿತ ವಿದ್ಯಾರ್ಥಿ ಸಂಘವನ್ನು ಸ್ಥಾಪಿಸಲಾಯಿತು."[೧] ಇದರ ಮೂಲಕ ಎನ್.ಆರ್.ಕಾಲೋನಿ, ಜಯಪುರ, ಕುರಿಪಾಳ್ಯ, ಡೆಡ್‌ಹೌಸ್ ಕಾಲೋನಿ, ಮೆಳೆಕೋಟೆ ಮುಂತಾದ ದಲಿತ ಕೇರಿಗಳಲ್ಲಿ ಸ್ವಚ್ಛತಾ ಕಾರ್ಯವನ್ನು ಹಮ್ಮಿಕೊಳ್ಳುವುದರ ಮುಖಾಂತರ ಜನರಲ್ಲಿ ಜಾಗೃತಿ ಮೂಡಿಸಲಾಯಿತು.

೧೯೭೬ರಲ್ಲಿ ಕುಣಿಗಲ್ ತಾಲ್ಲೂಕು ದಾಸನಪುರದಲ್ಲಿ ಸಾಲದ ಮಾತಿಗಾಗಿ ಸವರ್ಣೀಯ ಹಿಂದೂಗಳು ತಳಸಮುದಾಯದ ಚಿಕ್ಕತಿಮ್ಮಯ್ಯನ ಕಗ್ಗೊಲೆ ಮಾಡಿದ್ದು, ಬಂದಕುಂಟೆ ನಾಗರಾಜ್ ಮತ್ತು ಹಟ್ಟಿ ಸಿದ್ಧಯ್ಯ ಜೊತೆಗೂಡಿ ಸ್ಥಳಕ್ಕೆ ಭೇಟಿ ನೀಡಿದ್ದರು. "ಊರಹೊರಗಿನ ಅರಳಿ ಮರದಡಿ ಕಣವೊಂದರಲ್ಲಿ ತಿಮ್ಮಯ್ಯನ ದೇಹವನ್ನು ಊರ ಗೌಡರು ತುಂಡು ತುಂಡಾಗಿ ಕತ್ತರಿಸಿದ್ದು ಅವನ ನೆತ್ತರನ್ನು ಕರಿನಾಯಿಯೊಂದು ನೆಕ್ಕುತ್ತಿತ್ತು. ಪಕ್ಕದಲ್ಲೇ ಗೌಡರ ತೆಂಗಿನ ತೋಟವೊಂದರಲ್ಲಿ ತಳಸಮುದಾಯದ ಸರ್ಕಲ್ ಇನ್ಸ್‌ಪೆಕ್ಟರ್ ಖಾದ್ರಪ್ಪ ಎಂಬುವವರು ಎಳನೀರು ಕುಡಿಯುತ್ತಿದ್ದ ವ್ಯಂಗ್ಯ ದೃಶ್ಯ ಅಣಕಿಸುತ್ತಿತ್ತು. ಕುಣಿಗಲ್ ಸ್ಟೇಷನ್‌ಗೆ ಬಂದು ವಿಚಾರಿಸಲಾಗಿ ಸದರಿ ಇನ್ಸ್‌ಪೆಕ್ಟರ್, ಕೊಲೆಗಾರರು ಬಲಾಢ್ಯರಾಗಿದ್ದಾರೆ. ವಿದ್ಯಾರ್ಥಿಗಳಾದ ನೀವು ಈ ವಿಷಯವನ್ನು ಇಲ್ಲಿಗೆ ಕೈಬಿಟ್ಟರೆ ಹಣ ಕೊಡಿಸುವುದಾಗಿ ಆಮಿಷ ಒಡ್ಡಿದರು. ಪೊಲೀಸ್ ಅಧಿಕಾರಿ ವಿರುದ್ಧ

ವಿದ್ಯಾರ್ಥಿಗಳು ೨೦೦ ಹಾಸ್ಟೆಲ್ ವಿದ್ಯಾರ್ಥಿಗಳನ್ನು ಸಂಘಟಿಸಿ ಜಿಲ್ಲಾಧಿಕಾರಿ ಮತ್ತು ಪೋಲೀಸ್ ಅಧಿಕಾರಿ ಕಛೇರಿಗಳ ಮುಂದೆ ಪಿಕೆಟಿಂಗ್ ನಡೆಸಿದ್ದರಿಂದ ಕೊಲೆ ಮಾಡಿದವರನ್ನು ಬಂಧಿಸಿ ತುಮಕೂರಿನ ಜೈಲಿನಲ್ಲಿ ಇಡಲಾಗಿತ್ತು. ಈ ಘಟನೆಯು ರಾಜ್ಯದ ಗಮನ ಸೆಳೆಯಿತು. ಬಸವಲಿಂಗಪ್ಪ ಅವರನ್ನೊಳಗೊಂಡ ಎಲ್ಲಾ ದಲಿತ ರಾಜಕಾರಣಿಗಳು ಕೊಲೆ ನಡೆದ ಸ್ಥಳಕ್ಕೆ ಭೇಟಿ ನೀಡಿ ಘಟನೆಯನ್ನು ಖಂಡಿಸಿದರು."[೨]

ಈ ಘಟನೆಯು ದಲಿತ ಮತ್ತು ಬಂಡಾಯ ಸಾಹಿತ್ಯ ನವಪರಂಪರೆಗೆ ಸಾಕ್ಷಿಯಾಯಿತು. "೧೯೭೮ರಲ್ಲಿ ಬೆಂಗಳೂರಿನಲ್ಲಿ ನಡೆದ ರಾಜ್ಯಮಟ್ಟದ ಪ್ರಥಮ ಬಂಡಾಯ ಸಾಹಿತ್ಯ ಸಮ್ಮೇಳನದ ಹಿಂದಿನ ದಿನ ಬಂದಕುಂಟೆ ನಾಗರಾಜ್ ಹಾಗೂ ಕೆ.ಬಿ.ಸಿದ್ಧಯ್ಯ ಅವರು ಜಂಟಿಯಾಗಿ ರಚಿಸಿದ "ಒಂದು ದಹನದ ಕಥೆ" ಹಾಡನ್ನು ಕೆ.ಬಿ.ಅವರು ಈ ಸಮ್ಮೇಳನದಲ್ಲಿ ಹಾಡಿದರು. ಈ ಘಟನೆ ನಡೆದ ಸಂದರ್ಭದಲ್ಲೇ ಶಿರಾ ತಾಲ್ಲೂಕಿನ ಭೂಮಾಲೀಕನ ಮನೆಯ ಜೀತದಾಳಿನ ಮಗ ಎಸ್.ಎಸ್.ಎಲ್.ಸಿ.ಯಲ್ಲಿ ಹೆಚ್ಚು ಅಂಕ ಪಡೆದು ತೇರ್ಗಡೆಯಾಗಿದ್ದು, ಭೂಮಾಲೀಕನ ಮಗ ಫೇಲಾಗಿದ್ದಕ್ಕೆ ಆಕ್ರೋಶಗೊಂಡ ಭೂಮಾಲೀಕ ಪ್ರತಿಭಾವಂತ ದಲಿತ ವಿದ್ಯಾರ್ಥಿಯನ್ನು ಕೊಲ್ಲಿಸಿದ್ದ. ಈ ಎರಡು ಘಟನೆಗಳನ್ನು ಪ್ರತಿಭಟಿಸಿ, ತುಮಕೂರಿನಲ್ಲಿ ಸುಮಾರು ಐದು ಸಾವಿರ ತಳಸಮುದಾಯದ ಜನರು ಬೃಹತ್ ಮೆರವಣಿಗೆ ನಡೆಸಿ, ಸಮಾವೇಶಗೊಂಡರು."[೩] ಇದು ರಾಜ್ಯದ ಇತಿಹಾಸದಲ್ಲೇ ಮೊಟ್ಟಮೊದಲ ಬಾರಿಗೆ ರಾಜಕೀಯೇತರವಾಗಿ ನಡೆದ ತಳಸಮುದಾಯಗಳ ಮೊದಲ ಸಮಾವೇಶವಾಗಿತ್ತು. ಇದರ ಅಧ್ಯಕ್ಷತೆಯನ್ನು ಪ್ರೊ.ಬಿ.ಕೃಷ್ಣಪ್ಪ ವಹಿಸಿದ್ದರು. ಸಭೆಯಲ್ಲಿ ದೇವನೂರು ಮಹಾದೇವ, ಚಂಪಾ, ಸಿದ್ಧಲಿಂಗಯ್ಯ, ಕೆ.ಬಿ.ಸಿದ್ಧಯ್ಯ ಮುಂತಾದವರು ಮಾತನಾಡಿದರು. ಮೆರವಣಿಗೆಯ ನಾಯಕತ್ವವನ್ನು ಬಂದಕುಂಟೆ ನಾಗರಾಜು, ವೆಂಕಟನರಸಯ್ಯ, ಲಕ್ಷ್ಮೀನರಸಯ್ಯ, ಲಕ್ಷ್ಮಮ್ಮ, ಜಯಪುರದ ಶಿಲ್ಪಿ ಚಿಕ್ಕಸಿದ್ಧಯ್ಯ ವಹಿಸಿದ್ದರು. ಇದಕ್ಕೆ ಮೊದಲೇ "೧೯೭೩-೭೪ರಲ್ಲಿ ಪ್ರೊ.ಬಿ.ಕೆ. ಅವರು ಭದ್ರಾವತಿಯಲ್ಲಿ 'ದಲಿತ ಸಂಘರ್ಷ ಸಮಿತಿ' ಎಂಬ ಸಂಘಟನೆ ನೋಂದಾಯಿಸಿದ್ದರು. ೧೯೭೬-೭೭ರಲ್ಲಿ ರಾಜ್ಯಾದ್ಯಂತ ಎಲ್ಲಾ ಬರಹಗಾರರು ಚಿಂತಕರು ಹೋರಾಟಗಾರರು ಒಳಗೊಂಡಂತೆ ಪ್ರೊ.ಬಿ.ಕೆ. ಅವರ ನೇತೃತ್ವದಲ್ಲಿ ಮೂರು ದಿನಗಳ ಕಾಲ ಭದ್ರಾವತಿಯಲ್ಲಿ ಚಿಂತನಾ ಸಭೆ ನಡೆಸಿ ಈ ಚಳವಳಿಯನ್ನು ಕರ್ನಾಟಕ ದಲಿತ ಸಂಘರ್ಷ ಸಮಿತಿ ಎಂದು ಪುನರ್ನಾಮಕರಣಗೊಳಿಸಿ, ರಾಜ್ಯಾದ್ಯಂತ ಸಂಘಟಿಸಲು ತೀರ್ಮಾನಿಸಲಾಯಿತು. ಈ ಚಿಂತನಾ ಸಭೆಯಲ್ಲಿ ದೇವಯ್ಯ ಹರವೆ, ಹೆಚ್. ಗೋವಿಂದಯ್ಯ, ಜಂಬಣ್ಣ ಅಮರಚಿಂತ, ಚನ್ನಣ್ಣ ವಾಲೀಕರ, ಡಾ.ಸಿದ್ಧಲಿಂಗಯ್ಯ, ಚಂದ್ರಪ್ರಸಾದ್ ತ್ಯಾಗಿ, ಎಂ.ಗಿ.ಗಂಗಯ್ಯ, ರಾಮದೇವರಾಕೆ ಹಾಗೂ ಬಂದಕುಂಟೆ ನಾಗರಾಜ ಇನ್ನೂ

ಮುಂತಾದವರು ಭಾಗವಹಿಸಿದ್ದರು."[೪] ನಂತರ ತುಮಕೂರಿನಲ್ಲಿ ಕಾರ್ಯಕರ್ತರಿಗೆ ಮೊಟ್ಟಮೊದಲ ರಾಜ್ಯಮಟ್ಟದ ತರಬೇತಿ ಶಿಬಿರವನ್ನು ನಡೆಸಲು ತೀರ್ಮಾನಿಸಲಾಯಿತು. ತುಮಕೂರಿನ ನಾಮದ ಚಿಲುಮೆಯಲ್ಲಿ ರಾಜ್ಯದ ವಿವಿಧ ಜಿಲ್ಲೆಗಳಿಂದ ಬಂದಿದ್ದ ೨೦೦ ಜನ ಕಾರ್ಯಕರ್ತರಿಗೆ ಮೂರು ದಿನಗಳ ತರಬೇತಿ ನೀಡಲಾಯಿತು. ಈ ಶಿಬಿರದಲ್ಲಿ ಡಾ.ಸಿದ್ಧಲಿಂಗಯ್ಯ, ದೇವನೂರು ಮಹಾದೇವ, ಡಾ.ಜಿ.ರಾಮಕೃಷ್ಣ, ರಾಮದೇವರಾಕೆ, ಇಂದೂಧರ ಹೊನ್ನಾಪುರ ಮುಂತಾದವರು ವಿವಿಧ ಸಿದ್ಧಾಂತಗಳನ್ನು ಕುರಿತು ತಾತ್ವಿಕ ಚಿಂತನೆ ನಡೆಸಿದರು. ಪಿಚ್ಚಳ್ಳಿ ಶ್ರೀನಿವಾಸ ಮತ್ತು ಜನಾರ್ಧನ(ಜನ್ನಿ) ಕ್ರಾಂತಿಗೀತೆಗಳ ಬಗ್ಗೆ ತರಬೇತಿ ನೀಡಿದರು. ಸಿ.ಜಿ.ಕೆ. ಅವರು ಬೆಲ್ಚಿ ಮತ್ತು ಇತರ ಬೀದಿ ನಾಟಕಗಳ ಬಗ್ಗೆ ತರಬೇತಿ ನೀಡಿದರು. ನಂತರದ ದಿನಗಳಲ್ಲಿ ಈ ರೀತಿ ಶಿಬಿರಗಳು ಇತರೆ ಜಿಲ್ಲೆಗಳಲ್ಲಿ ನಡೆದು ಶೋಷಿತರ ಬಿಡುಗಡೆಗೆ ಹೋರಾಡುವ ಪ್ರಾಮಾಣಿಕ ಯುವಕರ ಪಡೆಯೇ ಬೆಳೆಯಿತು.

"ತುಮಕೂರು ಜಿಲ್ಲೆಯಲ್ಲಿ ಅನೇಕ ಭೂ ಹೋರಾಟಗಳು ನಡೆದಿವೆ. ಅದರಲ್ಲಿ ಕೆಲವು ಪ್ರಮುಖ ಘಟನೆಗಳನ್ನು ಉಲ್ಲೇಖಿಸಲಾಗುತ್ತದೆ. ೧೯೭೮-೭೯ರಲ್ಲಿ ಅರಸೀಕೆರೆ ತಾಲೂಕು, ಬಿದರೆ ಕಾವಲ್‌ನಲ್ಲಿ ೧೫೦೦ ಎಕರೆ ಭೂಮಿ ಇತ್ತು. ಚಂದ್ರಪ್ರಸಾದ್ ತ್ಯಾಗಿ, ಕೃಷ್ಣಪ್ಪ ಬಿ. ಅವರ ನೇತೃತ್ವದಲ್ಲಿ ಭೂ ಹೋರಾಟವಾಯಿತು. ಇದರಿಂದಾಗಿ ಕೊರಚ, ಕೊರಮ, ಲಂಬಾಣಿ, ವಡ್ಡ, ಹೊಲೆಯ, ಮಾದಿಗ ಸಮುದಾಯದವರಿಗೆ ತಲಾ ಐದು ಎಕರೆ ಜಮೀನು ಹಂಚಿಕೆಯಾಯಿತು."[೫]

"೧೯೮೨-೮೩ರಲ್ಲಿ ತುರುವೇಕೆರೆ ತಾಲ್ಲೂಕು ಮಾರ್‌ಸಂದ್ರ ಬಗರ್‌ಹುಕುಂ ಜಮೀನನ್ನು ಒತ್ತುವರಿ ಮಾಡಿಕೊಂಡಿದ್ದ ರೈತರನ್ನು ಸರ್ಕಾರ ಹೊರ ಹಾಕಿತ್ತು. ಭೂರಹಿತರಿಗೆ ಜಮೀನು ನೀಡುವಂತೆ ಒತ್ತಾಯಿಸಿ ಸರ್ಕಾರದ ವಿರುದ್ಧ ಬೃಹತ್ ಹೋರಾಟ ಆರಂಭವಾಯಿತು. ಬುಡ್ಡನ ಪಾಳ್ಯ ಹಾಗೂ ಮಾರ್‌ಸಂದ್ರದಲ್ಲಿರುವ ೩೦೦ ಎಕರೆ ಜಮೀನನ್ನು ಅಳತೆ ಮಾಡಿ ತಳಸಮುದಾಯಗಳ ೧೦೦ ಜನರಿಗೆ ಹಂಚಿಕೆ ಮಾಡಿತು."[೬]

"೧೯೮೨-೯೩ರಲ್ಲಿ ತುರುವೇಕೆರೆ ತಾಲ್ಲೂಕಿನಲ್ಲಿ ಬಗರ್‌ಹುಕಂ ಜಮೀನನ್ನು ಭೂರಹಿತರಿಗೆ ಸರ್ಕಾರ ಮಂಜೂರು ಮಾಡುವಂತೆ ಕೋರಿ, ದಲಿತ ಸಂಘರ್ಷ ಸಮಿತಿ ತಾಲೂಕು ಕಚೇರಿ ಮುಂದೆ ೧೦ ದಿವಸ ಧರಣಿ ಮಾಡಿತು. ಅದೇ ರೀತಿಯಾಗಿ ತುಮಕೂರು ತಾಲ್ಲೂಕು ಹಾಗೂ ಹೊಸದುರ್ಗ ತಾಲ್ಲೂಕು ನಡುವೆ ಇದ್ದಂತಹ ಕೈನೋಡು ಗ್ರಾಮದಲ್ಲಿ ಸರ್ಕಾರ ಸರ್ವೇ ಮರಗಳನ್ನು ಅಥವಾ ನೀಲಗಿರಿ ಮರಗಳನ್ನು ನೆಡಿಸಿತು. ಇದರಿಂದಾಗಿ ರೈತರಿಗೆ

ಅನ್ಯಾಯವಾಯಿತು. ರೈತರಿಗೆ ಭೂಮಿ ಸಿಗುವಂತೆ ಒತ್ತಾಯಿಸಿ ದಲಿತ ಸಂಘರ್ಷ ಸಮಿತಿ ಹೋರಾಟ ಮಾಡಿ, ಯಶಸ್ವಿಯಾಯಿತು."[೭]

"೧೯೮೪-೮೫ರಲ್ಲಿ ಚಿಕ್ಕನಾಯಕನಹಳ್ಳಿ ತಾಲ್ಲೂಕು ರಾಮನಹಳ್ಳಿ, ಯರ್ರೆಕಟ್ಟೆ, ತಿಮ್ಮನಹಳ್ಳಿ, ಸಿಂಗದಳ್ಳಿಯಲ್ಲಿರುವ ಸರ್ಕಾರದ ಅಧೀನದಲ್ಲಿರುವ ಜಮೀನನ್ನು ಭೂರಹಿತರಿಗೆ ಹಂಚಿಕೆ ಮಾಡಬೇಕೆಂದು ಒತ್ತಾಯಿಸಿ, ದಲಿತ ಸಂಘರ್ಷ ಸಮಿತಿ ಹೋರಾಟ ಮಾಡಿತು."[೮]

ಅಕ್ಕಿ, ಗೋಧಿ, ಸೀಮೆ ಎಣ್ಣೆ, ಗೊಬ್ಬರಗಳ ಬೆಲೆ ಏರಿಕೆ ವಿರುದ್ಧ ಪ್ರತಿಭಟನೆ ನಡೆಯಿತು. "ಬಡವರ, ದೀನ ದಲಿತರ, ಶೋಷಿತರ ಬಗ್ಗೆ ಉನ್ನತ ಮೌಲ್ಯ ಹಾಗೂ ಸಿದ್ಧಾಂತಗಳನ್ನು ರೂಢಿಸಿಕೊಳ್ಳದ ಸರ್ಕಾರ ಬರೀ ಘೋಷಣೆಗಳ, ಭರವಸೆಗಳ ತನ್ನ ಸೈದ್ಧಾಂತಿಕ ನೆಲೆಗಟ್ಟಿನಿಂದ ದೂರ ಸರಿದಿದೆ. ಕೇಂದ್ರ ಸರ್ಕಾರ ಬಡವರ ಪಡಿತರ ದರಗಳನ್ನು ದುಪ್ಪಟ್ಟು ಏರಿಸಿರುವ ಕ್ರಮದ ಬಡಜನ ವಿರೋಧಿ ನೀತಿಯನ್ನು ದಲಿತ ಸಂಘರ್ಷ ಸಮಿತಿ ಪ್ರತಿಭಟಿಸುತ್ತದೆ."[೯] ದಲಿತ ಸಂಘರ್ಷ ಸಮಿತಿ ಬಡವರ ಅನ್ನಕ್ಕೆ ಕಲ್ಲು ಹಾಕಿದವರು ಎಂಬ ಶೀರ್ಷಿಕೆಯಡಿ ಪ್ರತಿಭಟಿಸಿತು. ಸರ್ಕಾರ ಕೂಡಲೇ ಅಕ್ಕಿ, ಗೋಧಿ, ಗೊಬ್ಬರ ಬೆಲೆಗಳನ್ನು ಇಳಿಸಬೇಕು ಎಂದು ಒತ್ತಾಯಿಸಿತು.

ದಿನಾಂಕ ೧೨, ೧೩-೪-೮೧ರಂದು ಎನ್.ಆರ್.ಕಾಲೋನಿಯಲ್ಲಿ ಪ್ರೆಂಚ್ ಪಾಲಿಷ್ ಕುಡಿದು ಒಟ್ಟು ಐದು ಜನ ಮರಣ ಹೊಂದಿದ್ದನ್ನು ವಿರೋಧಿಸಿ ದಲಿತ ಯುವಕ ಸಂಘ ಹೋರಾಟ ಮಾಡಿತು. ತಳಸಮುದಾಯಗಳೇ ಹೆಚ್ಚು ಇಂತಹ ದುಶ್ಚಟಗಳಿಗೆ ಬಲಿಯಾಗುತ್ತಿರುವುದನ್ನು ಗಮನಿಸಬಹುದಾಗಿದೆ. "೧. ಕುಡಿತದ ಚಟವಿರುವವರು ಸಂಪಾದಿಸುವ ಸ್ವಲ್ಪ ಹಣದಲ್ಲೇ ಕುಡಿಯಲೇಬೇಕೆಂದು ದುಷ್ಪರಿಣಾಮ ತಿಳಿಯದೆ, ಜೀವಕ್ಕೆ ಹಾನಿಕಾರಕ ವಿಷ ಮದ್ಯಕುಡಿದು ತಾವೇ ಸಾವು ತಂದುಕೊಳ್ಳುತ್ತಾರೆ. ೨. ಕುಡಿಯುವ ಚಟವಿರುವವರು ಎಂತಹದನ್ನು ಕೊಟ್ಟರೂ ಕುಡಿದೇ ಕುಡಿಯುತ್ತಾರೆಂದು ಮದ್ಯ ವ್ಯಾಪಾರಿಗಳು, ಕೆಳದರ್ಜೆ ಕಲಬೆರಕೆ ವಿಷ ಮದ್ಯವನ್ನು ಅತಿ ಕಡಿಮೆ ಬೆಲೆಗೆ ಮಾರಿ ಹಣ ಸಂಪಾದನೆಗಾಗಿ ಹೆಚ್ಚು ಜನರನ್ನು ಆಕರ್ಷಿಸಿ, ಫ್ರೆಂಚ್ ಪಾಲೀಷ್‌ನಂತಹ ವಿಷ ಮದ್ಯ ಕುಡಿಸಿ ಜನರ ಸಾವಿಗೆ ಕಾರಣರಾಗುತ್ತಾರೆ. ೩. ಹಣದಾಸೆಗೆ ವಿಷಮದ್ಯ ಮಾರಿ ತಳಸಮುದಾಯಗಳ ಸಮೂಹವನ್ನು ಕೊಲ್ಲುವವರನ್ನು ಪತ್ತೆ ಮಾಡಿ ಪೊಲೀಸರಿಗೆ ಹಿಡಿದು ಕೊಡಿ. ೪. ಕುಡಿಯುವವರ ಕ್ಷಣಿಕ ಸುಖದ ಆಸೆಗಾಗಿ ಮತ್ತು ಬರಿಸುವಂತಹ ವಸ್ತುಗಳ ಜೊತೆಗೆ ಘಾಟು ವಾಸನೆಗಾಗಿ ಬ್ಯಾಟರಿ ಷೆಲ್ಲುಗಳು, ಪಕ್ಷಿಗಳ ಹಿಕ್ಕೆಗಳು, ವಿವಿಧ ಮರಗಳ ಚೆಕ್ಕೆ, ಕೊಳೆತ ಹಣ್ಣುಗಳು ಮತ್ತು ನವಸಾಗರದಂತಹ ಅನಾರೋಗ್ಯಕರ

ವಸ್ತುಗಳನ್ನು ಉಪಯೋಗಿಸಿ ತಯಾರಿಸುವ ಕಳ್ಳಭಟ್ಟಿ ಸಾರಾಯಿ ಕೂಡ ಜೀವಕ್ಕೆ ದೊಡ್ಡ ಆಪತ್ತು."[೧೦]

ಹೀಗೆ ಹಲವಾರು ವಿಚಾರಗಳನ್ನು ದಲಿತ ಯುವಕ ಸಂಘ ಕರಪತ್ರಗಳಲ್ಲಿ ನಮೂದಿಸಿ ಹಂಚುವುದರ ಮೂಲಕ ತಳಸಮುದಾಯಗಳಲ್ಲಿ ಅರಿವು ಮೂಡಿಸುವ ಪ್ರಯತ್ನ ಮಾಡಿತು.

ದಿನಾಂಕ ೮-೧೨-೧೯೮೭ರಂದು ತುಮಕೂರು ತಾಲ್ಲೂಕು ಗೂಳೂರು ಮತ್ತು ಹೊನ್ನೇನಹಳ್ಳಿಯ ಎಲ್ಲಾ ತಳಸಮುದಾಯಗಳು ಉಳುತ್ತಿರುವ "ಸರ್ಕಾರಿ ಗೋಮಾಳ(ಕಿತ್ತಗಾನಹಳ್ಳಿ ಸರ್ವೇ ನಂ.೨೨, ೨೩, ೨೪, ೨೫ ಮತ್ತು ೨೯)ಯನ್ನು ಮಂಜೂರು ಮಾಡುವಂತೆ ಒಂದು ಜಾಥಾ, ೧೪ ದಿನಗಳ ಧರಣಿ ಸತ್ಯಾಗ್ರಹ ನಡೆಸಿ, ಹಸಿದವರ ಕೂಗಿಗೆ ಕಿವುಡಾಗಿರುವ ಅಧಿಕಾರಿಗಳ ನಿರ್ಲಕ್ಷತೆ, ರಾಜಕಾರಣಿಗಳ ಕುತಂತ್ರ, ತಳಸಮುದಾಯಗಳ ಸಮಸ್ಯೆ ಕಡೆ ಗಮನಹರಿಸದಿರುವುದರ ವಿರುದ್ಧ ದಲಿತ ಸಂಘರ್ಷ ಸಮಿತಿ, ಜಿಲ್ಲಾಧಿಕಾರಿಗಳ ಕಛೇರಿ ಮುಂದೆ ಉಪವಾಸ ಸತ್ಯಾಗ್ರಹ ನಡೆಸಿತು. ಕಿತ್ತಗಾನಹಳ್ಳಿ ಸವರ್ಣೀಯರು ನಡೆಸಿದ ಹಲ್ಲೆ, ಅಧಿಕಾರಿಗಳ ನಿರ್ಲಕ್ಷತೆ, ರಾಜಕಾರಣಿಗಳ ಕುತಂತ್ರವನ್ನು ಖಂಡಿಸಿ ದಲಿತ ಮಹಿಳಾ ಒಕ್ಕೂಟವು ಪ್ರತಿಭಟನಾ ಮೆರವಣಿಗೆ ಏರ್ಪಡಿಸಿತು."[೧೧] ದಲಿತ ಸಂಘರ್ಷ ಸಮಿತಿ ಹೋರಾಟವನ್ನು ಬೆಂಬಲಿಸಿ, ಭೂರಹಿತ ತಳಸಮುದಾಯಗಳಿಗೆ ಕೂಡಲೇ ಭೂಮಿ ಮಂಜೂರು ಮಾಡುವಂತೆ ಒತ್ತಾಯಿಸಿತು.

"೧೯೭೯ ಜನವರಿ ೧ ರಂದು ಕರ್ನಾಟಕ ಸರಕಾರವು ತಳಸಮುದಾಯಗಳ ದರಖಾಸ್ತು ಭೂಮಿ, ಮಾರಾಟ ನಿಷೇಧ ಕಾಯಿದೆಯನ್ನು ಜಾರಿಗೆ ತಂದು ಜಿಲ್ಲಾ ರೆವಿನ್ಯೂ ವಿಭಾಗಾಧಿಕಾರಿಗಳು ಅಕ್ರಮವಾಗಿ ಕೊಂಡವರಿಂದ ತಳಸಮುದಾಯಗಳಿಗೆ ಭೂಮಿ ಬಿಡಿಸಿ ಕೊಡಬೇಕೆಂದು ಆದೇಶ ನೀಡಿತ್ತು. ಸರ್ಕಾರದ ನಿರೂಪದಂತೆ ಜಿಲ್ಲಾ ರೆವಿನ್ಯೂ ವಿಭಾಗಾಧಿಕಾರಿಗಳು ತಳಸಮುದಾಯಗಳಿಗೆ ಭೂಮಿ ಬಿಡಿಸಿಕೊಡುವ ಯತ್ನ ಮಾಡುತ್ತಿದ್ದಂತೆಯೆ, ಭೂ ಮಾಲೀಕರು ಕೆಲವು ರಾಜಕಾರಣಿಗಳು ವಿಭಾಗಾಧಿಕಾರಿಗಳ ಆಜ್ಞೆಯ ವಿರುದ್ಧ ಹೈಕೋರ್ಟ್‌ನಿಂದ ತಡೆಯಾಜ್ಞೆ ತಂದರು. ಹಾಗೆ ಕರ್ನಾಟಕ ಹೈಕೋರ್ಟ್ ಕೊಟ್ಟ ತಡೆಯಾಜ್ಞೆಗಳ ಒಟ್ಟು ಸಂಖ್ಯೆ ಸುಮಾರು ೧೪ ಸಾವಿರ ಮೀರಿತ್ತು."[೧೨] ಸರ್ಕಾರ ಕಾನೂನು ಮಾಡಿದರೂ ಬಡವರಿಗೆ ಎಟುಕದೆ ಹೋಯಿತು. ಹೈಕೋರ್ಟು ತಡೆಯಾಜ್ಞೆಗಳ ಬಗ್ಗೆ ಕಿಂಚಿತ್ತೂ ಯೋಚನೆ ಮಾಡದೆ ಸರ್ಕಾರ ಕೈಕಟ್ಟಿ ಕುಳಿತುಕೊಂಡಿತು. ಹೈಕೋರ್ಟ್ ಮೆಟ್ಟಿಲು ಹತ್ತುವಷ್ಟು ಆರ್ಥಿಕ ಬಲವಿಲ್ಲದೆ ತಳಸಮುದಾಯಗಳು ಕಂಗಾಲಾದವು.

ಪರಿಸ್ಥಿತಿಯ ಗಾಂಭೀರ್ಯವನ್ನು ಮನಗಂಡ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ೧೯೮೦ ಆಗಸ್ಟ್ ೧೫ ರಂದು ಹೈಕೋರ್ಟ್ ತಡೆಯಜ್ಞೆ ರದ್ದುಗೊಳಿಸಿ ಎಂಬ ಬೇಡಿಕೆಯೊಂದಿಗೆ ರಾಜ್ಯದ ವಿವಿಧ ಭಾಗಗಳಿಂದ ಬಂದ ಸುಮಾರು ೧೦ ಸಾವಿರ ತಳಸಮುದಾಯಗಳ ಬೃಹತ್ ಮೆರವಣಿಗೆ ಬೆಂಗಳೂರಿನಲ್ಲಿ ರಾಜ್ಯಪಾಲರಿಗೆ ಮನವಿ ಅರ್ಪಿಸಿತು. ದಿನಾಂಕ ೧೬ ಆಗಸ್ಟ್ ೧೯೮೨ರಂದು ಮುಖ್ಯಮಂತ್ರಿ ಹಾಗೂ ಕಂದಾಯ ಮಂತ್ರಿಗಳನ್ನು ಭೇಟಿ ಮಾಡಿದ ಕೂಡಲೇ ತಡೆಯಾಜ್ಞೆ ರದ್ದುಗೊಳಿಸುವ ಭರವಸೆ ಕೊಟ್ಟರು. ಆದರೆ ಇದಾಗಿ ಒಂದು ವರ್ಷ ಕಳೆದರೂ ಸರ್ಕಾರ ಯಾವ ಕ್ರಮವನ್ನು ಕೈಕೊಳ್ಳದೆ ಮೌನವಾಗಿ ಬಿಟ್ಟಿತು.

ನಿದ್ರಿಸುತ್ತಿದ್ದ ಸರ್ಕಾರವನ್ನು ಬಡಿದೆಬ್ಬಿಸಲು ೧೯೮೨ ಜನವರಿ ೧೧ ರಂದು ರಾಜ್ಯದಾದ್ಯಂತ ಪ್ರತಿ ತಾಲ್ಲೂಕು ಕಛೇರಿ ಮುಂದೆ ದಲಿತ ಸಂಘರ್ಷ ಸಮಿತಿಯು ಸಹಸ್ರಾರು ತಳಸಮುದಾಯ ದವರು ಧರಣಿ ಬೃಹತ್ ಸಭೆಗಳನ್ನು ನಡೆಸಿ ತಡೆಯಾಜ್ಞೆ ರದ್ದಾಗುವಂತೆ ಒತ್ತಾಯ ಮಾಡಿದರು. "ಮುಖ್ಯಮಂತ್ರಿಗಳು ವಿಧಾನಸೌಧದ ಮುಂದೆ ಅಂಬೇಡ್ಕರ್ ಮೂರ್ತಿ ಅನಾವರಣ ಮಾಡುತ್ತ ತಡೆಯಾಜ್ಞೆ ಆದಷ್ಟು ಬೇಗ ರದ್ದುಗೊಳಿಸುವುದಾಗಿ ಹೇಳಿಕೆ ಕೊಟ್ಟರು. ನ್ಯಾಯಾಲಯಗಳ ಕಡೆ ಬೆರಳು ಮಾಡಿ, ತಡವಾಗುತ್ತಿರುವುದಕ್ಕೆ ನ್ಯಾಯಾಲಯಗಳೇ ಕಾರಣ ಎಂದರು. ಆನಂತರ ದಲಿತ ಸಂಘರ್ಷ ಸಮಿತಿ ಹೈಕೋರ್ಟ್ ಮುಖ್ಯ ನ್ಯಾಯಾಧೀಶರನ್ನು, ಅಡ್ವೊಕೇಟ್ ಜನರಲ್ ಅವರನ್ನು ಭೇಟಿ ಮಾಡಿತು."[೧೩] ಆನಂತರ ೧೯೮೧ ಜುಲೈ ತಿಂಗಳು ಕಾನೂನು ಮಂತ್ರಿಗಳನ್ನು ಭೇಟಿ ಮಾಡಿ ಮನವಿ ಸಲ್ಲಿಸುವುದರ ಮೂಲಕ ಬಹು ದಿನದ ಬೇಡಿಕೆಯನ್ನು ಈಡೇರಿಸಲು ಒತ್ತಾಯಿಸಲಾಯಿತು.

ದಲಿತ ಸಂಘರ್ಷ ಸಮಿತಿಯ ಮೂರು ವರ್ಷಗಳ ಸತತ ಹೋರಾಟದ ಫಲವಾಗಿ ೧೯೮೨ ಸೆಪ್ಟೆಂಬರ್ ೧೬ ಮತ್ತು ೩೦ ಸಾಮಾಜಿಕ ನ್ಯಾಯವನ್ನು ದೃಷ್ಟಿಯಲ್ಲಿಟ್ಟುಕೊಂಡು ಕರ್ನಾಟಕ ಹೈಕೋರ್ಟ್ ಅಪೂರ್ವ ತೀರ್ಪನ್ನು ಕೊಟ್ಟು ತಡೆಯಾಜ್ಞೆಗಳನ್ನು ರದ್ದುಗೊಳಿಸಿತು. ಆ ಮೂಲಕ ಸರ್ಕಾರ ಬಹಳ ದಿನಗಳ ಬೇಡಿಕೆಯನ್ನು ಈಡೇರಿಸಿತು.

ಆದರೆ ಕಾನೂನು ತಳಸಮುದಾಯಗಳ ಅನುಭವಕ್ಕೆ ಬರುವ ದಾರಿಯಲ್ಲಿ ರಾಜ್ಯದ ಕೆಲವು ಕಡೆ ಭೂಮಾಲೀಕರು ವಕೀಲರು ರಾಜಕಾರಣಿಗಳು ಸಂಘಟಿತರಾಗುತ್ತಿರುವ ವರದಿಗಳು ಬರುತ್ತಿದ್ದವು. ಸುಪ್ರೀಂಕೋರ್ಟ್ ಮೆಟ್ಟಲು ಹತ್ತಲು ಲಕ್ಷಾಂತರ ಹಣ ಸಂಗ್ರಹಿಸಲಾಗುತ್ತಿತ್ತು. ಒಂದು ಕಡೆ ಪರಿಸ್ಥಿತಿ ಈ ರೀತಿ ಗಂಭೀರವಾಗುತ್ತಿದ್ದರೆ ಮತ್ತೊಂದು ಕಡೆ ಕೆಲವು ಸಮಯ ಸಾಧಕ ರಾಜಕಾರಣಿಗಳು ಬಡ ರೈತರ ಸಂಘ ಎಂಬ ಹೆಸರಿನಲ್ಲಿ ಸುಳ್ಳು ಪ್ರಚಾರ ಮಾಡುತ್ತಾ ಮುಂಬರಲಿರುವ ಚುನಾವಣೆ ನೆಪಯೊಡ್ಡಿ ಜಾಥಾ ಹೆಸರಿನಲ್ಲಿ ತಳಸಮುದಾಯಗಳನ್ನು

ವಂಚಿಸುತ್ತಿದ್ದರು. ತಳಸಮುದಾಯಗಳು ಭೂಮಾಲೀಕರು ಮತ್ತೆ ಸಮಯಸಾಧಕರ ವಿರುದ್ಧ ಸಂಘಟಿತರಾಗಬೇಕು. ಸರ್ಕಾರ ವಿಳಂಬ ಮಾಡದೆ ಎಲ್ಲ ಮುಂಜಾಗ್ರತೆ ಕ್ರಮಗಳನ್ನು ತೆಗೆದುಕೊಂಡು ತಳಸಮುದಾಯಗಳಿಗೆ ಭೂಮಿ ಬಿಡಿಸಿಕೊಡುವ ವ್ಯವಸ್ಥೆ ಮಾಡಬೇಕೆಂದು ಕರ್ನಾಟಕ ದಲಿತ ಸಂಘರ್ಷ ಸಮಿತಿ ಒತ್ತಾಯಿಸಿತು. ಒಂದು ಪಕ್ಷ ಸರ್ಕಾರ ತನ್ನ ಕರ್ತವ್ಯದಲ್ಲಿ ಕ್ರಿಯಾಲೋಪ ಮಾಡಿದ್ದೇ ಆದರೆ, ಮುಂಬರುವ ಮಹಾಚುನಾವಣೆಯಲ್ಲಿ ದಲಿತ ಸಂಘರ್ಷ ಸಮಿತಿ ರಾಜ್ಯದಾದ್ಯಂತ ತಳಸಮುದಾಯಗಳಿಂದ ಚುನಾವಣಾ ಬಹಿಷ್ಕಾರ ಚಳವಳಿ ಆರಂಭಿಸುವುದೆಂದು ತಿಳಿಸಿತು.

ತುಮಕೂರು ತಾಲ್ಲೂಕು ಗೂಳೂರು ಮತ್ತು ಹೊನ್ನೇನಹಳ್ಳಿ ತಳಸಮುದಾಯದವರು “೧೯೭೫-೭೬ನೇ ಸಾಲಿನಿಂದಲೂ ಕಿತ್ತಗಾನಹಳ್ಳಿ ಸರ್ಕಾರಿ ಗೋಮಾಳ ಸರ್ವೇ ನಂ.೨೨, ೨೩, ೩೪, ೩೫ ಮತ್ತು ೨೯ರಲ್ಲಿ ಉಳುಮೆ ಮಾಡಿಕೊಂಡು ಬರುತ್ತಲೇ ಇದ್ದಾರೆ. ಅಂದಿನಿಂದಲೂ ಸಂಬಂಧಪಟ್ಟ ಅಧಿಕಾರಿಗಳಿಂದ ಹಿಡಿದು ಮಂತ್ರಿ ಶಾಸಕರಿಗೆ ಅರ್ಜಿಗಳನ್ನು ಕೊಟ್ಟು ಜಮೀನನ್ನು ಮಂಜೂರು ಮಾಡಿಕೊಡಬೇಕೆಂದು ಕೇಳಿಕೊಂಡಿದ್ದರು.”[೧೪] ಸವರ್ಣೀಯರು ತಳಸಮುದಾಯ ವಿರೋಧಿ ರಾಜಕಾರಣಿಗಳ ಬೆಂಬಲದಿಂದ ಬೆಳೆಯನ್ನು ನಾಶ ಮಾಡುತ್ತ ಬಂದಿದ್ದರು.

ಈ ವಿಷಯವನ್ನು ಸರ್ಕಾರದ ಗಮನಕ್ಕೆ ತರಲಾಯಿತು. ತಹಸೀಲ್ದಾರ್ ಮತ್ತು ಅಸಿಸ್ಟೆಂಟ್ ಕಮೀಷನರ್ ಸ್ಥಳಕ್ಕೆ ಭೇಟಿ ಕೊಟ್ಟು ಕೆಲವೇ ದಿನಗಳಲ್ಲಿ ಉಳುಮೆ ಮಾಡುವವರಿಗೆ ಜಮೀನು ಮಂಜೂರು ಮಾಡಿ ಕೊಡುವುದಾಗಿ ಭರವಸೆ ಕೊಟ್ಟಿದ್ದರು. ಪುನಃ ತಾರೀಖು ೫-೯-೧೯೮೨ರಲ್ಲಿ ಬೆಳೆ ಇಟ್ಟಿದ್ದ ಸಂದರ್ಭದಲ್ಲಿ ವಿಭಾಗಾಧಿಕಾರಿಗಳು, ತಹಸೀಲ್ದಾರ್ ಅವರು ಭೇಟಿ ನೀಡಿ ಜಮೀನು ಮಂಜೂರು ಮಾಡಿಕೊಡುವುದಾಗಿ ಭರವಸೆ ಕೊಟ್ಟಿದ್ದರು. ಕಳೆದ ತಿಂಗಳಿನಲ್ಲಿ ಜಿಲ್ಲಾಧಿಕಾರಿಗಳು, ವಿಶೇಷ ಜಿಲ್ಲಾಧಿಕಾರಿಗಳು, ವಿಭಾಗಾಧಿಕಾರಿಗಳು ಮತ್ತೆ ಸ್ಥಳಕ್ಕೆ ಭೇಟಿ ಮಾಡಿ ಭರವಸೆಯನ್ನು ಕೊಟ್ಟರು. ಮಾರನೆ ದಿನ ರೆವಿನ್ಯೂ ಇನ್‌ಸ್ಪೆಕ್ಟರ್ ಅವರನ್ನು ಕಳುಹಿಸ ಲಾಯಿತು. ಅವರು ಅಳತೆ ಮಾಡಿಕೊಂಡು ಬಂದರು.

“ದಿನಾಂಕ ೨೯-೧೦-೧೯೮೨ ತಳಸಮುದಾಯ ವಿರೋಧಿ ರಾಜಕಾರಣಿಗಳ ಕುತಂತ್ರದಿಂದ ಅರಣ್ಯ ಇಲಾಖೆಯವರು ಇದ್ದ ಬೆಳೆಯನ್ನು ನಾಶ ಮಾಡಿ ರಾತ್ರಿಯೇ ನೀಲಗಿರಿ ಗಿಡಗಳನ್ನು ಇಟ್ಟಿದ್ದಾರೆ ಎಂದು ತಿಳಿದು ಬಂದಿತು. ತಳಸಮುದಾಯದವರು ಜಮೀನು ಹತ್ತಿರ ಹೋದಾಗ ಊರಿನ ಸವರ್ಣೀಯರು ರಾಜಕಾರಣಿಗಳ ಪ್ರಚೋದನೆಯಿಂದಾಗಿ ಮಚ್ಚು, ದೊಣ್ಣೆ ಹಿಡಿದು ಹೊಡೆಯಲು ಪ್ರಯತ್ನಿಸಿದ್ದಾರೆ.”[೧೫] ಈ ಕ್ಷೇತ್ರದಿಂದ ತಳಸಮುದಾಯಗಳ ಓಟನ್ನು ಪಡೆದು ಗೆದ್ದು ತಾಲ್ಲೂಕು ಬೋರ್ಡ್ ಅಧ್ಯಕ್ಷರಾದ ನಾರಾಯಣಗೌಡ, ಎಂ.ಎಲ್.ಎ

ಅಂದಾನಯ್ಯ, ಎಂ.ಪಿ. ಲಕ್ಕಪ್ಪ ಮತ್ತು ಛೇರ್ಮೆನ್ ರಂಗಪ್ಪ ಹೊಸೂರು ಮುಂತಾದ ತಳಸಮುದಾಯ ವಿರೋಧಿ ರಾಜಕಾರಣಿಗಳು ತಳಸಮುದಾಯಗಳಿಗೆ ಭೂಮಿ ದಕ್ಕದಂತೆ ಎಲ್ಲಾ ಇಲಾಖೆಯಲ್ಲಿಯೂ ತಮ್ಮ ಪ್ರಭಾವ ಬೀರಿದ್ದರು. ಈ ಕ್ಷೇತ್ರದ ಎಂ.ಎಲ್.ಎ ಅಂದಾನಯ್ಯ ಮತ್ತು ಟಿ.ಡಿ.ಬಿ. ಅಧ್ಯಕ್ಷ ನಾರಾಯಣಗೌಡರನ್ನು ಭೇಟಿ ಮಾಡಿದಾಗ ಈ ಜಮೀನು ನಿಮಗೆ ಸಿಗುವುದಿಲ್ಲ, ನಿಮ್ಮ ಓಟಿನಿಂದ ನಾವೇನು ಗೆದ್ದಿಲ್ಲ ಎನ್ನುತ್ತಾರೆ."[೧೬] ದಿನಾಂಕ ೯-೧೧-೧೯೮೨ರಂದು ದಲಿತ ಸಂಘರ್ಷ ಸಮಿತಿ ಜಿಲ್ಲಾ ಸಂಚಾಲಕರು ಗೂಳೂರು ತಳಸಮುದಾಯಗಳೊಂದಿಗೆ ಸ್ಥಳಕ್ಕೆ ಭೇಟಿ ಕೊಟ್ಟಾಗ "ಸವರ್ಣೀಯರ ಗುಂಪು ರಾಜಕಾರಣಿಗಳ ಬೆಂಬಲದಿಂದ ಗೂಳೂರು ತಳಸಮುದಾಯಗಳನ್ನು, ದಲಿತ ಸಂಘರ್ಷ ಸಮಿತಿ ಜಿಲ್ಲಾ ಸಂಚಾಲಕರನ್ನು ಅಮಾನುಷವಾಗಿ ಥಳಿಸಿತು. ಪ್ರಜ್ಞೆತಪ್ಪಿ ಬಿದ್ದಿದ್ದ ದಲಿತರನ್ನು ಸುಮಾರು ಮುನ್ನೂರು ಜನ ಸವರ್ಣೀಯರು ಮಚ್ಚು, ದೊಣ್ಣೆಗಳನ್ನು ಹಿಡಿದು ೪, ೫ ಘಂಟೆ ಕಾಲ ಸುತ್ತುಗಟ್ಟಿ ಕುಳಿತ್ತಿದ್ದರು. ರಾಜಕಾರಣಿಗಳ ಕೈಗೊಂಬೆಯಾದ ಪೊಲೀಸರು ಉದ್ದೇಶಪೂರ್ವಕವಾಗಿಯೇ ತಡವಾಗಿ ಬಂದು ಏಟು ತಿಂದ ದಲಿತರನ್ನು ಅವಮಾನಿಸುತ್ತಾ ಸರ್ಕಾರಿ ಆಸ್ಪತ್ರೆಗೆ ಸೇರಿಸಿದರು"[೧೭] ಎಂದು ಬಂದಕುಂಟೆ ನಾಗರಾಜ್ ಅವರು ಸಂದರ್ಶನದ ಸಮಯದಲ್ಲಿ ಮಾಹಿತಿ ನೀಡಿದ್ದಾರೆ. ರಾಜಕಾರಣಿಗಳ ಕುತಂತ್ರ ಮತ್ತು ಅಧಿಕಾರಿಗಳ ನಿರ್ಲಕ್ಷ್ಯತೆಯಿಂದಾಗಿ ನಡೆದ ಈ ದೌರ್ಜನ್ಯವನ್ನು ದಲಿತ ಸಂಘರ್ಷ ಸಮಿತಿಯು ಖಂಡಿಸಿತು.

ಕಂಬಾಲಪಲ್ಲಿ ದಲಿತರ ಸಜೀವ ದಹನ ವಿರೋಧಿಸಿ ದಲಿತ ಸಂಘರ್ಷ ಸಮಿತಿ ದಿನಾಂಕ ೨೯-೩-೨೦೦೦ರಂದು ತುಮಕೂರು ಪುರಭವನದಿಂದ ಪ್ರತಿಭಟನಾ ಮೆರವಣಿಗೆ ಮಾಡಿತು. ಕೋಲಾರ ಜಿಲ್ಲೆ ಚಿಂತಾಮಣಿ ತಾಲೂಕು ಕಂಬಾಲಪಲ್ಲಿಯಲ್ಲಿ ೭ ಜನ ದಲಿತರನ್ನು ಮೇಲ್ಜಾತಿಯವರು ಸಜೀವ ದಹನ ಮಾಡಿ ಕರ್ನಾಟಕದಲ್ಲೂ ಜಾತಿ ವೈಷಮ್ಯ ಮೊಳೆಯುತ್ತಿರುವುದನ್ನು ರುಜುವಾತು ಮಾಡಿದೆ. ಈ ಬರ್ಬರ ಕೃತ್ಯವನ್ನು ತುಮಕೂರು ಜಿಲ್ಲಾ ದಲಿತ ಸಂಘರ್ಷ ಸಮಿತಿ ಖಂಡಿಸಿತು. ಅಲ್ಲದೆ ಹಲವಾರು ಹಕ್ಕೋತ್ತಾಯಗಳನ್ನು ಮಂಡಿಸಿತು. ಅವುಗಳೆಂದರೆ,

"೧. ಬದುಕಿ ಉಳಿದ ಹಾಗೂ ದೌರ್ಜನ್ಯಕ್ಕೆ ತುತ್ತಾದ ಕಂಬಾಲಪಲ್ಲಿ ದಲಿತರಿಗೆ ಪುನರ್ವಸತಿ ಕಲ್ಪಿಸಬೇಕು. ಹಾಗೂ ಮಾಸಾಶನ ನೀಡಬೇಕು.

೨. ದೌರ್ಜನ್ಯಕೋರರ ಆಸ್ತಿಪಾಸ್ತಿಗಳನ್ನು ಪರಿಶಿಷ್ಟ ಜಾತಿ ವರ್ಗಗಳ ದೌರ್ಜನ್ಯ ತಡೆ ಕಾಯ್ದೆಯಡಿ ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳಬೇಕು.

೩. ಇಡೀ ರಾಜ್ಯದಲ್ಲಿ ದಲಿತರು ಮತ್ತು ಮೇಲ್ಜಾತಿಗಳ ಮಧ್ಯೆ ಬಿಗುವಿನ ವಾತಾವರಣವಿರುವ ಸ್ಥಳಗಳನ್ನು ಸೂಕ್ಷ್ಮ ಪ್ರದೇಶಗಳೆಂದು ಗುರುತಿಸಿ ಕಟ್ಟೆಚ್ಚರ ವಹಿಸಬೇಕು.

೪. ಈ ಘಟನೆಯನ್ನು ಪ್ರತಿಭಟಿಸಿ ಎಲ್ಲ ದಲಿತ ಮಂತ್ರಿಗಳು ಮತ್ತು ಶಾಸಕರು ಕೂಡಲೇ ತಮ್ಮ ಸ್ಥಾನಗಳಿಗೆ ರಾಜೀನಾಮೆ ನೀಡಬೇಕು.

೫. ದಲಿತರ ಮೇಲೆ ದೌರ್ಜನ್ಯವೆಸಗಿದ ಮೇಲ್ಜಾತಿ ಸಂಘಟನೆಗಳನ್ನು ಸರ್ಕಾರ ನಿಷೇಧಿಸಬೇಕು."[೧೮]

೨೦೦೦ನೇ ವರ್ಷದಲ್ಲಿ ಕರ್ನಾಟಕ ದಲಿತ ಸಂಘರ್ಷ ಸಮಿತಿ ಧರಣಿ ಸತ್ಯಾಗ್ರಹ ಮಾಡಿ ಹಲವಾರು ಹಕ್ಕೋತ್ತಾಯಗಳನ್ನು ಮಂಡಿಸಿತು. ಅವುಗಳೆಂದರೆ,

"೧. ಅಣ್ಣಾಪುರ ಬಡಾವಣೆಯ ಖಾನೇಷುಮಾರಿ ನಂಬರ್ ೧೦೪/೧ ಮತ್ತು ೧೦೫/೭ ಈ ಭೂಮಿಗೆ ಮನೆ ಕಟ್ಟಿಕೊಳ್ಳಲು ಪರವಾನಗಿ ನೀಡಬೇಕು.

೨. ೨೦-೦೫-೨೦೦೦ದಂದು ಅಧಿಕಾರಿಗಳು ಮನೆ ಹೊಡೆದು ಸುಮಾರು ೨೦ ಸಾವಿರ ರೂ. ಬೆಲೆ ಬಾಳುವ ಸಾಮಗ್ರಿಗಳನ್ನು ತೆಗೆದುಕೊಂಡು ಹೋಗಿದ್ದು ಇದನ್ನು ಕೂಡಲೇ ದಲಿತರಿಗೆ ಹಿಂದಿರುಗಿಸಬೇಕು.

೩. ದಲಿತರು ಕಟ್ಟಿದ ಮನೆಯನ್ನು ನಾಶಪಡಿಸಿರುವುದಕ್ಕೆ ಸರ್ಕಾರ ಪರಿಹಾರ ನೀಡಬೇಕು.

೪. ದಲಿತರಿಗೆ ಮಾನಸಿಕವಾಗಿ ಚಿತ್ರಹಿಂಸೆ ಮತ್ತು ನಷ್ಟಗೊಳಿಸಿರುವ ಅಧಿಕಾರಿಗಳ ವಿರುದ್ಧ ಕೂಡಲೇ ಸರ್ಕಾರ ಸಮಗ್ರ ತನಿಖೆ ಮಾಡಬೇಕು.

೫. ಡಿ.ಆರ್.ತಿಮ್ಮಯ್ಯ ಹಿಂದೆ ರೆವಿನ್ಯೂ ಅಧಿಕಾರಿಯಾಗಿ ಇವರ ಸ್ವಂತ ಸಂಬಂಧಿಗಳಿಗೆ ಮತ್ತು ಅಣ್ಣ ತಮ್ಮಂದಿರುಗಳಿಗೆ ಭೂಮಿ ಮಂಜೂರು ಮಾಡಿಕೊಂಡಿರುವ ಬಗ್ಗೆ ಮತ್ತು ಇವನ ಎಲ್ಲಾ ಆಸ್ತಿಗಳ ಬಗ್ಗೆ ಸಮಗ್ರ ತನಿಖೆ ಆಗಲಿ."[೧೯]

ರಾಜಕೀಯ ಕುತಂತ್ರ ಮತ್ತು ಒತ್ತಡಕ್ಕೆ ಒಳಗಾಗಿ ಅಧಿಕಾರಿಗಳ ವರ್ಗ ದಲಿತರಿಗೆ ಹಸ್ತಕ್ಷೇಪ ಮತ್ತು ವಂಚನೆ ಮಾಡಿರುವ ದಲಿತ ವಿರೋಧಿ ಅಧಿಕಾರಿಗಳ ದೌರ್ಜನ್ಯ ಮತ್ತು ಅನ್ಯಾಯ ಖಂಡಿಸಿ ಸಾರ್ವಜನಿಕರು ಮತ್ತು ಪ್ರಗತಿಪರ ಸಂಘಟನೆಗಳು ಈ ಹೋರಾಟಕ್ಕೆ ಬೆಂಬಲ ನೀಡಬೇಕೆಂದು ದಲಿತ ಸಂಘರ್ಷ ಸಮಿತಿ ಮನವಿ ಮಾಡಿಕೊಂಡಿತು.

ದಲಿತ ಸಂಘರ್ಷ ಸಮಿತಿ ೧೪-೪-೨೦೦೧ರಂದು ಅಂಬೇಡ್ಕರ್ ಜಯಂತಿಯ ಸರ್ಕಾರಿ ಕಾರ್ಯಕ್ರಮವನ್ನು ಧಿಕ್ಕರಿಸಿ ಅಂಬೇಡ್ಕರ್ ಭವನ ಪೂರ್ಣಗೊಳ್ಳಲು ಒತ್ತಾಯಿಸಿ

ಧರಣಿ ಸತ್ಯಾಗ್ರಹ ಮಾಡಿತು. "ರಾಷ್ಟ್ರನಾಯಕರಾದ ಅಂಬೇಡ್ಕರ್ ಅವರನ್ನು ದಲಿತರ ನಾಯಕರೆಂದು ಭಾವಿಸಿ ಗೌರವಿಸುವ ಮಾಮೂಲಿ ನಾಟಕವನ್ನು ಅಧಿಕಾರದಲ್ಲಿರುವ ಸರ್ಕಾರಾದಿಯಾಗಿ ಅನೇಕ ಸಂಘ-ಸಂಸ್ಥೆಗಳು, ರಾಜಕೀಯ ಪಕ್ಷಗಳು ತಮ್ಮ ಕಛೇರಿ ಮತ್ತು ವೇದಿಕೆಗಳಲ್ಲಿ ಡಾ.ಅಂಬೇಡ್ಕರ್ ಮತ್ತು ಜಗಜೀವನರಾಮ್ ಅವರ ಜನ್ಮ ದಿನಾಚರಣೆಯನ್ನು ಏಕಕಾಲದಲ್ಲಿ ಆಚರಿಸಿ, ದಲಿತರಿಗೆ ಸಾಂತ್ವನ ಹೇಳಲು ಹೊರಟಿವೆ. ಈ ಮಾಮೂಲಿ ಶಾಸ್ತ್ರ ಮುಗಿಸಿ, ಕೈಚೆಲ್ಲಿ, ತಳಸಮುದಾಯಗಳ ವಿರುದ್ಧ ಈ ಸಮಾಜ ಪಾರಂಪರಿಕವಾಗಿ ರೂಢಿಸಿಕೊಂಡಿರುವ ದ್ವೇಷ-ಸೇಡು-ಅಸೂಯೆಗಳನ್ನು ಹಲವು ರೂಪದಲ್ಲಿ ವ್ಯಕ್ತಪಡಿಸುತ್ತಿದೆ."[೨೦]

ಉದಾಹರಣೆಗೆ ಕಂಬಾಲಪಲ್ಲಿ ದಲಿತರ ನರಮೇಧ, ಬೆಂಡಿಗೇರಿ ಪ್ರಕರಣ, ಬಡ್ತಿ ಮೀಸಲಾತಿಯ ವಿರುದ್ಧ ಹೋರಾಟ ಇವೇ ಮುಂತಾದ ಅಮಾನವೀಯ ಪ್ರಕರಣಗಳು ಮೇಲ್ಜಾತಿ ಮೇಲ್ವರ್ಗಗಳಿಂದ ದಿನನಿತ್ಯದಲ್ಲಿ ಕಣ್ಣು, ಕಿವಿಗಳಿಗೆ ರಾಚುವ ಮತ್ತು ಅನುಭವಕ್ಕೆ ಬರುವ ಕಟು ಸತ್ಯ ಸಂಗತಿಗಳಾಗಿವೆ. ಆದ್ದರಿಂದ "ಈ ಅಣಕ ಸಾಕು, ಭವನ ನಿರ್ಮಾಣ ಪೂರ್ಣವಾಗಬೇಕು ಎಂದು ತೀರ್ಮಾನಿಸಿದ ದಲಿತ ಸಂಘರ್ಷ ಸಮಿತಿ ಸಾರ್ವಜನಿಕರ ಸಹಕಾರದೊಂದಿಗೆ ಭವನ ಪೂರ್ಣಗೊಳ್ಳುವವರೆಗೂ ನಿರಂತರ ಹೋರಾಟಕ್ಕೆ ಸಜ್ಜಾಗಿದೆ."[೨೧] ಈ ಹೋರಾಟದ ಮೊದಲ ಹೆಜ್ಜೆಯಾಗಿ, ಕಾಟಾಚಾರಕ್ಕೆ ಸರ್ಕಾರಿ ಕಾರ್ಯಕ್ರಮವನ್ನು ಧಿಕ್ಕರಿಸಿ ಒಂದು ದಿನದ ಧರಣಿಯನ್ನು ತುಮಕೂರಿನ ಎಂ.ಜಿ. ರಸ್ತೆಯಲ್ಲಿರುವ ಅಪೂರ್ಣ ಭವನದ ಮುಂದೆ ಹಮ್ಮಿಕೊಳ್ಳಲಾಗಿತ್ತು.

ಭಾರತದಲ್ಲಿ ಜಾತಿ ಸಾಮಾಜಿಕ ವಾಸ್ತವ. ಇಂದು ಪ್ರತಿಯೊಂದು ಸಾಮಾಜಿಕ, ಶೈಕ್ಷಣಿಕ ರಾಜಕೀಯ ನಡೆಗಳನ್ನು ಸಹ ಜಾತಿಯನ್ನು ಅನುಸರಿಸಿಕೊಂಡೇ ಇಡುತ್ತಿರುವುದು ತಿಳಿಯದ ವಿಷಯವಲ್ಲ. ಕರ್ನಾಟಕದಲ್ಲಿ ಮುಂದುವರಿದ ಕೆಲವು ಜಾತಿಗಳೂ ಮತ್ತು ಹಿಂದುಳಿದ ನೂರಾರು ಜಾತಿಗಳ ನಡುವಿನ ಅಸಮಾನತೆ ಕಣ್ಣಿಗೆ ರಾಚುವಷ್ಟು ಅಗಾಧವಾಗಿದೆ. ಶೈಕ್ಷಣಿಕ ಪ್ರಗತಿ, ಉದ್ಯೋಗಾವಕಾಶ, ನೀರಾವರಿ ಸೌಲಭ್ಯ, ರಾಜಕೀಯ ಪ್ರಾತಿನಿಧ್ಯ, ಸಾಲ ಸೌಲಭ್ಯ, ಸಾಲ ಮನ್ನಾ ಇನ್ನೂ ಮುಂತಾದ ವಿಷಯಗಳಲ್ಲಿ ಮುಂದುವರಿದ ಜಾತಿಗಳು ತಮ್ಮ ಜನಸಂಖ್ಯೆಗೆ ಮೀರಿದ ಪಾಲನ್ನು ಬಾಚಿಕೊಂಡಿವೆ. ತಳಸಮುದಾಯಗಳ ಕುಲಕಸುಬುಗಳನ್ನು ಯಾವುದೇ ಸರ್ಕಾರ ಆಧುನಿಕವಾಗಿ ಕಟ್ಟಿ ಅವುಗಳ ಕೈ ಹಿಡಿದಿಲ್ಲ. ಮೇಲ್ಜಾತಿಗಳು ಒಳಗೊಳ್ಳುವ ಆರ್ಥಿಕ ಚಟುವಟಿಕೆಗಳು ಮಾತ್ರ ಸರ್ಕಾರಗಳ ಆದ್ಯತೆಗಳಾಗುತ್ತಿವೆ.

"ಚುನಾವಣೆಗೆ ಮುನ್ನ ಕೆಲವು ಮುಂದುವರಿದ ಜಾತಿಗಳು ಹೇಳಿಕೊಳ್ಳುವ ಜನಸಂಖ್ಯೆಯನ್ನು ಕೂಡಿದರೆ ಕರ್ನಾಟಕ ಜನಸಂಖ್ಯೆಯ ನಾಲ್ಕರಷ್ಟಾಗುತ್ತದೆ! ಚುನಾವಣಾ ಕ್ಷೇತ್ರಗಳಿಗೆ ಜಾತಿ

ಮೀಸಲಾತಿಯನ್ನು ಪ್ರಬಲ ಜಾತಿ ರಾಜಕಾರಣಗಳು ಅನಧಿಕೃತವಾಗಿ ನೀಡಿದ್ದಾರೆ! ಆದರೆ ಇವರೆಲ್ಲಾ ಯಾವ ಸಮೀಕ್ಷೆಯ ಆಧಾರದಲ್ಲಿ ಹೇಳುತ್ತಿದ್ದಾರೆ? ನಮ್ಮ ಪತ್ರಿಕಾ ಮಾಧ್ಯಮಗಳು ಕೂಡ ಇವುಗಳ ಶಂಖ ಊದುತ್ತಿರುವುದು ದುರದೃಷ್ಟಕರ."[೨೨] ಆದ್ದರಿಂದ ಹಿಂದುಳಿದ ವರ್ಗಗಳ ಆಯೋಗ ಕೈಗೊಳ್ಳಬೇಕಿರುವ ಸಾಮಾಜಿಕ-ಶೈಕ್ಷಣಿಕ ಸಮೀಕ್ಷೆ ಶೋಷಿತ ಸಮುದಾಯ ಗಳಿಗೆ ಸಾಮಾಜಿಕ ನ್ಯಾಯ ದೊರಕಿಸಿಕೊಡುವಲ್ಲಿ ಮಹತ್ವದ ಪಾತ್ರ ವಹಿಸಲಿದೆ. ಏಕೆಂದರೆ ನಾಡಿನ ಪ್ರಗತಿ-ದುರ್ಗತಿಯ ದಿಕ್ಕು ದೆಸೆಗಳನ್ನು ಅರಿಯಲು ಜಾತಿ ಸಂಬಂಧಿತ ಅಂಕಿ-ಅಂಶಗಳ ಅಗತ್ಯವಿದೆ. ಜಾತಿವಾರು ಜನಗಣತಿ ಸಾಮಾಜಿಕ ಕನ್ನಡಿ. ಪ್ರತಿಯೊಂದು ಜಾತಿ ಸಮುದಾಯಗಳು, ಈ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯ ಏಣಿಯಲ್ಲಿ ತಮ್ಮ ಸ್ಥಾನಮಾನವನ್ನು ಆ ಕನ್ನಡಿಯಲ್ಲಿ ಕಾಣಬಹುದು. ಆ ಮೂಲಕ ಅವುಗಳಿಗೆ ತಮ್ಮ ಸಮುದಾಯಗಳ ಪ್ರಗತಿಗೆ ಹೋರಾಡಲು ಪ್ರಜ್ಞೆ ಮೂಡುತ್ತದೆ.

ಹಿಂದುಳಿದ ವರ್ಗಗಳ ಆಯೋಗಕ್ಕೆ ರಾಜ್ಯ ಸರ್ಕಾರ ಒತ್ತಾಸೆಯಾಗಿ ನಿಂತು ನೆರವು ನೀಡಿ, ಸ್ವಾತಂತ್ರ್ಯಾನಂತರದ ಭಾರತದಲ್ಲಿ ಪ್ರಥಮವಾಗಿ ನಡೆಯಬೇಕಿರುವ ಜಾತಿವಾರು ಜನಗಣತಿಯನ್ನು ನಡೆಸಲಿ ಎಂದು ಕನ್ನಡ ಸಂಘದ ವೇದಿಕೆ ಹಕ್ಕೋತ್ತಾಯವನ್ನು ಮಂಡಿಸಿತು. ಇದರಲ್ಲಿ ಎಲ್ಲಾ ತುಳಿಯಲ್ಪಟ್ಟಿರುವ ನಿರ್ಲಕ್ಷಿತ ಜಾತಿ ಸಮುದಾಯಗಳು ಪಾಲ್ಗೊಳ್ಳಲಿ ಎಂದು ಮನವಿ ಮಾಡಿಕೊಂಡಿತು. ರಾಜ್ಯದಲ್ಲಿ ಮೊದಲ ಬಾರಿಗೆ ಜಾಗೃತಿ ನಡಿಗೆಯನ್ನು ಚಿಕ್ಕನಾಯಕನ ಹಳ್ಳಿಯಲ್ಲಿ ನಡೆಸಿತು.

ಭಾರತದ ಸಂವಿಧಾನ ಜಾರಿಗೊಂಡು ಆರು ದಶಕಗಳು ಕಳೆದಿವೆ. ತಳಸಮುದಾಯಗಳಿಗಾಗಿ ಸಂವಿಧಾನದಲ್ಲಿ ನಿಯೋಜಿಸಿದ ಅನೇಕ ಅಭಿವೃದ್ಧಿ ಯೋಜನೆಗಳ ನಂತರದಲ್ಲೂ ಇಲ್ಲಿವರೆಗೆ ಆಳುವ ಸರ್ಕಾರಗಳು ವಿವಿಧ ಯೋಜನೆಗಳನ್ನು ರೂಪಿಸಿವೆ. ಈ ಯೋಜನೆಗಳಿಂದ ತಳಸಮುದಾಯಕ್ಕೆ ಅಲ್ಪ ಪ್ರಮಾಣದಲ್ಲಿ ಸವಲತ್ತು ಸೌಲಭ್ಯಗಳು ದೊರಕಿವೆ. ಆದರೆ ಇಡೀ ಸಮುದಾಯದ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಯಲ್ಲಿ ಗುಣಾತ್ಮಕವಾದ ಯಾವುದೇ ಬದಲಾವಣೆಗಳನ್ನು ತರುವಲ್ಲಿ ಎಲ್ಲಾ ಸರ್ಕಾರಗಳು ವೈಫಲ್ಯಗೊಂಡಿವೆ. ಈ ವೈಫಲ್ಯಕ್ಕೆ ಯೋಜನೆಗಳಿಂದಲೂ ಮತ್ತು ಅವುಗಳ ಅನುಷ್ಠಾನದಲ್ಲಿರುವ ನ್ಯೂನತೆಗಳೇ ಕಾರಣ. ತಳಸಮುದಾಯಗಳ ಸಾಮಾಜಿಕ ಘನತೆ ಮತ್ತು ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ಈ ಯೋಜನೆಗಳು ಅಷ್ಟಾಗಿ ಸಫಲವಾಗಿಲ್ಲ. ಈ ಪರಿಸ್ಥಿತಿಗೆ ನಿದರ್ಶನವೆಂದರೆ ದಿನನಿತ್ಯ ತಳಸಮುದಾಯಗಳ ಮೇಲೆ ಹೆಚ್ಚುತ್ತಿರುವ ಹಲ್ಲೆ, ದೌರ್ಜನ್ಯ, ಅತ್ಯಾಚಾರ, ಆಕ್ರಮಣಗಳು.

ಕರ್ನಾಟಕ ದಲಿತ ಸಂಘರ್ಷ ಸಮಿತಿ ೨೦೧೧ರಲ್ಲಿ ದಲಿತರ ಹಕ್ಕುಗಳ ಜಾರಿಗೆ ಆಗ್ರಹಿಸಿ ಮುಖ್ಯಮಂತ್ರಿಗಳ ಗೃಹ ಕಛೇರಿ ಮುಂದೆ ಪ್ರತಿಭಟನಾ ಧರಣಿ ನಡೆಸಿತು. ಈ ಸಂದರ್ಭದಲ್ಲಿ ಹಲವಾರು ಹಕ್ಕೋತ್ತಾಯಗಳನ್ನು ಮಂಡಿಸಿತು. ಅವುಗಳೆಂದರೆ,

"* ರಾಜ್ಯ ಸರ್ಕಾರದ ಬಜೆಟ್ಟಿನಲ್ಲಿ ಪರಿಶಿಷ್ಟ ಜಾತಿ/ವರ್ಗಗಳಿಗೆ ಶೇಕಡ ೨೫ರಷ್ಟು ಮೀಸಲಾತಿಯನ್ನು ರಾಷ್ಟ್ರೀಯ ಯೋಜನಾ ಆಯೋಗದ ಶಿಫಾರಸ್ಸಿನಂತೆ ಜಾರಿಯಾಗಬೇಕು.

* ರಾಜ್ಯದಲ್ಲಿ ಭೂ ಸುಧಾರಣಾ ಕಾಯ್ದೆಯನ್ನು ಯಥಾವತ್ತಾಗಿ ಜಾರಿ ಮಾಡಬೇಕು. ಅಕ್ರಮ-ಸಕ್ರಮ ಭೂಮಿ ಮಂಜೂರಾತಿಯಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳಿಗೆ ಶೇಕಡ ೫೦ರಷ್ಟು ಮೀಸಲಿಡಬೇಕು ಮತ್ತು ಪಿ.ಟಿ.ಸಿ.ಎಲ್ ಪ್ರಕರಣಗಳ ಶೀಘ್ರ ಇತ್ಯರ್ಥಕ್ಕಾಗಿ ವಿಶೇಷ ರೆವಿನ್ಯೂ ನ್ಯಾಯಾಲಯ ಸ್ಥಾಪನೆ ಮಾಡಬೇಕು.

* ರಾಜ್ಯದಲ್ಲಿ ಭೂ ನ್ಯಾಯ ಮಂಡಲಿ ರಚನೆಯಾಗಬೇಕು.

* ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಜನಸಂಖ್ಯೆಗನುಗುಣವಾಗಿ ಮೀಸಲಾತಿಯನ್ನು ಶೇಕಡ ೨೫ಕ್ಕೆ ಹೆಚ್ಚಿಸಬೇಕು ಮತ್ತು ಜನಸಂಖ್ಯೆಗನುಗುಣವಾಗಿ ಈ ಮೀಸಲಾತಿಯನ್ನು ವರ್ಗೀಕರಣ ಮಾಡಿ ಹಂಚಬೇಕು.

* ನ್ಯಾಯಮೂರ್ತಿ ಎ.ಜೆ.ಸದಾಶಿವ ಆಯೋಗದ ವರದಿಯನ್ನು ಕೂಡಲೇ ಪಡೆದು ವಿಧಾನ ಸಭೆಯಲ್ಲಿ ಅನುಮೋದಿಸಿ ಕೇಂದ್ರ ಸರ್ಕಾರಕ್ಕೆ ಶಿಫಾರಸ್ಸು ಮಾಡಬೇಕು.

* ಪೌರಕಾರ್ಮಿಕರ ಧ್ವನಿ ಶ್ರೀ ಐ.ಪಿ.ಡಿ.ಸಾಲಪ್ಪ ಅವರ ವರದಿಯನ್ನು ಯಥವತ್ತಾಗಿ ಜಾರಿ ಮಾಡಬೇಕು. ಸಫಾಯಿ ಕರ್ಮಜಾರಿ, ಪೌರಕಾರ್ಮಿಕರ ಗುತ್ತಿಗೆ ಪದ್ಧತಿಯನ್ನು ರದ್ದುಗೊಳಿಸಿ ಪ್ರಸ್ತುತ ಕೆಲಸ ಮಾಡುತ್ತಿರುವ ಗುತ್ತಿಗೆ ಪೌರಕಾರ್ಮಿಕರನ್ನು ಕಾರ್ಯ ಗೊಳಿಸಬೇಕು."[೨೩]

ತುಮಕೂರು ಜಿಲ್ಲೆಗೆ ಸಂಬಂಧಪಟ್ಟಂತೆ ಹೇಳುವುದಾದರೆ "ತುಮಕೂರು ಜಿಲ್ಲೆ ಶಿರಾ ಪೊಲೀಸ್ ಠಾಣೆಯಲ್ಲಿ ದಲಿತರ ಮೇಲೆ ಸುಳ್ಳು ಮೊಕದ್ದಮೆ ಹೂಡಿದ ಇನ್ಸ್‌ಪೆಕ್ಟರ್ ಕನಕಲಕ್ಷ್ಮಿ ಮತ್ತು ಸಬ್‌ಇನ್ಸ್‌ಪೆಕ್ಟರ್‌ಗಳಾದ ಶರತ್‌ಕುಮಾರ್ ಮತ್ತು ರಂಗಸ್ವಾಮಿ ಅವರನ್ನು ಕೂಡಲೇ ಅಮಾನತ್ತಿನಲ್ಲಿಡಬೇಕು."[೨೪] ಹೀಗೆ ದಲಿತ ಸಂಘರ್ಷ ಸಮಿತಿ ತಳಸಮುದಾಯಗಳ ಮೇಲಾಗುತ್ತಿರುವ ದೌರ್ಜನ್ಯ ಹಾಗೂ ಅನ್ಯಾಯಗಳ ವಿರುದ್ಧ ಹಕ್ಕೋತ್ತಾಯವನ್ನು ಮಂಡಿಸಿತು.

ತುಮಕೂರು ಜಿಲ್ಲೆಯನ್ನು ಅನೇಕ ಭೂ ಹೋರಾಟಗಳು ನಡೆದಿದ್ದು ನಗರಕ್ಕೆ ಹೊಂದಿಕೊಂಡಂತಿರುವ ಮರಳೂರು ದಲಿತರಿಗೆ ಮರಳೂರು ದಿನ್ನೆ ಬಗರ್‌ಹುಕುಂ ಜಮೀನನ್ನು ಮಂಜೂರು ಮಾಡುವಂತೆ ದಲಿತ ಸಂಘರ್ಷ ಸಮಿತಿ ಜಿಲ್ಲಾಧಿಕಾರಿಗಳ ಕಛೇರಿ ಮುಂದೆ

ಐದು ದಿನಗಳ ಧರಣಿ ಸತ್ಯಾಗ್ರಹ ನಡೆಸಲಾಯಿತು. ಈ ಹೋರಾಟದ ಫಲವಾಗಿ "ಅಂದಿನ ಮುಖ್ಯಮಂತ್ರಿ ದೇವರಾಜ್ ಅರಸು ಅವರು ಜಿಲ್ಲಾಧಿಕಾರಿಗಳ ಮೂಲಕ ನಡೆಸಿದ ಸಂಧಾನದಂತೆ ನಗರದ ವಿವಿಧ ಕೊಳೆಗೇರಿಗಳಲ್ಲಿ ವಾಸಿಸುತ್ತಿದ್ದ ಎಲ್ಲಾ ಜಾತಿಯ ಬಡವರಿಗೆ ನಿವೇಶನಗಳನ್ನು ಹಂಚಲಾಯಿತು."[೨೫] ಈ ಪ್ರದೇಶದಲ್ಲಿ ಸುಮಾರು ಸಾವಿರಾರು ನಿರ್ಮಾಣವಾಗಿ ಮನೆಗಳು ತಲೆಯೆತ್ತಿ ಒಂದು ದೊಡ್ಡ ಬಡಾವಣೆಯಾಗಿ ನಿಂತಿದೆ. ತುಮಕೂರಿನ ಸರ್ಕಾರಿ ಆಸ್ಪತ್ರೆಯ ಹೆಣ ಕೊಯ್ಯುವ ಸುಮಾರು ಎರಡು ಎಕರೆ ಪ್ರದೇಶವನ್ನು ಡೆಡ್‌ಹೌಸ್ ಕಾಲೋನಿ ಎಂದು ಕರೆಯಲಾಗುತ್ತಿತ್ತು. ಸರ್ಕಾರ ಈ ಪ್ರದೇಶದಲ್ಲಿ ಕಾರ್ಖಾನೆಯೊಂದನ್ನು ಕಟ್ಟಲು ಬಂಡವಾಳಶಾಹಿಗೆ ಮಂಜೂರು ಮಾಡಲಾಗಿತ್ತು. ದಲಿತ ಸಂಘರ್ಷ ಸಮಿತಿ "ಜಿಲ್ಲಾ ಸಂಘಟನಾ ಸಂಚಾಲಕರಾಗಿದ್ದ ಬಂದಕುಂಟೆ ನಾಗರಾಜಯ್ಯ ಅವರ ನೇತೃತ್ವದಲ್ಲಿ ಗುಡಿಸಲು ನಿವಾಸಿಗಳು ಮೆರವಣಿಗೆ ಮೂಲಕ ತಹಶೀಲ್ದಾರರ ಕಛೇರಿಗೆ ಮುತ್ತಿಗೆ ಹಾಕಲಾಯ್ತು. ದಲಿತರೇ ಆಗಿದ್ದ ಅಂದಿನ ತಹಶೀಲ್ದಾರ್ ಬೆಟ್ಟವೀರಯ್ಯ ಅವರು ಸಂಘಟನೆಯ ಮುಂಖಡರಿಗೆ ನಿವೇಶನ ಹಂಚುವಂತೆ ನಿರ್ದೇಶನ ನೀಡಿದರು."[೨೬] ಈಗ ಅಲ್ಲಿ ೪೦ ಮನೆಗಳು ತಲೆಯೆತ್ತಿ ಜಯನಗರ ಎಂಬ ಹೆಸರು ನಡೆದಿದೆ.

ತುಮಕೂರು ನಗರದ ಮಧ್ಯಭಾಗದಲ್ಲಿ ಎನ್.ಹೆಚ್.೪ ಬೈಪಾಸ್ ರಸ್ತೆ ನಿರ್ಮಾಣವಾಗಿದ್ದು, ಇದರ ಒಂದು ಪಕ್ಕದಲ್ಲಿ ಸುಮಾರು ೫೦ ವಿವಿಧ ಜಾತಿಗೆ ಸೇರಿದ ಬಡ ಕುಟುಂಬಗಳು ಗುಡಿಸಲು ಹಾಕಿಕೊಂಡಿದ್ದು ದಲಿತ ಸಂಘರ್ಷ ಸಮಿತಿ ಹೋರಾಟದ ಫಲವಾಗಿ ಅಲ್ಲಿನ ನಿವಾಸಿಗಳಿಗೆ ನಿವೇಶನ ದೊರೆತು ಮನೆಗಳು ನಿರ್ಮಾಣವಾಗಿವೆ. ಇದಕ್ಕೆ ಭಾರತೀ ನಗರ ಎಂದು ಹೆಸರಿಡಲಾಗಿದೆ.

ತುಮಕೂರು ನಗರದಲ್ಲೇ ಹೆಚ್ಚು ಜನಸಂಖ್ಯೆ ಹೊಂದಿರುವ ಕಾಲೋನಿ ನರಸಿಂಹರಾಜ ಕಾಲೋನಿಯಲ್ಲಿ ಒಂದೊಂದು ಮನೆಯಲ್ಲಿ ಮೂರ್‍ನಾಲ್ಕು ಸಂಸಾರಗಳು ಉಸಿರು ಕಟ್ಟಿ ಬದುಕುತ್ತಿದ್ದವು. ಸರ್ಕಾರಿ ಸ್ಮಶಾನದ ಪಕ್ಕದ ಜಮೀನಿನಲ್ಲಿ ದಲಿತ ಸಂಘರ್ಷ ಸಮಿತಿ ಹೋರಾಟದ ಫಲವಾಗಿ ಸುಮಾರು ೨೦೦ ಮನೆಗಳು ತಲೆ ಎತ್ತಿವೆ. ಈ ಹೋರಾಟದ ನೇತೃತ್ವ ವಹಿಸಿದ್ದವರು ಸ್ಥಳೀಯ ಮುಖಂಡರಾದ ನರಸಿಂಹಯ್ಯ, ಗಂಗಾಧರ್ ಮತ್ತು ನರಸೀಯಪ್ಪ. ಇದಕ್ಕೆ ಅಂಬೇಡ್ಕರ್ ನಗರ ಎಂದು ಹೆಸರಿಡಲಾಗಿದೆ. "೧೯೮೬-೯೭ರಲ್ಲಿ ನಡೆದ ಈ ಸಂಘರ್ಷದಲ್ಲಿ ಸವರ್ಣೀಯರ ದೌರ್ಜನ್ಯಕ್ಕೆ ಒಳಗಾದ ಪಾವಗಡ ತಾಲ್ಲೂಕಿನ ಕೊತ್ತೂರು ರಾಮುವಿನ ಕಾಲಿಗೆ ಮಚ್ಚಿನ ಏಟು ಬಿದ್ದು ಇಂದಿಗೂ ಅಂಗವಿಕಲನಾಗಿದ್ದು, ಇತ್ತೀಚೆಗೆ ಸಾವನ್ನಪ್ಪಿದ್ದಾನೆ."[೨೬]

೧೯೮೦-೮೧ನೇ ಇಸವಿಯಲ್ಲಿ ತುರುವೇಕೆರೆ ತಾಲ್ಲೂಕಿನ ಕಲ್ಕೆರೆ, ಗುಡ್ಡೇನಹಳ್ಳಿ ಮುನಿಯೂರು ಸುತ್ತಮುತ್ತಲ ಗ್ರಾಮದ ದಲಿತರು ಸರ್ಕಾರಿ ಜಮೀನಿನಲ್ಲಿ ಬಗರ್‌ಹುಕ್ಕಂ ಸಾಗುವಳಿ ಮಾಡುತ್ತಿದ್ದ ಜಮೀನಿನಲ್ಲಿ ರಾಗಿ ಫಸಲು ಕೊಯ್ಲಿಗೆ ಬಂದಿತ್ತು. ಸ್ಥಳೀಯ ರಾಜಕಾರಣಿಯೊಬ್ಬರ ಪಿತೂರಿಯಿಂದ ಸವರ್ಣೀಯರು ತಮ್ಮ ದನಕರುಗಳನ್ನು ಬಿಟ್ಟು ಬೇಯಿಸಿ ಒಕ್ಕಲೆಬ್ಬಿಸಿದರು. ತಹಶೀಲ್ದಾರರ ಕಛೇರಿ ಮುಂದೆ ೯ ದಿನಗಳು ಧರಣಿ ಸತ್ಯಾಗ್ರಹ ನಡೆಸಲಾಗಿ, ಪ್ರೊ.ಬಿ.ಕೃಷ್ಣಪ್ಪ ಅವರ ಮಧ್ಯಸ್ಥಿಕೆಯಲ್ಲಿ ತಾಲ್ಲೂಕು ಆಡಳಿತ ನಡೆಸಿದ ಸಂಧಾನದ ಫಲವಾಗಿ ನಂತರದ ದಿನಗಳಲ್ಲಿ ನೂರಾರು ಎಕರೆ ಜಮೀನನ್ನು ಉಳುಮೆ ಮಾಡುತ್ತಿದ್ದ ದಲಿತರಿಗೆ ಹಂಚಲಾಗಿದೆ."[೨೭]

"೧೯೯೪-೯೫ರಲ್ಲಿ ತುರುವೇಕೆರೆ ತಾಲ್ಲೂಕು ಮೇಲುವಳಗೆರೆ ಗ್ರಾಮದಲ್ಲಿ ಹೊಲದಲ್ಲಿ ಹುಲ್ಲು ಕಿತ್ತ ಸಣ್ಣ ವಿಚಾರಕ್ಕೆ ಹೆಂಗಸರಿಬ್ಬರ ನಡುವೆ ನಡೆದ ವ್ಯಾಜ್ಯಕ್ಕೆ ಊರಿನ ಸವರ್ಣೀಯರು ಹೊಲೆಮಾದಿಗರಿಬ್ಬರಿಗೆ ದಂಡ ವಿಧಿಸಿದರು. ದಂಡ ಕೊಡಲು ಮಾದಿಗ ಸಮುದಾಯದ ನಾಗರಾಜು ಎಂಬುವವರು ನಿರಾಕರಿಸಿದ್ದಕ್ಕಾಗಿ ಸವರ್ಣೀಯರು ದಲಿತರ ೨೦ ಮನೆಗಳನ್ನು ಧ್ವಂಸ ಮಾಡಿ ಅವರು ಬೆಳೆದಿದ್ದ ನೂರಾರು ತೆಂಗಿನ ಮರಗಳನ್ನು ಕಡಿದು ಹಾಕಿ ಒಕ್ಕಲೆಬ್ಬಿಸಿದರು."[೩೮] ಇದನ್ನು ಪ್ರತಿಭಟಿಸಿ ಸಾವಿರಾರು ವಿದ್ಯಾವಂತರು, ನೌಕರರು ತಮ್ಮ ಅಸ್ತಿತ್ವವನ್ನು ಲೆಕ್ಕಿಸದೆ ದಲಿತ ಸಂಘರ್ಷ ಸಮಿತಿ ನೇತೃತ್ವದಲ್ಲಿ ಹೋರಾಟಕ್ಕಿಳಿದ ಪರಿಣಾಮವಾಗಿ ಹೊಸ ಮನೆಗಳು ನಿರ್ಮಾಣವಾಗಿ ದಲಿತರು ನೆಮ್ಮದಿ ಜೀವನ ನಡೆಸುವಂತಾಗಿದೆ.

"೧೯೮೨-೮೩ರಲ್ಲಿ ತುಮಕೂರು ತಾಲ್ಲೂಕು ಕಿತ್ತಗಾನಹಳ್ಳಿ ಸರ್ಕಾರಿ ಜಮೀನಿನಲ್ಲಿದ್ದ ೭೦-೮೦ ಎಕರೆ ಜಮೀನಿನಲ್ಲಿ ಗೂಳೂರು, ಮಾನಂಗಿ ಮತ್ತು ಸುತ್ತಮುತ್ತಲ ಗ್ರಾಮದ ದಲಿತರು ೭-೮ ವರ್ಷಗಳಿಂದ ಉಳುಮೆ ಮಾಡುತ್ತಿದ್ದರು. ಅಂದಿನ ಸಂಸತ್ ಸದಸ್ಯರ ಪಿತೂರಿಯಿಂದ ಸದರಿ ಜಮೀನಿನಲ್ಲಿ ಗುಂಡಿಗಳನ್ನು ತೆಗೆದು ಸರ್ವೇ ಗಿಡ ನೆಟ್ಟು ಫಸಲು ಹಾಳು ಮಾಡಿದರು. ಸ್ಥಳಪರೀಕ್ಷೆಗೆಂದು ಬಂದಕುಂಟೆ ನಾಗರಾಜು ಅವರು ನರಸಿಂಹರಾಜು ಜೊತೆಯಲ್ಲಿ ಉಳುಮೆದಾರರು ಸೇರಿಕೊಂಡು ೧೨ ಜನ ಜಮೀನಿಗೆ ಹೋದಾಗ ಕಿತ್ತಗಾನಹಳ್ಳಿಯ ನೂರಾರು ಸವರ್ಣೀಯರು ಮಚ್ಚು, ದೊಣ್ಣೆಗಳಿಂದ ಥಳಿಸಿ ನೆಲಕ್ಕೆ ಬಿದ್ದ ನಮ್ಮನ್ನು ಎಳೆದುಕೊಂಡು ಒಬ್ಬರ ಮೇಲೆ ಒಬ್ಬರನ್ನು ಗುಡ್ಡೆ ಹಾಕಿ ಬೆಂಕಿ ಹಚ್ಚಿ ಸುಡಲು ಪ್ರಯತ್ನಿಸಿದರು. ಹಿಂದಿನ ರಾತ್ರಿ ಮಳೆ ಬಿದ್ದಿದ್ದ ಕಾರಣ ಬೆಂಕಿ ಹಚ್ಚಲು ಒಣಹುಲ್ಲು ಸಿಗಲು ತಡವಾಯ್ತು. ಸುದ್ದಿ ತಿಳಿದ ತುಮಕೂರಿನ ಮಂಡಿ ಹಮಾಲಿಗಳು ಲಾರಿಯಲ್ಲಿ ಬಂದು ಸವರ್ಣೀಯರ ಮೇಲೆ ಪ್ರತಿದಾಳಿ ನಡೆಸಿದರು."[೩೯] ಸರ್ಕಾರಿ ಗೋಮಾಳ ರಣರಂಗವಾಯ್ತು. ಈ ಘರ್ಷಣೆಯಲ್ಲಿ ಎರಡು

ಕಡೆಯವರೆಗೂ ತೀವ್ರ ಪೆಟ್ಟಾಗಿ ಪೊಲೀಸರು ತಮ್ಮ ವಾಹನದಲ್ಲಿ ಗಾಯಗೊಂಡವರನ್ನು ಚಿಕಿತ್ಸೆಗಾಗಿ ಸಂವಿಧಾನಾತ್ಮಕವಾಗಿ ದಲಿತರಿಗೆ ಸಿಗಬೇಕಾದ ಮೀಸಲಾತಿ ಯಾವ ಇಲಾಖೆಯಲ್ಲೂ ಇನ್ನೂ ಸಿಕ್ಕಿಲ್ಲ. ಆದರೆ ನಗರಗಳನ್ನು ಶುಚಿತ್ವಗೊಳಿಸುವ ಪೌರ ಕಾರ್ಮಿಕ ಹುದ್ದೆಯಲ್ಲಿ ಮಾತ್ರ ನೂರಕ್ಕೆ ನೂರರಷ್ಟು ದಲಿತರಿದ್ದಾರೆ. ಇವರಿಗೆ ಸರ್ಕಾರದ ನಿಯಮದ ಪ್ರಕಾರ ಸ್ವಚ್ಛಗೊಳಿಸುವ ಪರಿಕರಗಳು, ಬಟ್ಟೆ, ಸೋಪು, ಕ್ರಿಮಿನಾಶಕಗಳನ್ನು ಕೊಡದೆ ಮಾರಿಕೊಳ್ಳುವುದು, ಅಧಿಕಾರಿಗಳು ಇವರನ್ನು ತಮ್ಮ ಮನೆಯ ಜೀತದಾಳುಗಳಂತೆ ನೋಡಿಕೊಳ್ಳುವ ಪರಿಪಾಟವಿದೆ. ಇದು ತುಮಕೂರು ನಗರಸಭೆಯಲ್ಲಿ ಕಂಡುಬರುತ್ತಿರುವ ಸಾಮಾನ್ಯ ಸಂಗತಿ. ಈ ಅಸಂಘಟಿತ ಪೌರ ಕಾರ್ಮಿಕರನ್ನು ದಲಿತ ಸಂಘರ್ಷ ಸಮಿತಿ ಸಂಘಟಿಸಿ ಹೋರಾಟ ನಡೆಸಿದ್ದರ ಫಲವಾಗಿ ೧೪೦ ಮಂದಿ ದಿನಗೂಲಿ ನೌಕರರನ್ನು ಖಾಯಂಗೊಳಿಸಲಾಯಿತು. ೩೨ ಜನ ಪೌರಕಾರ್ಮಿಕರಿಗೆ ಮೊಟ್ಟಮೊದಲ ಬಾರಿಗೆ ವಿಶ್ರಾಂತಿ ವೇತನವನ್ನು ಮತ್ತು ಇವರಿಗೆ ನೀಡಬೇಕಾದ ಸಂಬಳವನ್ನು ಬ್ಯಾಂಕಿನ ಮೂಲಕ ನೀಡುವಂತಾಯಿತು."[೩೦] ತುಮಕೂರಿನಲ್ಲಿ ಪೌರಕಾರ್ಮಿಕರ ಸಂಘಟನೆಯು ದಲಿತ ಸಂಘರ್ಷ ಸಮಿತಿ ಎಲ್ಲಾ ಹೋರಾಟಗಳಿಗೂ ಶಕ್ತಿಯಾಗಿತ್ತು. ಅಲ್ಲದೆ ಹನುಮಂತರಾಯಪ್ಪ ಎಂಬ ಪೌರಕಾರ್ಮಿಕರ ಮುಖಂಡನೊಬ್ಬನನ್ನು ಬಿಡಿಗಾಸಿನ ಖರ್ಚಿಲ್ಲದೆ ನಗರಸಭೆಗೆ ಆಯ್ಕೆ ಮಾಡಿದ್ದು ಅಂದಿನ ಈ ಸಂಘಟನೆಯ ಗಟ್ಟಿತನಕ್ಕೆ ಸಾಕ್ಷಿಯಾಗಿದೆ.

"೧೯೭೮–೮೦ರಲ್ಲಿ ದಲಿತ ಸಂಘರ್ಷ ಸಮಿತಿ ಜಿಲ್ಲೆಯಾದ್ಯಂತ ಜೀತವಿಮುಕ್ತಿ ಆಂದೋಲನ ನಡೆಸಿತು. ಸುಮಾರು ೩ ಸಾವಿರ ಜೀತಗಾರರನ್ನು ಗುರ್ತಿಸಿ ಅವರಿಗೆ ಪುನರ್ವಸತಿ ಕಲ್ಪಿಸುವಂತೆ ಜಿಲ್ಲಾಡಳಿತವನ್ನು ಒತ್ತಾಯಿಸಲಾಯಿತು. ನಂತರ ೧೯೮೫ರಲ್ಲಿ ೪ ಸಾವಿರ ಜೀತಗಾರರನ್ನು ಗುರ್ತಿಸಿ ಮೆರವಣಿಗೆಯೊಂದಿಗೆ ಜಿಲ್ಲಾಧಿಕಾರಿಗೆ ದಾಖಲಾತಿಗಳನ್ನು ಒದಗಿಸಲಾಯಿತು. ಈ ಜೀತವಿಮುಕ್ತಿ ಆಂದೋಲನದಿಂದ ಕಾನೂನಿಗೆ ಹೆದರಿದ ಅನೇಕ ಭೂಮಾಲೀಕರು ಜಿಲ್ಲೆಯಾದ್ಯಂತ ಸ್ವಯಂಪ್ರೇರಿತರಾಗಿ ತಮ್ಮ ಮನೆಗಳಲ್ಲಿ ಇಟ್ಟುಕೊಂಡಿದ್ದ ಜೀತಗಾರರನ್ನು ಬಿಡುಗಡೆ ಮಾಡಿದರು."[೩೧] ಇವರಲ್ಲಿ ಕೆಲವರಿಗೆ ಪುನರ್ವಸತಿ ದೊರಕಿದ್ದು, ಇನ್ನೂ ಅನೇಕರಿಗೆ ಜಿಲ್ಲಾಡಳಿತ ಪುನರ್ವಸತಿ ಒದಗಿಸಬೇಕಾಗಿದೆ.

ದಲಿತ ಚಳುವಳಿಯ ವಿಘಟನೆಗೆ ಅನೇಕ ಕಾರಣಗಳುಂಟು. ಚಳುವಳಿ ಒಳಗಿದ್ದ ಸಮಾಜವಾದಿಗಳು ಮತ್ತು ಕಮ್ಯುನಿಸ್ಟರು ತಮ್ಮ ತಮ್ಮ ಚಿಂತನೆಗಳು ದಿಕ್ಕಿಗೆ ಚಳುವಳಿಯನ್ನು ಕೊಂಡೊಯ್ಯುವ ಆಂತರಿಕ ಪ್ರಯತ್ನ. ದಲಿತ ಬರಹಗಾರರು ಮತ್ತು ಕವಿಗಳ ಮಾಡು ಮತ್ತು ಕ್ರಿಯೆಗೆ ಭಿನ್ನವಾದ ಅಪ್ರಾಮಾಣಿಕ ನಡವಳಿಕೆಗಳು ಮತ್ತು ಈ ಚಳುವಳಿ ಕೇವಲ ಅಸ್ಪೃಶ್ಯರ ನಾಯಕತ್ವದಲ್ಲೇ ಉಳಿದಿದ್ದು ಉಳಿದ ಸ್ಪೃಶ್ಯ ಜನಾಂಗದ ನಾಯಕತ್ವಕ್ಕೆ ವಿಸ್ತರಿಸಲು ವಿಫಲವಾದದ್ದು.

ಹಿಂದುಳಿದ ವರ್ಗಗಳು ತಮ್ಮ ಹಕ್ಕುಗಳಿಗಾಗಿ ರಾಜಕೀಯ ನಾಯಕರನ್ನು ಹಿಂಬಾಲಿಸಿದ್ದು ಅಲ್ಲದೆ ದಲಿತ ಚಳುವಳಿಯಲ್ಲಿ ಬಹುಸಂಖ್ಯಾತ ಅಸ್ಪೃಶ್ಯ ಜಾತಿಗಳಾದ ಎಡಗೈ, ಬಲಗೈಗಳ ನಡುವೆ ನಾಯಕತ್ವಕ್ಕಾಗಿ ನಡೆದ ಆಂತರಿಕ ಪಿತೂರಿ ಹಾಗೂ ವಿದೇಶಿ ವಂತಿಗೆ ಪಡೆದು ದಲಿತ ನಡುವೆ ಕೆಲಸ ಮಾಡುವ ಎನ್.ಜಿ.ಓ.ಗಳು ಮತ್ತು ಚಳುವಳಿ ನೇತಾರರು ಕೈಗೊಂಡ ತಪ್ಪು ರಾಜಕೀಯ ತೀರ್ಮಾನಗಳು ವಿಘಟನೆಗೆ ಪ್ರಮುಖ ಕಾರಣಗಳೆಂದು ಗುರುತಿಸಬಹುದಾಗಿದೆ.

## ೭.೨. ಕಾರ್ಮಿಕ ಚಳವಳಿ

ಕಾರ್ಮಿಕ ಚಳವಳಿಯನ್ನು ಡಾ.ಬಿ.ಆರ್.ಅಂಬೇಡ್ಕರ್ ಅವರ ಕಾಲಘಟ್ಟದಿಂದಲೂ ಗುರುತಿಸಬಹುದು. "ಬಹಿಷ್ಕೃತ ವರ್ಗದ ಸಾವಿರಾರು ಜನರು ಗಿರಣಿಗಳಲ್ಲಿ ಕೆಲಸ ಮಾಡುತ್ತಿದ್ದರು. ನೇಯ್ಗೆ ವಿಭಾಗದಲ್ಲಿ ಅಸ್ಪೃಶ್ಯತೆಯ ಕಾರಣ ಅವರಿಗೆ ಪ್ರವೇಶವಿರಲಿಲ್ಲ. ನೂಲುವ ವಿಭಾಗದಲ್ಲಿ ವೇತನ ಬಹಳ ಕಡಿಮೆ."[೩೨] ಹಲವರು ತಮ್ಮ ಈ ಸ್ಥಿತಿಯನ್ನು ನಿವೇಧಿಸಿಕೊಂಡಿದ್ದರಿಂದ ಡಾ.ಅಂಬೇಡ್ಕರ್ ಅವರು ಈ ಸಮಸ್ಯೆಯನ್ನು ಕೈಗೆತ್ತಿಕೊಂಡು ಬಹಿಷ್ಕೃತ ವರ್ಗದ ಕಾರ್ಮಿಕರ ಪರವಾಗಿ ಚಳವಳಿಯ ಮೂಲಕ ಅವರ ಸಂರಕ್ಷಣೆ ಮಾಡುವಲ್ಲಿ ಭಾಗಿಯಾಗಿದ್ದರು.

ಡಾ.ಬಿ.ಆರ್.ಅಂಬೇಡ್ಕರ್ ಅವರು ಕಾರ್ಮಿಕ ಖಾತೆಯ ಸದಸ್ಯರಾಗಿದ್ದ ಸಂದರ್ಭದಲ್ಲಿ ಕಲ್ಲಿದ್ದಲು ಗಣಿಗಳಲ್ಲಿ ಕಾರ್ಮಿಕರು ಕೆಲಸ ಮಾಡುವ ಪರಿಸ್ಥಿತಿಗಳನ್ನು ಅಭ್ಯಸಿಸಲು ಗಣಿಗಳಿಗೆ ಭೇಟಿ ನೀಡಿದ್ದರು. "ಕಾರ್ಮಿಕರು ಕಲ್ಲಿದ್ದಲನ್ನು ಕತ್ತರಿಸಿ ತೆಗೆಯುವುದನ್ನು ವೀಕ್ಷಿಸಿದರು. ಗಣಿಗಳಲ್ಲಿ ಸ್ತ್ರೀಯರ ನೇಮಕಕ್ಕೆ ಇದ್ದ ನಿಷೇದವನ್ನು ತೆಗೆದಿದ್ದರಿಂದ ಕೆಲ ಮಹಿಳಾ ಕಾರ್ಮಿಕರು ಅಲ್ಲಿ ಕರ್ಯನಿರ್ವಹಿಸುತ್ತಿದ್ದರು. ಆನಂತರ ಗಣಿಯ ಹತ್ತಿರದಲ್ಲೇ ಇರುವ ಮಾಲೀಕರ ಮನೆಗಳಿಗೆ ಭೇಟಿ ನೀಡಿದರು."[೩೩] ಹೀಗೆ ಅಂಬೇಡ್ಕರ್ ಅವರು ಕಾರ್ಮಿಕರ ಸಮಸ್ಯೆಗಳನ್ನು ಹತ್ತಿರದಿಂದ ಗ್ರಹಿಸಿ ಅವರ ಅಭಿವೃದ್ಧಿಗಾಗಿ ಹಲವಾರು ಯೋಜನೆಗಳನ್ನು ಕೈಗೊಂಡರು.

ಭಾರತ ಸರ್ಕಾರದ ಕಾರ್ಮಿಕ ಸದಸ್ಯರಾದ ಡಾ.ಬಿ.ಆರ್.ಅಂಬೇಡ್ಕರ್ ಅವರು ಸ್ಥಾಯಿ ಕಾರ್ಮಿಕ ಸಮಿತಿಯ ಸಭೆಯ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತಾ "ಸರ್ಕಾರವು ಕೇಂದ್ರೀಯ ಕಾಮಗಾರಿ ಇಲಾಖೆಯು ಮಾಡಿಕೊಂಡ ಒಪ್ಪಂದಗಳಿಗೆ ನ್ಯಾಯಯುತವಾದ ಸಂಬಳದ ಕಾಯಿದೆಯನ್ನು ಅನ್ವಯಿಸಲು ನಿರ್ಧರಿಸಿದೆ. ಕಾರ್ಮಿಕ ಸಮಾವೇಶದ ಸರ್ವಸಾಧರಣ ಸಭೆಯಲ್ಲಿ ಅಂಗೀಕೃತವಾದ ನಿರ್ಣಯಕ್ಕನುಸಾರವಾಗಿ, ಭಾರತ ಸರ್ಕಾರವು ಕಾರ್ಮಿಕರ ಸಂಬಳ, ಸಂಪಾದನೆ ಮತ್ತು ಇತರ ಪರಿಸ್ಥಿತಿಗಳನ್ನು ತನಿಖೆ ಮಾಡಲು ಕಾರ್ಮಿಕ ತನಿಖಾ

ಸಮಿತಿಯನ್ನು ನೇಮಕ ಮಾಡಿದೆ"[೩೪] ಎಂದು ಅಧ್ಯಕ್ಷರಾದ ಅಂಬೇಡ್ಕರ್ ಅವರು ಪ್ರಕಟಿಸಿದರು. ಕಲ್ಲಿದ್ದಲ ಗಣಿಗಳ ಭೂಮಿಯೊಳಗೆ ಕೆಲಸ ಮಾಡಲು ಮಹಿಳೆಯರ ನೇಮಕಾತಿ ಮಾಡುವ ಮೇಲೆ ಇರುವ ನಿಷೇಧವನ್ನು ರದ್ದುಪಡಿಸಿದರು. ಕಾರ್ಮಿಕರ ಸ್ಥಿತಿಗತಿಯನ್ನು ಸುಧಾರಿಸುವ ಉದ್ದೇಶದಿಂದ ಕಲ್ಲಿದ್ದಲು ಗಣಿ ಸುರಕ್ಷತೆ(ಸುರಂಗ ಮುಚ್ಚುವ)ತಿದ್ದುಪಡಿ ಮಸೂದೆಯನ್ನು ಜಾರಿಗೆ ತಂದರು. ಉದ್ಯಮಿಗಳು ಕಾರ್ಮಿಕರನ್ನು ಶೋಷಿಸಲು ಬಿಡಬಾರದು ಎಂಬುದನ್ನು ಒತ್ತಿ ಹೇಳಿದರು. ಹೀಗೆ ಅಂಬೇಡ್ಕರ್ ಅವರು ಕಾರ್ಮಿಕ ಖಾತೆಯ ಸದಸ್ಯರಾಗಿದ್ದಾಗ, ಕಾರ್ಮಿಕರ ಸಮಸ್ಯೆಗಳ ಸುಧಾರಣೆಗಾಗಿ ಹಲವಾರು ಕ್ರಮಗಳನ್ನು ಕೈಗೊಂಡರು.

ತುಮಕೂರು ಜಿಲ್ಲೆಗೆ ಸಂಬಂಧಿಸಿದಂತೆ ಹೇಳುವುದಾದರೆ ೧೯೭೪–೭೫ರಲ್ಲಿ ಕಾರ್ಖಾನೆಗಳಲ್ಲಿ ದುಡಿಯುವ ಕಾರ್ಮಿಕರ ಮೇಲೆಮಾಲೀಕರು ದೌರ್ಜನ್ಯ ನಡೆಸುತ್ತಿದ್ದರು. ತುಮಕೂರಿನ ಹೊರ ವಲಯದಲ್ಲಿ ರಾಷ್ಟ್ರೀಯ ಹೆದ್ದಾರಿ ನಾಲ್ಕರಲ್ಲಿ "ಊರುಕೆರೆ ಗ್ರಾಮದ ಬಳಿ ರಾಜ ಬ್ರಿಕ್ಸ್ ಅಂಡ್ ಟೈಲ್ಸ್ ಫ್ಯಾಕ್ಟರಿ ಇದೆ. ಈ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಕಾರ್ಮಿಕರ ಪರಿಸ್ಥಿತಿಗಳು ಕರುಣಾಜನಕವಾಗಿದ್ದವು"[೩೫] ಸಮಸ್ಯೆಗಳ ನಿವಾರಣೆಗಾಗಿ ಚಳವಳಿ ಕೈಗೊಂಡಾಗ, ಕಾರ್ಮಿಕರ ಮೇಲೆ ದೌರ್ಜನ್ಯಗಳಾಗುತ್ತವೆ.

ಇತರ ಹಲವೆಡೆಗಳಲ್ಲಿ ನಡೆದಂತೆ ತುಮಕೂರು ಜಿಲ್ಲೆಯಲ್ಲೂ "ವಿವಿಧ ವಿಭಾಗಗಲಲ್ಲಿ ದುಡಿಯುತ್ತಿರುವ ಕಾರ್ಮಿಕರನ್ನು ಮತ್ತು ಬಡ ರೈತ ವಿಭಾಗಗಳನ್ನು ಸಂಘಟಿಸಿದವರು, ಅವರ ಹೋರಾಟಗಳಿಗೆ ನೇತೃತ್ವ ನೀಡಿ ಹಲವು ಸೌಲಭ್ಯಗಳನ್ನು ಗಳಿಸಿಕೊಳ್ಳಲು ನೆರವಾದವರು ಎಡಪಂಥೀಯರು, ಅದರಲ್ಲೂ ರಷ್ಯಾದಲ್ಲಿ ಕಾರ್ಮಿಕರ ಕ್ರಾಂತಿಗೆ ನೇತೃತ್ವ ನೀಡಿದ ಲೆನಿನ್ ಮತ್ತು ಅವರ ಸೈದ್ಧಾಂತಿಕ ಸ್ಫೂರ್ತಿ ಸೆಲೆಯಾದ ಮಾರ್ಕ್ಸ್‌ವಾದಿಂದ ಪ್ರೇರಿತವಾದವರು"[೩೬] ಎಂದು ಈ ಜಿಲ್ಲೆಯ ಬೆಳವಣಿಗೆಯನ್ನು ಹತ್ತಿರದಿಂದ ನೋಡಿರುವ ಪತ್ರಕರ್ತ ಎಂ.ಎಸ್.ಕೋಟೆ ನಾಗಭೂಷಣ ಅಭಿಪ್ರಾಯ ಪಡುತ್ತಾರೆ. ಮಹಮ್ಮದ್ ದಸ್ತಗೀರ್, ಟಿ.ಆರ್.ರೇವಣ್ಣ, ಕೆ.ಆರ್.ನಾಯಕ್, ಟಿ.ಎಲ್.ತಿಮ್ಮಪ್ಪ, ಕೆ.ವಿ.ಕೃಷ್ಣಸ್ವಾಮಿ, ಹಾಗಲವಾಡಿ ಚೆನ್ನಪ್ಪ, ಪಾವಡಗದ ನಾರಾಯಣರೆಡ್ಡಿ ಮುಂತಾದವರನ್ನು ಅವರು ಹೆಸರಿಸುತ್ತಾರೆ.

೧೯೪೯–೫೦ರ ಯಶಸ್ವಿ ಹೋರಾಟದೊಂದಿಗೆ ಆರಂಭವಾದ ಬೀಡಿ ಕಾರ್ಮಿಕರ ಚಳವಳಿ, ನಂತರ ಬದುಕಿನ ಕನಿಷ್ಟ ಅವಶ್ಯಕತೆಗಳಿಗಾಫಿಯೂ ಹೋರಾಟಕ್ಕಿಳಿಯಬೇಕಾಗಿದ್ದ ಅಂಗನವಾಡಿ ನೌಕರರು ಮತ್ತು ಗ್ರಾಮಪಂಚಾಯಿತಿ ನೌಕರರಿಗೆ ನೇತೃತ್ವ, ದಲಿತರೇ ಹೆಚ್ಚಿರುವ ಪೌರಾಕಾರ್ಮಿಕರು, ಪಿಡಬ್ಲ್ಯೂಡಿ ದಿನಗೂಲಿ ನೌಕರರು, ಇತ್ತೀಚಿನ ವರ್ಷಗಳಲ್ಲಿ ಕಟ್ಟಡ

ಕಾರ್ಮಿಕರು, ಅಕ್ಷರ ದಾಸೋಹ ಮತ್ತು ಆಶಾ ಕಾರ್ಯಕರ್ತೆಯರು, ಹಮಾಲಿ ಕಾರ್ಮಿಕರು, ಗ್ರಂಥಾಲಯ ನೌಕರರು, ಬಡ ರಸ್ತೆಬದಿಯ ವ್ಯಾಪಾರಿಗಳು, ಗ್ಯಾಸ್ ವಿತರಣಾ ಕಾರ್ಮಿಕರು, ಖಾಸಗಿ ವಾಹನ ಚಾಲಕರು ಮುಂತಾದ ಹಲವು ವಿಭಾಗಗಳ ಜನರನ್ನು ಅಲ್ಲದೆ ಜಿಲ್ಲೆಯ ಕೈಗಾರಿಕಾ ರಂಗದಲ್ಲಿ ಕಾಣಿಸಿಕೊಂಡು ಮರೆಯಾದ ಹಲವು ಸಣ್ಣ-ದೊಡ್ಡ ಉದ್ದಿಮೆಗಳಲ್ಲೂ (ಉದಾಹರಣೆಗೆ ಹೆಚ್.ಎಂ.ಟಿ., ಚಾಮುಂಡಿ ಮೋಪೆಡ್ಸ್, ಟಿ.ವಿ.ಎಸ್.ಎಲೆಕ್ಟ್ರಾನಿಕ್ಸ್ ಮುಂತಾದವುಗಳು)ದುಡಿಯುತ್ತಿದ್ದ ಕಾರ್ಮಿಕರನ್ನು ಸಂಘಟಿಸುವ ಪ್ರಯತ್ನಗಳನ್ನು ಮತ್ತು ಹಲವು ಭೂ ಹೋರಾಟಗಳಲ್ಲಿ ಬಡ ರೈತರನ್ನು ಸಂಘಟಿಸುವ ಪ್ರಯತ್ನಗಳನ್ನು ಎಡಪಂಥೀಯ ಸಿದ್ಧಾಂತಗಳಿಂದ ಪ್ರೇರಿತವಾಗಿರುವವರು ಮಾಡಿರುವುದು ಈ ಜಿಲ್ಲೆಯ ಜನ ಇತಿಹಾಸದಲ್ಲಿ ದಾಖಲಾಗಿರುವ ಮೈಲಿಗಲ್ಲುಗಳಾಗಿವೆ.

## ೭.೩. ನಕ್ಸಲ್ ಚಳವಳಿ

ಕರ್ನಾಟಕದಲ್ಲಿ ಶಿವಮೊಗ್ಗ, ಚಿಕ್ಕಮಗಳೂರು ಹಾಗೂ ರಾಯಚೂರು ಮೊದಲಾದ ಜಿಲ್ಲೆಗಳನ್ನು ನಕ್ಸಲ್ ಪ್ರಭಾವಿತ ಜಿಲ್ಲೆಗಳೆಂದು ಗುರುತಿಸಲಾಗುತ್ತದೆ. ತುಮಕೂರು ಜಿಲ್ಲೆಯ ಪಾವಗಡ ತಾಲ್ಲೂಕು ನಕ್ಸಲ್ ಪ್ರಭಾವಿತ ಪ್ರದೇಶವೆಂದು ಗುರುತಿಸಲಾಗುತ್ತದೆ. "ಪಾವಗಡ ತಾಲ್ಲೂಕು ನಕ್ಸಲ್ ಪ್ರಭಾವಿತ ಪ್ರದೇಶವಾಗಲು ಮುಖ್ಯ ಕಾರಣ, ಆಂಧ್ರ ಪ್ರದೇಶದ ನಕ್ಸಲ್‌ಕೋಟಾ ಎಂಬ ಹಳ್ಳಿಗೆ ಕೂಗಳತೆ ದೂರದಲ್ಲಿದೆ. ಕುಖ್ಯಾತ ನಕ್ಸಲೀಯನೆಂಬ ಹಣೆಪಟ್ಟಿಕಟ್ಟಿಕೊಂಡ ಎಟ್ಟಿ ಮುತ್ಯಾಲಪ್ಪ ತುಮಕೂರಿಗೆ ಬರುವುದರ ಮೂಲಕ ನಕ್ಸಲ್ ಚಳವಳಿ ತುಮಕೂರು ಜಿಲ್ಲೆಯಲ್ಲಿ ಪ್ರಾರಂಭವಾಯಿತು."[೩೭] ಡಾ.ಚಿನ್ನಸ್ವಾಮಿ ಸೋಸಲೆ ಅವರು ನಕ್ಸ್ ಚಳವಳಿಯನ್ನು ಮಾನವ ಹಕ್ಕುಗಳ ಚಳವಳಿ ಎಂದು ಕರೆದಿದ್ದಾರೆ. ನಕ್ಸಲೀಯರು ಮಾನವ ಹಕ್ಕುಗಳ ಉಲ್ಲಂಘನೆಯಾದಾಗ, ಶೋಷಣೆಗೆ ಒಳಗಾದ ತಳಸಮುದಾಯಗಳ ಪರವಾಗಿ ಹೋರಾಟ ಮಾಡಿರುವುದನ್ನು ಗುರುತಿಸಲಾಗಿದೆ. ಪಾವಗಡ ತಾಲ್ಲೂಕಿನ ಸೂಲನಾಯಕಹಳ್ಳಿಯಲ್ಲಿ ಭೂಮಾಲೀಕನಿಂದ ತಳಸಮುದಾಯಗಳು ಶೋಷಣೆಗೆ ಒಳಗಾದವು. ತಳಸಮುದಾಯಗಳ ಪರವಾಗಿ ನಿಂತು, ಅವರ ಹಕ್ಕುಗಳಿಗಾಗಿ ಹೋರಾಟ ಮಾಡಿದವರು ನಕ್ಸಲ್‌ರು ಎಂಬುದು ಗಮನಾರ್ಹ. ಈ ವಿಷಯಕ್ಕೆ ಸಂಬಂಧಿಸಿದಂತೆ ಭೂಮಿಯ ಪ್ರಶ್ನೆಗಳು ಎಂಬ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಡಾ.ಬಿ.ಆರ್.ಅಂಬೇಡ್ಕರ್ ಅವರ ಶಿಕ್ಷಣ, ಸಂಘಟನೆ ಹೋರಾಟ ಎಂಬ ಮೂಲಮಂತ್ರ ಗಳಂತೆ ತಳಸಮುದಾಯಗಳು ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ತಮ್ಮ ಹಕ್ಕುಗಳಿಗಾಗಿ ಹೋರಾಟ ಮಾಡಿದರು.

**ಕೊನೆ ಟಿಪ್ಪಣಿಗಳು**

೧. ಬಂದಕುಂಟೆ ನಾಗರಾಜಯ್ಯ(ಲೇ), **ತುಮಕೂರು ಜಿಲ್ಲೆಯ ದಲಿತ ಚಳವಳಿ**, ಪು.೨೮೬.

೨. ಬಂದಕುಂಟೆ ನಾಗರಾಜಯ್ಯ, ೨೦೧೫, **ಬಿತ್ತನೆ ಬೀಜ ಅನುಭವ ಕಥನ**, ಅನಿಕೇತನ ಪ್ರಕಾಶನ, ತುಮಕೂರು, ಪು.೬೬

೩. ಅದೇ,

೪. ಬಂದಕುಂಟೆ ನಾಗರಾಜಯ್ಯ(ಲೇ), **ತುಮಕೂರು ಜಿಲ್ಲೆಯ ದಲಿತ ಚಳವಳಿ**, ಪು.೨೮೭.

೫. ಕುಂದೂರು ತಿಮ್ಮಯ್ಯ, ದಲಿತ ಸಂಘರ್ಷ ಸಮಿತಿ ಜಿಲ್ಲಾ ಸಂಚಾಲಕ.

೬. ಅದೇ,

೭. ಅದೇ,

೮. ಅದೇ, .

೯. ಬಡವರ ಅನ್ನಕ್ಕೆ ಕಲ್ಲು ಹಾಕಿದವರು, ೧೯೭೪–೭೫, ಕರಪತ್ರ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ತಿಪಟೂರು.

೧೦. ಕುಡಿತದಿಂದ ಜೀವಕ್ಕೆ ಆಪತ್ತು, ೧೯೮೧, ಕರಪತ್ರ, ತುಮಕೂರು.

೧೧. ದಲಿತ ಮಹಿಳೆಯರ ಬೆಂಬಲ, ೧೯೮೨, ಕರಪತ್ರ, ಕರ್ನಾಟಕ ದಲಿತ ಮಹಿಳಾ ಒಕ್ಕೂಟ, ತುಮಕೂರು.

೧೨. ದಲಿತರ ದರಖಾಸ್ತು ಭೂಮಿ ಮೇಲೆ ಹೈಕೋರ್ಟ್ ನೀಡಿರುವ ತೀರ್ಪು ಜಾರಿಗೆ ಬರಲಿ, ೧೯೮೨, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಕರಪತ್ರ.

೧೩. ಅದೇ,

೧೪. ಗೂಳೂರು ಮತ್ತು ಹೊನ್ನೇನಹಳ್ಳಿ ದಲಿತರಿಗೆ ಭೂಮಿ ಸಿಗಲಿ, ೧೯೮೨, ಕರಪತ್ರ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಜಿಲ್ಲಾ ಶಾಖೆ, ತುಮಕೂರು.

೧೫. ಅದೇ, ಪು.

೧೬. ಅದೇ, ಪು.

೧೭. ಬಂದಕುಂಟೆ ನಾಗರಾಜ್, ದಲಿತ ಸಂಘರ್ಷ ಸಮಿತಿ ಕಾರ್ಯಕರ್ತ, ತುಮಕೂರು.

೧೮. ಕಂಬಾಲಪಲ್ಲಿ ದಲಿತರ ಸಜೀವ ದಹನ ವಿರೋಧಿಸಿ ಪ್ರತಿಭಟನಾ ಮೆರವಣಿಗೆ, ೨೦೦೦, ಕರಪತ್ರ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಜಿಲ್ಲಾ ಶಾಖೆ, ತುಮಕೂರು, ವಿಭಾಗ ಶಾಖೆ, ತಿಪಟೂರು.

೧೯. ಧರಣಿ ಸತ್ಯಾಗ್ರಹ, ೨೦೦೦, ಕರಪತ್ರ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ತಾಲ್ಲೂಕು ಶಾಖೆ, ತಿಪಟೂರು.

೨೦. ಧರಣಿ ಸತ್ಯಾಗ್ರಹ, ೨೦೦೧, ಕರಪತ್ರ, ಕರ್ನಾಟಕ ದಲಿತ ಸಂಘರ್ಷ ಸಮಿತಿ, ಜಿಲ್ಲಾ ಶಾಖೆ, ತುಮಕೂರು.

೨೧. ಅದೇ, ಪು.

೨೨. ಜಾತಿವಾರು ಜನಗಣತಿಗೆ ಜಾಗೃತಿ ನಡಿಗೆ, ೨೦೦೯, ಹಿಂದುಳಿದ ವರ್ಗಗಳ ಜಾಗೃತಿ ವೇದಿಕೆ, ಚಿಕ್ಕನಾಯಕನಹಳ್ಳಿ, ತುಮಕೂರು ಜಿಲ್ಲೆ.

೨೩. ದಲಿತರ ಹಕ್ಕುಗಳ ಜಾರಿಗಾಗಿ ಆಗ್ರಹಿಸಿ ಮುಖ್ಯಮಂತ್ರಿಗಳ ಗೃಹ ಕಛೇರಿ ಮುಂದೆ ಪ್ರತಿಭಟನಾ ಧರಣಿ.

೨೪. ಅದೇ,

೨೫. ಬಂದಕುಂಟೆ ನಾಗರಾಯ್ಯ, ೨೦೧೫, **ಬಿತ್ತನೆ ಬೀಜ ಅನುಭವ ಕಥನ**, ಅನಿಕೇತನ ಪ್ರಕಾಶನ, ತುಮಕೂರು, ಪು.೭೨

೨೬. ಅದೇ, ಪು.೭೩

೨೭. ಅದೇ, ಪು.೭೫

೨೮. ಅದೇ, ಪು.೭೬

೨೯. ಅದೇ, ಪು.೭೮

೩೦. ಅದೇ, ಪು.೭೯

೩೧. ಅದೇ, ಪು.೮೬

೩೨. **ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು, ಸಂಪುಟ ೨೨**, ೨೦೧೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೭೭

೩೩. **ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು, ಸಂಪುಟ ೮,** ೨೦೧೫, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಹಾಗೂ ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು, ಪು.೧೦೭

೩೪. ಅದೇ, ಪು.೧೧೧

೩೫. ಬಂದಕುಂಟೆ ನಾಗರಾಯ್ಯ, ೨೦೧೫, **ಬಿತ್ತನೆ ಬೀಜ ಅನುಭವ ಕಥನ,** ಅನಿಕೇತನ ಪ್ರಕಾಶನ, ತುಮಕೂರು, ಪು.೪೧

೩೬. **ತುಮಕೂರು ಜಿಲ್ಲೆಯ ದುಡಿಯುವ ಜನರ ಸಂಘಟನೆಯಲ್ಲಿ ಎಡಪಂಥೀಯರು,** ಜನಶಕ್ತಿ ಗ್ಯಾಲರಿ, ಕನ್ನಡ ವಾರಪತ್ರಿಕೆ ಆಗಸ್ಟ್ ೨೦೧೬

೩೭. ಸುಬ್ಬರಾಯಪ್ಪ, ದಲಿತ ಸಂಘರ್ಷ ಸಮಿತಿ ಕಾರ್ಯಕರ್ತರು, ಪಾವಗಡ

# ಅಧ್ಯಾಯ ಎಂಟು

# ಪೌರಕಾರ್ಮಿಕರು

೮.೧. ಜಾಡಮಾಲಿ ಪದದ ಅರ್ಥ
೮.೨. ಮಲ ಬಾಚುವ ಪದ್ಧತಿ ಜೀವಂತ
೮.೩. ಮಹಿಳಾ ಪೌರಕಾರ್ಮಿಕರು
೮.೪. ಸ್ವಚ್ಛತಾ ಅಭಿಯಾನ
೮.೫. ಆರೋಗ್ಯ
೮.೬. ಮಲ ಹೊರುವ ಪದ್ಧತಿ ನಿಷೇಧ ಕಾನೂನು

## ಅಧ್ಯಾಯ: ಎಂಟು

# ಪೌರಕಾರ್ಮಿಕರು

ಪ್ರತಿದಿನ ಪ್ರತಿಯೊಂದು ನಗರದಲ್ಲಿ ಸೂರ್ಯ ಹುಟ್ಟುವ ಮೊದಲೇ ಗುತ್ತಿಗೆ ಪೌರಕಾರ್ಮಿಕರು ತಮ್ಮ ಕುಟುಂಬ, ಮನೆಗಳನ್ನು ಬಿಟ್ಟು ರಸ್ತೆಯ ಕಸ ಗುಡಿಸುವ ಮತ್ತು ಕೊಳಕನ್ನು ತೆಗೆಯುವ ಕಾರ್ಯದಲ್ಲಿ ತೊಡಗುತ್ತಾರೆ. ಜಾಡಮಾಲಿಗಳು, ಭಂಗಿ, ಮೇಥಾರ್ ಎಂದು ಕರೆಯುವವರೆಲ್ಲಾ ಮೂಲದಲ್ಲಿ ಈ ರಾಷ್ಟ್ರದ ಮೂಲನಿವಾಸಿಗಳು. ದೇಶದಾದ್ಯಂತ ಇರುವ ಬೃಹತ್ ಮಹಾನಗರ ಪಾಲಿಕೆಗಳಲ್ಲಿ ನಾಗರಿಕ ಸೇವೆಗಳಾದ ಬೀದಿ ಗುಡಿಸುವುದು, ಒಳಚರಂಡಿಗಳನ್ನು ಸ್ವಚ್ಛ ಮಾಡುವುದು, ಕೊಳಚೆಯನ್ನು ಬಾಚುವುದು, ಶೌಚಾಲಯಗಳನ್ನು ಶುದ್ಧಗೊಳಿಸುವುದು, ಸತ್ತ ಪ್ರಾಣಿಗಳನ್ನು ಊರಿನಿಂದ ಹೊರಗೆ ಸಾಗಿಸುವ ವೃತ್ತಿಯನ್ನು ಪೌರಕಾರ್ಮಿಕರು ಮಾಡುತ್ತಾ ಬರುತ್ತಿದ್ದಾರೆ. ಈ ಸಾಮಾಜಿಕ ಸೇವೆಯಿಂದ ಸಮಾಜದಲ್ಲಿ ಒಳ್ಳೆಯ ವೃತ್ತಿಗೌರವವನ್ನು ಎಂದಿಗೂ ಪೌರಕಾರ್ಮಿಕರು ಪಡೆಯಲು ಸಾಧ್ಯವಾಗಿಲ್ಲ.

"ತಮಿಳುನಾಡಿನಲ್ಲಿ ಆರುಂಧತಿಯಾರ್, ಕರ್ನಾಟಕ ಮತ್ತು ಆಂಧ್ರದಲ್ಲಿ ಮಾದಿಗರು, ರಾಜಸ್ಥಾನ ಮತ್ತು ಗುಜರಾತ್‌ನಲ್ಲಿ ಮೇಥಾರ್ ಅಥವಾ ಭಂಗಿಗಳು, ಉತ್ತರ ಪ್ರದೇಶದಲ್ಲಿ ಬಲ್ಮೀಕಿ ಅಥವಾ ಭಂಗಿ, ಮಹಾರಾಷ್ಟ್ರದಲ್ಲಿ ರೋಹಿದಾಸ್ ಇವರೆಲ್ಲಾ ಮೂಲದಲ್ಲಿ ಅಸ್ಪೃಶ್ಯ ಜಾತಿಯವರಾದ ಚಮ್ಮಾರ ಜಾತಿಗೆ ಸೇರಿದವರಾಗಿದ್ದು, ಈ ಸಮುದಾಯಗಳೇ ಪೌರಕಾರ್ಮಿಕ ವೃತ್ತಿಯಲ್ಲಿ ತೊಡಗಿಕೊಂಡಿವೆ"[೧] ಎಂದು ಹೆಚ್.ಮಾರುತಿ ಅವರು ಹೇಳಿದ್ದಾರೆ. "ಚಮ್ಮಾರರು ಆರ್ಯರ ಮೂಲದವರೆಂದು ಗುರುತಿಸಲಾಗುತ್ತದೆ. 'ಉತ್ತರಧ್ರುವ ಪ್ರದೇಶ'ದಿಂದ ಹೊರಟು ಕ್ರಮೇಣ ಭಾರತದತ್ತ ಬಂದ ಆರ್ಯರೊಡನೆ ಚಮ್ಮಾರರೂ ಇದ್ದು, ಅವರಂತೆಯೇ ಗೌರವವರ್ಣದವರಾಗಿದ್ದರು. ಮುಖ್ಯವಾಗಿ ತಮ್ಮ ಬೌದ್ಧಿಕ ದೃಢತೆ ಮತ್ತು ದೈಹಿಕ ಚಹರೆಗಳಿಂದಾಗಿ ಇತರ ಅಸ್ಪೃಶ್ಯ ವರ್ಗದವರಷ್ಟು ನಿಕೃಷ್ಟ ಸ್ಥಾನಮಾನ ಹೊಂದಿರದವರು; ಈ ಕಾರಣಕ್ಕಾಗಿಯೇ

ಇತಿಹಾಸದಲ್ಲಿ ಅವರು ಕೆಲವು ಪ್ರತಿಷ್ಠಿತ ಸ್ಥಾನಮಾನಗಳನ್ನು ಹೊಂದಿದ್ದು, ಶಿಷ್ಟವರ್ಗದವರಿಗೆ ತಕ್ಕಮಟ್ಟಿಗೆ ಪ್ರಿಯರಾಗಿದ್ದರು"[೨] ಎಂದು ಲಕ್ಷ್ಮಣ್ ತೆಲಗಾವಿ ಅವರು ಅಭಿಪ್ರಾಯಾಪಡುತ್ತಾರೆ. ಮೇಲ್ಕಂಡ ಹೇಳಿಕೆಗಳನ್ನು ಗಮನಿಸಿದಾಗ ಚಮ್ಮಾರರು ಆರ್ಯರ ಮೂಲದವರೆಂದೂ, ಪೌರಕಾರ್ಮಿಕ ವೃತ್ತಿಯಲ್ಲಿ ತೊಡಗಿಕೊಂಡಿರುವ ಮಾದಿಗ, ಭಂಗಿ, ಮೇಥಾರ್ ಹಾಗೂ ರೋಹಿದಾಸ್ ಈ ಸಮುದಾಯಗಳು ಈ ರಾಷ್ಟ್ರದ ಮೂಲನಿವಾಸಿಗಳೆಂದು ತಿಳಿದುಬರುತ್ತದೆ.

ಮಲವನ್ನು ಬೇರೊಬ್ಬರ ಕೈಯಿಂದ ತೆಗೆದು ಹಾಕಿಸುವುದು ಮಾನಸಿಕ ಹಿಂಸೆಗೆ ಎಡೆಮಾಡುತ್ತದೆ. ನಗರಗಳು ಬೃಹತ್ ಆಗಿ ನಾಯಿಕೊಡೆಯಂತೆ ಬೆಳೆಯುತ್ತಿರುವ ಈ ದಿನಗಳಲ್ಲಿ ಜೀವನೋಪಾಯಕ್ಕಾಗಿ ಮಲ ಬಾಚುವ ಕೆಟ್ಟ ಅಸಹಜ ವೃತ್ತಿಗಳನ್ನು ಇಂದಿಗೂ ಈ ದೇಶದ ತಳಸಮುದಾಯಗಳು ಮಾಡುತ್ತಾ ಬರುತ್ತಿವೆ.

ಸ್ವಚ್ಛತೆ ಮತ್ತು ನೈರ್ಮಲ್ಯ ವ್ಯವಸ್ಥೆಗೆ ಸಂಬಂಧಪಟ್ಟಂತೆ ಪ್ರಾಚೀನ ಭಾರತವನ್ನು ಗಮನಿಸುವುದಾದರೆ ಜನಸಂಖ್ಯೆ ಬೆಳೆದಂತೆಲ್ಲಾ ದೊಡ್ಡ ನಗರಗಳು ಬೆಳೆದವು. ಅದರಡಿಯಲ್ಲಿಯೇ ಅಲ್ಲಿ ಉದ್ಭವಿಸಿದ ಸಮಸ್ಯೆಗಳನ್ನು ಸುಧಾರಿಸುವುದು ಕಷ್ಟವಾಯಿತು. ಈ ನಗರಗಳ ಧೂಳು, ಕಸ, ಮಲ, ಮೂತ್ರ ಎಲ್ಲವನ್ನು ತೆಗೆಯುವ, ಶುಚಿಗೊಳಿಸುವ, ಹೊರುವ ಕೆಲಸ ತುಂಬಾ ಕಷ್ಟವಾಯಿತು. ಭಾರತದಲ್ಲಿನ ಪ್ರಬಲ ಸಮುದಾಯಗಳು ಇಂತಹ ಕೆಲಸದಲ್ಲಿ ತೊಡಗುವುದು ಪಾಪ, ಅಪರಾಧ ಎಂಬ ಮಿಥ್‌ನ್ನು ಸೃಷ್ಟಿಸಿದವು. ನಂತರದ ಕಾಲದಲ್ಲಿ ಅವುಗಳನ್ನು ಗಾಢಗೊಳಿಸುತ್ತಾ ಬರಲಾಯಿತು. "ಚಾರಿತ್ರಿಕವಾಗಿ ಭೂಮಿ ಮತ್ತು ಇತರೆ ಸಂಪನ್ಮೂಲಗಳಿಂದ ತಳಸಮುದಾಯಗಳನ್ನು ದೂರವಿಟ್ಟ ಜಾತಿ ಕಾನೂನು, ಅದೇ ಕಾನೂನಿಂದ ಅವರು ಸಮಾಜದ ಸ್ವಚ್ಛತೆಯ ಜವಾಬ್ದಾರಿ ಹೊರುವಂತೆ ಮಾಡಿದ್ದರಿಂದ ಅವರು ಕೊಳಕು ಹೊರುವಂಥ ಅವಹೇಳನಕಾರಿ ಕೆಲಸವನ್ನು ಒತ್ತಾಯಪೂರ್ವಕವಾಗಿ ನಿರ್ವಹಿಸಲಾಯಿತು."[೩] ಅವರು ಆ ಕೆಲಸವನ್ನು ಮಾಡುವುದು ನೈಸರ್ಗಿಕವಾದುದು ಹಾಗೂ ಅದು ಅವರ ಕರ್ತವ್ಯ ಎಂದು ನಂಬಿಸಲಾಯಿತು. ಈ ತಳಸಮುದಾಯಗಳು ತಮ್ಮ ಸಾಮಾಜಿಕ ಮತ್ತು ಆರ್ಥಿಕ ದುಸ್ಥಿತಿಯ ಕಾರಣದಿಂದಾಗಿ ಜಾಡಮಾಲಿ ಕೆಲಸದಲ್ಲಿ ತೊಡಗಿ ಮೇಲ್ಜಾತಿಯ ಚಿಂತನೆಗಳನ್ನು ಸರಿ ಎಂದು ಒಪ್ಪಿಕೊಂಡವು. ಅವರ ಚಿಂತನೆಗಳಿಗೆ ತಕ್ಕಂತೆ ನಡೆದುಕೊಂಡವು.

ಇತಿಹಾಸಕಾರರಾದ ಎನ್.ಚಿನ್ನಸ್ವಾಮಿ ಸೋಸಲೆ ಅವರು ಅಸ್ಪೃಶ್ಯರಿಗೆ ಅಸ್ಪೃಶ್ಯತೆ ಅನ್ನುವುದು ಯಾಕೆ ಬಂತು ಎಂಬುದರ ಬಗ್ಗೆ 'ಭಾರತೀಯ ಸಮಾಜ ಮತ್ತು ದಲಿತರು' ಕೃತಿಯಲ್ಲಿ ಚರ್ಚಿಸಿದ್ದಾರೆ. ಅವರ ಪ್ರಕಾರ "ಅಶುಚಿಯೂ ಮಲೀನಕಾರಕವೂ ಆದ ವೃತ್ತಿಗಳನ್ನು ನಡೆಸುವವರು ಇದರಲ್ಲಿ ಸೇರುತ್ತಾರೆ. ಅಶುದ್ಧವೂ, ಮಲೀನವೂ ಆದ ವೃತ್ತಿಯೂ ಜಾತಿಯನ್ನು ಕೆಳ

ನೂಕುತ್ತದೆ. ತೊಗಲು ಹದ ಮಾಡುವುದು ಅಥವಾ ಮಲ ಎತ್ತಿಹಾಕಿ ಶುಚಿಗೊಳಿಸುವುದು 'ಅಶುದ್ಧ ಮತ್ತು ಮಲೀನ' ಈ ವೃತ್ತಿಗಳನ್ನು ನಿರ್ವಹಿಸುವವವರದು ಕೆಳಜಾತಿ."[೪] ಅಸ್ಪೃಶ್ಯತೆ ಅನ್ನುವುದು ವೃತ್ತಿಗಳ ಆಧಾರದ ಮೇಲೆ ನಿರ್ಧಾರವಾಗುತ್ತದೆಂಬುದನ್ನು ಗಮನಿಸಬಹುದಾಗಿದೆ.

ವೇದಗಳ ಕಾಲದಲ್ಲಿ ತಳಸಮುದಾಯಗಳು ಯಾವ ಯಾವ ವೃತ್ತಿಗಳನ್ನು ಮಾಡುತ್ತಾ ಇದ್ದರು ಎಂಬುದರ ಬಗ್ಗೆ ತಿಳಿಯುವುದಾದರೆ ಆರ್.ಎಸ್.ಶರ್ಮಾ ಅವರ ಪ್ರಕಾರ 'ಪ್ರಾಯಶಃ ಪಶು, ಪಕ್ಷಿಗಳನ್ನು ಬೇಟೆಯಾಡುತ್ತಿದ್ದ ಚಾಂಡಾಲರನ್ನು ಪಶುಗಳ, ಮನುಷ್ಯರ ಹೆಣ ಒಪ್ಪ ಮಾಡಲು ಕರೆಯುತ್ತಿದ್ದರು. ಈ ಕೆಲಸ ಮಾಡುವ ಪಣರನ್ನು ಚಂಡಾಲರೆಂದು ಕರೆಯುತ್ತಿದ್ದರು. ಒಂದು ಜಾತಕದಲ್ಲಿ ಸೂಚಿತವಾಗಿರುವಂತೆ ಅವರನ್ನು ಬೀದಿ ಗುಡಿಸಲೂ ನೇಮಿಸುತ್ತಿದ್ದರು."[೫] ಉಷನಸ್ ಪ್ರಕಾರ "ಚಂಡಾಲ ಕಸ ಗುಡಿಸಲಿಕ್ಕೆ ಊರೊಳಕ್ಕೆ ಬೆಳಿಗ್ಗೆ ಮಾತ್ರ ಬರಬೇಕು. ಕೊರಳಲ್ಲಿ ಒಂದು ಮಣ್ಣಿನ ಮಡಕೆ ಕಟ್ಟಿಕೊಂಡಿರಬೇಕು'. (ಮಡಕೆಯಲ್ಲಿ ಮಾತ್ರ ಅವರು ಉಗುಳಬೇಕು. ಅವರ ಉಗುಳು ರಸ್ತೆಯಲ್ಲಿ ಬಿದ್ದು ಉತ್ತಮರು ತುಳಿದರೆ ಮೈಲಿಗೆಯಾದೀತೆಂಬ ಭಯ) ನಾರದನ ಪ್ರಕಾರ ವೃತ್ತಿಗಳಲ್ಲಿ ಶುದ್ಧ ಮತ್ತು ಅಶುದ್ಧ ಎಂಬ ಭೇದಗಳಿದ್ದು, ಅಶುದ್ಧ ವೃತ್ತಿಗಳು ಈ ಕೆಳಗಿನಂತಿದ್ದವು. ದಾರಿ ಗುಡಿಸುವುದು, ಯಜಮಾನನ ಮೈ ಒತ್ತುವುದು, ಎಂಜಲೆಲೆ ಹೊತ್ತು ಹಾಕುವುದು, ಉಚ್ಚೆ, ಮಲ ಬಳಿಯುವುದು."[೬] ಪ್ರಾಚೀನ ಕಾಲಘಟ್ಟದಿಂದಲೂ ತಳಸಮುದಾಯಗಳು ಈ ವೃತ್ತಿಗಳನ್ನು ಮಾಡುತ್ತಾ ಬಂದಿರುವುದನ್ನು ಮೇಲ್ಕಂಡ ಹೇಳಿಕೆಗಳಿಂದ ಗಮನಿಸಬಹುದಾಗಿದೆ.

ಮಧ್ಯಕಾಲೀನ ಇತಿಹಾಸಕ್ಕೆ ಬಂದರೆ ಹನ್ನೊಂದನೇ ಶತಮಾನದ ಅಲ್ಬೆರೂನಿ ಎಂಬ ಪ್ರವಾಸಿ "ಯಾವ ಜಾತಿಗೂ ಸೇರದ ಎರಡು ಗುಂಪುಗಳ ಹೆಸರು ಹೇಳುತ್ತಾನೆ. ಅಂತ್ಯಜರು ಐದನೆಯ ಗುಂಪಿನವರು : ಮೇದರು, ಬೆಸ್ತರು, ಬೇಡರು ಇತ್ಯಾದಿ. ಆರನೆಯ ಗುಂಪಿನವರು: ದೊಂಬ, ಚಂಡಾಲ, ಇವರು ಊರನ್ನು ಶುದ್ಧಿಗೊಳಿಸುವರು."[೭] ಮಧ್ಯಕಾಲೀನ ಇತಿಹಾಸದಲ್ಲೂ ತಳಸಮುದಾಯಗಳು ಈ ವೃತ್ತಿಗಳನ್ನು ಮುಂದುವರೆಸಿಕೊಂಡು ಬಂದರು ಎಂಬುದಕ್ಕೆ ಮೇಲ್ಕಂಡ ಹೇಳಿಕೆ ಆಧಾರವನ್ನು ಒದಗಿಸುತ್ತದೆ. ವಸಾಹತುಶಾಹಿ ಕಾಲಘಟ್ಟದಲ್ಲಿ ಬ್ರಿಟೀಷರು ಭಾರತಕ್ಕೆ ಬಂದ ನಂತರದಲ್ಲಿ ಅವರು ಜಾರಿಗೆ ತಂದ ನಗರ ಸ್ಥಳೀಯ ಸರ್ಕಾರಗಳ ವ್ಯವಸ್ಥೆಯು ಕಡ್ಡಾಯ ಕಾರ್ಯವಾಗಿ ಘನ ತ್ಯಾಜ್ಯ ಸಂಗ್ರಹಿಸುವುದು ಪ್ರಾಥಮಿಕ ಕರ್ತವ್ಯವಾಗಿತ್ತು. "ಬ್ರಿಟೀಷರು ಒಣ ಶೌಚಾಲಯಗಳನ್ನು ಅವರ ಕಟ್ಟಡಗಳು, ಕಂಟೋನ್ಮೆಂಟುಗಳು, ರೈಲ್ವೆ ನಿಲ್ದಾಣಗಳು, ಮುನಿಸಿಪಾಲಿಟಿಗಳು, ಸೇನಾ ನೆಲೆಗಳು, ನ್ಯಾಯಾಲಯಗಳು, ಕೈಗಾರಿಕೆ, ಗಣಿಗಾರಿಕೆ ಮತ್ತು ನಗರಗಳಲ್ಲಿ ಅಳವಡಿಸಿದರು."[೮] ಇದರ ಜೊತೆಗೆ ಒಳಚರಂಡಿ ವ್ಯವಸ್ಥೆಯು ಪ್ರಾರಂಭವಾಯಿತು.

ಬ್ರಿಟೀಷರ ಸಾರ್ವಜನಿಕ ಸೇವೆಗಳನ್ನು ಕುರಿತು ಬಿಪಿನ್‌ಚಂದ್ರ ಅವರು ಈ ರೀತಿ ಹೇಳಿದ್ದಾರೆ. "ಒಳಚರಂಡಿ ವ್ಯವಸ್ಥೆ, ನೀರು ಸರಬರಾಜು ಮತ್ತು ಸಾರ್ವಜನಿಕ ಆರೋಗ್ಯ ಇತ್ಯಾದಿ ಸೇವೆಗಳನ್ನು ಒದಗಿಸುವ ನಿಟ್ಟಿನಲ್ಲಿ ತೆಗೆದುಕೊಳ್ಳಲಾದ ಕೆಲವು ಕ್ರಮಗಳು ಸಾಮಾನ್ಯವಾಗಿ ನಗರ ಪ್ರದೇಶ, ಅಧಿಕಾರಿಗಳು ಅದರಲ್ಲೂ ಬ್ರಿಟೀಷ್ ಅಧಿಕಾರಿಗಳು ವಾಸಿಸುತ್ತಿದ್ದ ಅಥವಾ ನಗರದ ಆಧುನಿಕ ಭಾಗಗಳಿಗೆ ಮಾತ್ರ ಸೀಮಿತವಾಗಿರುತ್ತಿದ್ದವು. ಈ ಅನುಕೂಲಗಳು ಮುಖ್ಯವಾಗಿ ಯುರೋಪಿಯನ್ನರು ಮತ್ತು ಕೈ ಬೆರಳುಗಳಲ್ಲಿ ಎಣಿಸಬಹುದಾದಷ್ಟು ಮೇಲ್ವರ್ಗದ ಭಾರತೀಯರು ವಾಸವಾಗಿರುತ್ತಿದ್ದ ನಗರದ ಯುರೋಪಿಯನ್ ಭಾಗಗಳಿಗೆ ಮಾತ್ರ ಲಭಿಸುತ್ತಿದ್ದವು"[೯] ಈ ರೀತಿಯಾಗಿ ವಸಾಹತುಶಾಹಿ ಕಾಲಘಟ್ಟದಲ್ಲಿ ತಳಸಮುದಾಯಗಳು ತಮ್ಮ ವೃತ್ತಿಗಳನ್ನು ಮುಂದುವರೆಸಿಕೊಂಡು ಬಂದರು ಎಂಬುದನ್ನು ಗಮನಿಸಬಹುದಾಗಿದೆ.

"ತಳಸಮುದಾಯಗಳು ಕೊಳಕು ಎಂದು ಪರಿಗಣಿಸಲಾದ ಕಸ ಗುಡಿಸುವ, ಪಾದರಕ್ಷೆ ಮಾಡುವ, ಶವಗಳನ್ನು ಸಾಗಿಸುವ, ಸತ್ತ ಪ್ರಾಣಿಗಳ ಚರ್ಮ ಸುಲಿಯುವ, ಚರ್ಮವನ್ನು ಹದ ಮಾಡುವ ವೃತ್ತಿಗಳನ್ನು ಬಲವಂತವಾಗಿ ಮಾಡಬೇಕಾಗುತ್ತಿತ್ತು. ಸಾಮಾನ್ಯವಾಗಿ ಅವರಿಗೆ ಭೂಮಿಯ ಒಡೆತನವನ್ನು ನಿರಾಕರಿಸಲಾಗಿತ್ತು. ಗೇಣಿದಾರರಾಗಿ ಮತ್ತು ಕೃಷಿಕಾರ್ಮಿಕರಾಗಿ ಮಾತ್ರ ದುಡಿಯಬಹುದಿತ್ತು."[೧೦] "ಮುನಿಸಿಪಲ್ ಕಾಯಿಲೆ ೧೯೧೧ ಮತ್ತು ಯುನೈಟೆಡ್ ಪ್ರಾಂತ್ಯ ಪುರಸಭೆಗಳ ಕಾಯಿದೆ ೧೯೧೬ರಲ್ಲಿ ಯಾರು ಸ್ವಚ್ಛತಾ ಕಾರ್ಯದಲ್ಲಿ ತೊಡಗಿರುತ್ತಾರೋ ಅವರು ತಮಗೆ ನಿರ್ದಿಷ್ಟಗೊಳಿಸಿದ ಕೆಲಸವನ್ನು ಪೂರ್ಣಗೊಳಿಸದೇ ಇದ್ದರೆ ೧೦ ರೂ.ಗಳ ದಂಡ ವಿಧಿಸಲಾಗುತ್ತಿತ್ತು. ಮಲ ಹೊರುವುದು ಮತ್ತು ಕಸ ಗುಡಿಸುವುದನ್ನು ಸರಿಯಾಗಿ ಕಾರ್ಯನಿರ್ವಹಿಸದಿದ್ದಲ್ಲಿ ಕಟ್ಟಡದ ಮಾಲೀಕರು ಅಥವಾ ವಾಸಿಸುವ ಜನರು ದೂರು ಸಲ್ಲಿಸಬಹುದಿತ್ತು."[೧೧] ಹೆಚ್ಚಿನ ಜನ ದಲಿತರು ಈ ವೃತ್ತಿಗೆ ಸೇರಿದವರಾಗಿದ್ದರು. ಈ ವ್ಯವಸ್ಥೆಯನ್ನು ಬ್ರಿಟೀಷರು ಜಾರಿಗೆ ತಂದರು. ಈ ವ್ಯವಸ್ಥೆ ಬ್ರಿಟೀಷರಿಂದ ಭಾರತೀಯರಿಗೆ ವರ್ಗಾವಣೆಯಾದ ನಂತರದಲ್ಲಿ ಪೌರಕಾರ್ಮಿಕರಾಗಿ ಆ ರೀತಿಯ ಕಾರ್ಯಗಳಲ್ಲಿ ತೊಡಗಿದ್ದ ಜನರನ್ನು ಡಿ ದರ್ಜೆಯ ನೌಕರರು ಅಥವಾ ದೈಹಿಕ ದುಡಿಮೆಯ ಕಾರ್ಮಿಕರು ಎಂದು ಕರೆಯಲಾಯಿತು.

### ೮.೧. ಜಾಡಮಾಲಿ ಪದದ ಅರ್ಥ

ಜಾಡಮಾಲಿ ಎಂಬುವುದು ಹಿಂದಿ ಭಾಷೆಯ ಪದ. ಜಾಡ ಎಂದರೆ ಗಲೀಜು, ಕೊಳಕು, ಜಾಡು ಎಂದರ್ಥ. ಮಾಲಿ ಎಂದರೆ ಶುಚಿ ಮಾಡುವವ, ಕೊಳಕು ತೆಗೆಯುವವ ಎಂದರ್ಥ. ಬಸವಲಿಂಗಪ್ಪ ಅವರು ಪೌರಾಡಳಿತ ಸಚಿವರಾಗಿದ್ದಾಗ ಜಾಡಮಾಲಿ, ಸಫಾಯಿ ಕರ್ಮಚಾರಿ ಪದಗಳಿಗೆ ಬದಲಾಗಿ 'ಪೌರಕಾರ್ಮಿಕ' ಎಂಬ ಪದವನ್ನು ಜಾರಿಗೆ ತಂದರು.

ಸರ್ಕಾರ ಇವರನ್ನು ಪೌರಕಾರ್ಮಿಕ ಎಂಬುವುದಾಗಿ ಕರೆಯುತ್ತಿದೆ. ಪೌರ ಎಂದರೆ ಪ್ರಜೆ, ಜನ ಎಂದರ್ಥ, ಕಾರ್ಮಿಕ ಎಂಬುವುದು ಕೆಲಸಗಾರ ಎಂದಾಗುತ್ತದೆ. ಜನರ ಕೆಲಸವನ್ನು ಮಾಡುವವನು ಪೌರಕಾರ್ಮಿಕರು ಎಂಬುವುದಾಗಿದೆ. "ಸಫಾಯಿಗಳಿಗೆ ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕರೆಯುತ್ತಾರೆ. ಬುಡಕಟ್ಟು ಪಂಗಡಗಳ ಬಗೆಗೆ ಮೊಟ್ಟಮೊದಲ ಬಾರಿಗೆ ಸಂಶೋಧನೆ ಮಾಡಿ ಮಾಹಿತಿ ನೀಡಿದವರು ಇ. ಥರ್ಸ್ಟನ್ ಅವರ Castes and Tribes of Southern Indian II vol. ಗ್ರಂಥದಲ್ಲಿ ಅನೇಕ ಸಮುದಾಯದ ಹೆಸರುಗಳನ್ನು ನೀಡಿ ವಿವರಿಸಿದ್ದಾರೆ. ಇವರನ್ನು ಭಂಗಿಗಳು ಎಂದು ಕರೆಯಲಾಗಿದೆ. ಇವರ ವೃತ್ತಿ ಮಲ ಬಳಿಯುವುದಾಗಿದೆ."[೧೨] ಕರ್ನಾಟಕದಲ್ಲಿ ಬೇರೆ ಬೇರೆ ಪ್ರದೇಶದಲ್ಲಿ ನೆಲೆಸಿರುವ ಬಂಗಿಗಳ ಉದ್ಯೋಗ ಮಾತ್ರ ಒಂದೇ ಆಗಿರುವುದನ್ನು ಗಮನಿಸಬಹುದಾಗಿದೆ.

ಸಫಾಯಿ ಕರ್ಮಚಾರಿ ಪದದ ಅರ್ಥ ಲಕ್ಷಣವನ್ನು ಕುರಿತು ಅನೇಕರು ವಿಶ್ಲೇಷಿಸಿದ್ದಾರೆ. ಅವರಲ್ಲಿ ಮುಖ್ಯವಾಗಿ ಡಾ. ಅರವಿಂದ ಮಾಲಗತ್ತಿ ಅವರು ಈ ರೀತಿ ವಿಶ್ಲೇಷಣೆ ಮಾಡಿದ್ದಾರೆ.

* "ಆರ್ಥಿಕ, ಸಾಮಾಜಿಕ, ರಾಜಕೀಯ ರಂಗದಲ್ಲೆಲ್ಲಾ ಶೋಷಣೆಗೆ ಒಳಗಾದ ಜನರು ಆಗಿರುತ್ತಾರೆ.
* ಪಂಚಮರು ಅಥವಾ ಬಹಿಷ್ಕೃತರು ಎಂದು ಕರೆಯಿಸಿಕೊಳ್ಳುವ ಅಸ್ಪೃಶ್ಯರೆಲರೂ ಸಫಾಯಿ ಕರ್ಮಚಾರಿ"[೧೩] ಎಂದು ಕರೆದಿದ್ದಾರೆ.

ನಗರ ಪ್ರದೇಶದಲ್ಲಿನ ವಿವಿಧ ವಾರ್ಡುಗಳಲ್ಲಿ ಸಾರ್ವಜನಿಕರಿಗೆ ಶೌಚಾಲಯಗಳನ್ನು ನಿರ್ಮಿಸಿ, ಅವುಗಳ ನಿರ್ವಹಣೆಯನ್ನು ಸಫಾಯಿ ಕರ್ಮಚಾರಿಗಳಿಗೆ ನೀಡಲಾಗಿದೆ. ಸಾರ್ವಜನಿಕರು ನಿರ್ದಿಷ್ಟಗೊಳಿಸಿದ ಹಣವನ್ನು ನೀಡಿ ಶೌಚಾಲಯಗಳನ್ನು ಉಪಯೋಗಿಸಬಹುದಾಗಿದೆ. ಅಂತಹ ಶೌಚಾಲಯಗಳು ಬಹು ಮುಖ್ಯವಾಗಿ ಸಾರ್ವಜನಿಕರು ಹೆಚ್ಚಾಗಿ ಬಳಸುವ ಸ್ಥಳಗಳಾದ ಮಾರ್ಕೆಟ್, ಬಸ್‌ನಿಲ್ದಾಣ, ರೈಲ್ವೆ ನಿಲ್ದಾಣ ಹಾಗೂ ಸಮುದಾಯದ ಈ ಸ್ಥಳಗಳಲ್ಲಿ ಸುಲಭ ಶೌಚಾಲಯಗಳನ್ನು ಸರ್ಕಾರ ನಿರ್ಮಾಣ ಮಾಡಿ ಸಾರ್ವಜನಿಕರ ಬಳಕೆಗೆ ಹೆಚ್ಚಿನ ಅನುಕೂಲ ಮಾಡಿಕೊಡುತ್ತಲಿದೆ. ಇದರಿಂದ ನಗರದ ಪರಿಸರ ನೈರ್ಮಲ್ಯ ರಕ್ಷಣೆ ಆಗುತ್ತಿದೆ. ಆದರೆ ಪೌರಕಾರ್ಮಿಕರು ಹಲವಾರು ಸಮಸ್ಯೆಗಳ ನಡುವೆ ಬದುಕುತ್ತಿದ್ದಾರೆ. ಬಾಬಾ ಸಾಹೇಬ್ ಅಂಬೇಡ್ಕರ್ ಅವರು ಅಸ್ಪೃಶ್ಯರು ಸ್ಪೃಶ್ಯರಿಗಾಗಿ ಮಾಡಬೇಕಾದ ಕರ್ತವ್ಯಗಳನ್ನು ಈ ಕೆಳಗಿನಂತೆ ಪಟ್ಟಿ ಮಾಡಿದ್ದಾರೆ.

* ಸ್ಪೃಶ್ಯರ ಮನೆಯಲ್ಲಿ ವಿವಾಹವು ಜರುಗುವಂತಿದ್ದರೆ ಅವರ ಮನೆಯಲ್ಲಿ ಸೌದೆ ಒಡೆಯುವುದು ಮತ್ತು ಚಿಕ್ಕಪುಟ್ಟ ಚಾಕರಿಗಳನ್ನು ಹೇಳಿದಂತೆ ಮಾಡುವುದು ಅಸ್ಪೃಶ್ಯರ ಕೆಲಸ.

* ಕಾಮನಹಬ್ಬ, ದಸರಾ ಇತ್ಯಾದಿ ಸಾಮೂಹಿಕ ಉತ್ಸವಗಳನ್ನು ಆಚರಿಸುವುದರಲ್ಲಿ ಇಡೀ ಗ್ರಾಮ ಸಮುದಾಯವು ನಿರತವಾಗಿದ್ದಾಗ ಅಸ್ಪೃಶ್ಯರು ಈ ಉತ್ಸವಕ್ಕೆ ಪೂರಕವಾದ ಎಲ್ಲ ಕೀಳು ಕೆಲಸಗಳನ್ನು ಮಾಡಬೇಕು."[೧೪]

ತಳಸಮುದಾಯಗಳು ಪಾರಂಪರಿಕವಾಗಿ ಯಾವ ವೃತ್ತಿಗಳನ್ನು ಮಾಡುತ್ತಾ ಬಂದರು ಎಂಬುದು ಮೇಲ್ಕಂಡ ಅಂಶಗಳಿಂದ ಸ್ಪಷ್ಟವಾಗುತ್ತದೆ.

ಪೂಜೆ ಮಾಡುವುದು, ವ್ಯಾಪಾರ ಮಾಡುವುದು, ಯುದ್ಧ ಮಾಡುವುದು, ಸೇವೆ ಮಾಡುವುದು ಹೀಗೆ ಕೆಲಸಗಳಿಗೆ ಜಾತಿಗಳನ್ನು ಮನು ಸೃಷ್ಟಿಸಿದ. ಆದರೆ ಸ್ಪರ್ಧಾ ಪ್ರಪಂಚ ಅಂತಹ ನಾಲ್ಕು ಕೆಲಸದ ಆಧಾರದ ತಾರತಮ್ಯವನ್ನು ಎಲ್ಲಾ ಕೆಲಸಗಳಿಗೂ ವಿಸ್ತರಿಸಿತು. ಯಾವ ಮಟ್ಟಕ್ಕೆ ಅಂದರೆ ಒಂದೊಂದು ಕೆಲಸಕ್ಕೂ ಒಂದೊಂದು ಜಾತಿ ಅನ್ನುವಂತೆ. ಒಟ್ಟಾರೆ ವಿವಿಧ ಕೆಲಸಗಳಿಂದ ವಿವಿಧ ಜಾತಿ ಸೃಷ್ಟಿಯಾಯಿತು. ಹೀಗೆ ಕೆಲಸದ ಆಧಾರದ ಮೇಲೆ ಜಾತಿ ಗಟ್ಟಿಯಾಗುತ್ತಾ ಹೋಯಿತು. ಕಾಲಾಂತರದಲ್ಲಿ ಸೃಷ್ಟಿಯಾದ ಹೊಸ ಕೆಲಸಗಳೂ ನಿರ್ದಿಷ್ಟ ಜಾತಿಗೆ ಎನ್ನುವಂತೆ ಮಾಡಲಾಯಿತು. 'ತಳಸಮುದಾಯಗಳ ಮೇಲೆ ಕೆಲವು ಉದ್ಯೋಗಗಳನ್ನು ಹೇರಲಾಗಿದೆ. ಅಂತಹ ಉದ್ಯೋಗಗಳು ಕೀಳು ಅಥವಾ ಗಲೀಜು ಆದ್ದರಿಂದ ಅಸ್ಪೃಶ್ಯತೆಯ ಡಿಗ್ರಿ ಕೂಡ ಏರುತ್ತಾ ಬಂದಿದೆ. ಯಾವ ಉದ್ಯೋಗಗಳನ್ನು ಕೀಳು ಎಂದು ಸಮಾಜ ದೂರವಿಟ್ಟಿದೆಯೋ, ಗುರುತಿಸಿದೆಯೋ ಅಂತಹ ಉದ್ಯೋಗಗಳಿಂದ ಅಸ್ಪೃಶ್ಯ ಸಮುದಾಯ ದೂರ ಉಳಿಯುವ ಅಗತ್ಯವಿದೆ."[೧೫] ಅಸ್ಪೃಶ್ಯತಾಚರಣೆಯು ಎರಡು ಆಯಾಮದಲ್ಲೂ ಉಂಟಾಗಿದೆ. ಒಂದು ಆಯಾಮ ಪ್ರಬಲ ಸಮುದಾಯಗಳಾದರೆ, ಮತ್ತೊಂದು ಆಯಾಮ ತಳಸಮುದಾಯಗಳೇ ಆಗಿದೆ.

ತಳಸಮುದಾಯಗಳೇ ಯಾಕೆ ಈ ವೃತ್ತಿಗಳನ್ನು ಮಾಡುತ್ತಿವೆ ಎಂಬುದಕ್ಕೆ ಪ್ರಮುಖ ಕಾರಣ; ಆರ್ಥಿಕವಾಗಿ, ಸಾಮಾಜಿಕವಾಗಿ ಈ ಸಮುದಾಯಗಳು ತಳಸ್ತರದಲ್ಲಿರುವುದು. ಪಾರಂಪರಿಕ ಜಾತಿಯಾಧಾರಿತ ಉದ್ಯೋಗಗಳನ್ನೇ ಕೆಳಗಿನ ಜಾತಿಗಳು ಮಾಡಬೇಕೆಂದು ಒತ್ತಡ ತರುತ್ತಿರುವುದು ಕೂಡ ಪ್ರಮುಖ ಅಂಶವಾಗಿದೆ. ಇದಕ್ಕೆ ಉದಾಹರಣೆ ಎಂದರೆ "ಇತ್ತೀಚೆಗೆ ಅಹಮದಾಬಾದಿನ ಹಳ್ಳಿಯೊಂದರಲ್ಲಿ ಭಂಗಿ ಕೆಲಸ ಮಾಡುತ್ತಿದ್ದ ಕುಟುಂಬವೊಂದರ ಯುವಕ ತನ್ನ ಪಾರಂಪರಿಕ ಉದ್ಯೋಗವನ್ನು ಬಿಟ್ಟು ರಿಕ್ಷಾ ಓಡಿಸಲು ಆರಂಭಿಸಿದ್ದರಿಂದ ಆ ಗ್ರಾಮದ ಪ್ರಬಲ ಸಮುದಾಯಗಳು ಅದನ್ನು ವಿರೋಧಿಸಿ ಅವನ ಮೇಲೆ ಹಲ್ಲೆ ಮಾಡಿದವು."[೧೬] ಇಂತಹ ಅವೆಷ್ಟೋ ಘಟನೆಗಳು ಗ್ರಾಮೀಣ ಭಾಗಗಳಲ್ಲಿ ಜರುಗುತ್ತವೆ. ಆದರೆ ಸುದ್ದಿಯಾಗುವುದಿಲ್ಲ. ಜಾತಿ ಒಂದು ಪ್ರಮುಖ

ಸಂಸ್ಥೆಯಾಗಿ ಗುರುತಿಸಿಕೊಂಡದ್ದು ಮಾತ್ರವಲ್ಲದೆ, ಅದು ಒಳಹೊರಗನ್ನು ಆಳುವ ಕೆಲಸ ಮಾಡುತ್ತದೆ.

## ೮.೨. ಮಲ ಬಾಚುವ ಪದ್ಧತಿ ಜೀವಂತ

ಮಲ ಬಾಚುವ ಪದ್ಧತಿಯನ್ನು ನಿಷೇಧಿಸಿದ್ದರೂ ಸಹ ಇಡೀ ಭಾರತದಾದ್ಯಂತ ಇದೇ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಲಕ್ಷಾಂತರ ಕುಟುಂಬಗಳು ಇವೆ. ಎಲ್ಲಿದೆ ಈ ಪದ್ಧತಿ ಎನ್ನುವವರೇ ಹೆಚ್ಚು. ತಲೆ ಮೇಲೆ ಮಲ ಹೊರುವುದಷ್ಟೇ ಮಲ ಹೊರುವ ಪದ್ಧತಿ ಎಂಬುವುದು ಸರಿಯಲ್ಲ. ಮ್ಯಾನ್‌ಹೋಲ್‌ಗಳಲ್ಲಿಯೂ ಮಲ ಇರುತ್ತದೆ. ಚರಂಡಿ ಪೈಪ್‌ಗಳ ದುರಸ್ಥಿ ಮಾಡುವವರೂ ಮಲವನ್ನು ಮುಟ್ಟಬೇಕಾಗುತ್ತದೆ. ಹೀಗಾಗಿ ಈ ಪದ್ಧತಿಯನ್ನು ವಾಸ್ತವಿಕ ನೆಲೆಯಲ್ಲಿ ಸರಿಯಾದ ರೀತಿಯಲ್ಲಿ ವ್ಯಾಖ್ಯಾನಿಸಬೇಕಾಗಿದೆ. ಭಾರತದ ಗುಜರಾತ್, ರಾಜಸ್ಥಾನದಲ್ಲೂ ಈ ಪದ್ಧತಿ ವ್ಯಾಪಕವಾಗಿದೆ. ರಾಜಾಸ್ಥಾನದ ಸಿಕಾರ್‌ನಲ್ಲಿ ಸಣ್ಣ ಹುಡುಗಿಯರು ಎಂಟು, ಒಂಭತ್ತು, ಹತ್ತು ವರ್ಷದವರು ತಮ್ಮ ತಾಯಂದಿರ ಜೊತೆ ಈ ಕೆಲಸ ಮಾಡುತ್ತಿದ್ದಾರೆ. ಮೇರಿ ಮರ್‌ಸೆಲ್ ಥೆಕೆಕರ್ ಅವರು ಈ ವೃತ್ತಿಯನ್ನು ಮಾಡುತ್ತಿರುವ ಸಣ್ಣ ಹುಡುಗಿಯನ್ನು ಸಂದರ್ಶನ ಮಾಡಿದ್ದರ ಬಗೆಗೆ ತಮ್ಮ ಲೇಖನದಲ್ಲಿ ವಿವರಿಸಿದ್ದಾರೆ. "ನಾನು ಪೂಜಾಳನ್ನು ಭೇಟಿ ಮಾಡಿದೆ. ಅವಳಿಗೆ ೧೨ ವರ್ಷ ಎಂದು ಅವಳು ತಿಳಿದುಕೊಂಡಿದ್ದಳು. ನಾನು ನೋಡಿದ ಹುಡುಗಿಯರಲ್ಲೇ ಅತ್ಯಂತ ವಿಷಾದದ ಕಣ್ಣುಗಳ ಹುಡುಗಿ ಅವಳು. ತಡೆದು ತಡೆದು ನಿಧಾನಕ್ಕೆ ನಾಚಿಕೆಯಿಂದ ಮಾತನಾಡುವ ಅವಳ ಮಾತುಗಳ ಸಾರಾಂಶ ನನಗೆ ಅರ್ಥವಾಗುವ ಹೊತ್ತಿಗೆ ಸಾಕು, ಬೇಕಾಯಿತು. ಪ್ರತಿ ದಿನ ಬೆಳಿಗ್ಗೆ ಮನುಷ್ಯರ ಮಲವನ್ನು ತನ್ನ ಪುಟ್ಟ ಕೈಗಳಿಂದ ಸ್ವಚ್ಛ ಮಾಡುವ ಕೆಲಸವನ್ನು ಅವಳು ನಿರಂತರವಾಗಿ ನಾಲ್ಕು ವರ್ಷಗಳಿಂದ ಅಂದರೆ, ಅವಳಿಗೆ ೮ ವರ್ಷಗಳಾಗಿದ್ದಾಗಿನಿಂದ ಮಾಡುತ್ತಿದ್ದುದಷ್ಟೇ ಅಲ್ಲ, ಅದರ ಜೊತೆಗೆ ಇಂತಹ ಹಲವು ಕೆಲಸಗಳು ಅವಳ ದೈನಂದಿನ ಕ್ರಿಯೆಗಳಾಗಿದ್ದವು."[೧೭] ಈ ಮಕ್ಕಳು ಶಿಕ್ಷಣ, ವಸತಿ, ಆರೋಗ್ಯ ಮೊದಲಾದ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿರುವುದನ್ನು ತಿಳಿಯಬಹುದಾಗಿದೆ.

ವಡ್ಡಗೆರೆ ನಾಗರಾಜಯ್ಯ ಹಾಗೂ ಬಾಲಗುರುಮೂರ್ತಿ ಅವರು ಈ ರೀತಿಯದೇಆದಂತಹ ಕೆಲಸವನ್ನು ವಿದ್ಯಾರ್ಥಿ ಜೀವನದಲ್ಲಿ ಮಾಡಿರುವುದನ್ನು ಉಲ್ಲೇಖಿಸಿದ್ದಾರೆ. ಅದು ಈ ಕೆಳಕಂಡಂತಿದೆ. "ನಾನು, ನನ್ನ ಗೆಳೆಯ ಬಾಲಗುರುಮೂರ್ತಿ, ಕರ್ನಾಟಕ ಅಲೆಮಾರಿ ಬುಡಕಟ್ಟು ಮಹಾಸಭಾದ ರಾಜ್ಯಾಧ್ಯಕ್ಷ, ನಾವಿಬ್ಬರೂ ಜೊತೆಯಲ್ಲಿ ಬಿ.ಎ.ವ್ಯಾಸಂಗ ಮಾಡ್ತಾ ಇದ್ವಿ, ತುಮಕೂರಿನಲ್ಲಿ ನಾವಿಬ್ಬರೂ ಆಂಗ್ಲಸಾಹಿತ್ಯದ ವಿದ್ಯಾರ್ಥಿಗಳು. ನಮಗೆ ಮನೆ ಕಡೆ ಆರ್ಥಿಕವಾಗಿ

ನಡೀತಾ ಇರಲಿಲ್ಲ. ಹಾಸ್ಟೆಲ್‌ನಲ್ಲಿ ಉಣ್ಣೋದು ತಿನ್ನೋದಕ್ಕೆ ಕಿತ್ತಾಡಿದರೆ, ಹೊದಿಯೊದಕ್ಕೂ-ಉಡೋದಕ್ಕೂ, ಪೆನ್ನು, ಪುಸ್ತಕ, ಪೇಪರ್ರು ಇವಕ್ಕೂ, ಖರ್ಚು, ವೆಚ್ಚಗಳಿಗೂ ದುಡ್ಡು ಇರಲಿಲ್ಲ. ಇಂಥ ಸಂದರ್ಭದಲ್ಲಿ ನಾವಿಬ್ಬರೂ ಕೂಡ ರಾತ್ರಿ ಹನ್ನೊಂದು ಹನ್ನೆರಡು ಗಂಟೆ ಸರಿದು ಹೋದ ಮೇಲೆ, ತುಮಕೂರು ನಗರದ ಭಂಗಿಗಳಾಗಿ, ಅಲ್ಲಿ ಮ್ಯಾನ್‌ಹೋಲ್‌ಗಳನ್ನು, ಲೆಟರಿನ್ ಪಿಟ್‌ಗಳನ್ನು ಕ್ಲೀನ್ ಮಾಡೋದಕ್ಕೆ ಹೋಗ್ತಾ ಇದ್ವಿ, ನಾನು ಬಾಲಗುರುಮೂರ್ತಿ ಇಬ್ಬರು ಕೂಡ ನೂರು, ನೂರೈವತ್ತು ರೂಪಾಯಿಗೆ, ಲೆಟರಿನ್ ಪಿಟ್‌ಗಳನ್ನು ಕ್ಲೀನ್ ಮಾಡೋದಕ್ಕೆ ಒಪ್ಕೊಂಡಿರ್ತಿದ್ವಿ."[೧೮] ಇಲ್ಲಿ ಅವರ ವಿದ್ಯಾಭ್ಯಾಸದ ಖರ್ಚು-ವೆಚ್ಚಗಳಿಗೆ ನೆರವಾಗುತ್ತಿದ್ದದ್ದು ಅವರ ಪಾಯಿಖಾನೆ ಕೆಲಸ. ಆರ್ಥಿಕವಾಗಿ ಸಾಮಾಜಿಕವಾಗಿ ಹಿಂದುಳಿದ ಬಹಳಷ್ಟು ತಳ ಸಮುದಾಯ ಕುಟುಂಬಗಳ ಬದುಕೇ ಈ ರೀತಿಯದ್ದಾಗಿದೆ.

೨೦೧೧ರ ಸಾಮಾಜಿಕ, ಆರ್ಥಿಕ, ಜಾತಿ ಗಣತಿಯ ಪ್ರಕಾರ ಮಲ ಹೊರುವ ಪದ್ಧತಿ ಆಚರಣೆಯಲ್ಲಿ ದೇಶದಲ್ಲಿ ಕರ್ನಾಟಕ ೧ನೇ ಸ್ಥಾನದಲ್ಲಿದೆ. "ಉತ್ತರ ಕರ್ನಾಟಕದಲ್ಲಿ ಅದಕ್ಕೆ ಹೆಸರುಗಳು ಕೂಡ ಇವೆ. ಒಣ ಮಲ ಹೊರುವವರು, ಹಸಿ ಮಲ ಹೊರುವವರು ಎಂದು. ಒಣ ಮಲ ಹೊರುವವರಂಥದ್ದು ಒಂದು ಗುಂಪು, ಹಸಿ ಮಲ ಹೊರುವವರದ್ದು ಇನ್ನೊಂದು ಗುಂಪು. ಬೆಂಗಳೂರು ನಗರದಲ್ಲಿ ಚಿನ್ನಯ್ಯನ ಪಾಳ್ಯ ಮತ್ತು ಯಶವಂತಪುರದಲ್ಲಿ ಈಗಲೂ ಮಲ ಹೊರುತ್ತಾರೆ."[೧೯] ಇದು ನಾಗರಿಕ ಸಮಾಜ ನಾಚಿಕೆ ಪಡುವಂತಹ ವಿಷಯವಾಗಿದೆ. ಸರ್ಕಾರ ಇದರ ಬಗ್ಗೆ ಗಮನಹರಿಸಿ, ಗಂಭೀರವಾಗಿ ಪರಿಗಣಿಸಿ, ತಕ್ಷಣ ನಿಲ್ಲಿಸಬೇಕಾಗಿದೆ.

ಭಾರತೀಯ ರೈಲ್ವೆ ಮನುಷ್ಯರಿಂದ ಮಲ ಬಳಿಸುವ ಮತ್ತೊಬ್ಬ ದೊಡ್ಡ ಅಪರಾಧಿ ಎನ್ನಬಹುದು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕರ್ನಾಟಕದಲ್ಲಿ ದಲಿತ ಚಳುವಳಿಯ ಮುಖ್ಯರಲ್ಲಿ ಒಬ್ಬರಾದ ಬಂದಕುಂಟೆ ನಾಗರಾಜ್ ಅವರೊಂದಿಗೆ ಪೌರಕಾರ್ಮಿಕರಿಗೆ ಸಂಬಂಧಿಸಿದಂತೆ ಚರ್ಚಿಸಿದ ಸಂದರ್ಭದಲ್ಲಿ "೨೦೧೫-೧೬ನೇ ಸಾಲಿನಲ್ಲಿ ತುಮಕೂರು ನಗರದ ರೈಲ್ವೆ ಹಳಿಗಳ ಮೇಲೆ ಮಲ ಬಳಿಸುವ ವ್ಯವಸ್ಥೆ ವಿರುದ್ಧ ಪ್ರತಿಭಟನೆ ಮಾಡಲಾಯಿತು."[೨೦] ಎಂದು ವಿವರಿಸಿದರು. "೧೨ ಸಾವಿರ ರೈಲುಗಾಡಿಗಳ ೫೯.೨೬೯ ಪ್ಯಾಸೆಂಜರ್ ಕೋಚುಗಳ ಪಾಯಿಖಾನೆಗಳ ಮಲ ಸೀದಾ ಹಳಿಗಳ ಮೇಲೆ ಬೀಳುತ್ತದೆ. ಬಳಿಯುವವರನ್ನು ಗುತ್ತಿಗೆದಾರರ ಮೂಲಕ ನೇಮಿಸಿಕೊಂಡಿದೆ. ತನ್ನ ದಾಖಲೆ ದಸ್ತಾವೇಜುಗಳಲ್ಲಿ ಮಲ ಬಳಿಯುವವರು ಇಲ್ಲ ಎಂದು ಸಮಜಾಯಿಷಿ ನೀಡುತ್ತದೆ."[೨೧] ಭಾರತೀಯ ರೈಲ್ವೆ ವಿಶ್ವದ ಅತಿ ದೊಡ್ಡ ಚಲಿಸುವ ಬಯಲು ಶೌಚಾಲಯವೂ ಆಗಿದೆ. "ಹಳಿಗಳ ಮೇಲೆ ಬೀಳುವ, ಬೋಗಿಯ ಅಡಿಭಾಗ ಮಲಮೂತ್ರಗಳಿಂದ ಹಳಿ ತುಕ್ಕು ಹಿಡಿದು ಶಿಥಿಲವಾಗಿ ರೈಲ್ವೆಗೆ ವರ್ಷಕ್ಕೆ ೩೫೦ ಕೋಟಿ ರೂಪಾಯಿ ನಷ್ಟವಾಗುತ್ತದೆ."[೨೨]

ಹಳಿ ಶುದ್ಧವಾಗುಳಿಯಲು ಸಾವಿರಾರು ದಲಿತ ಪೌರಕಾರ್ಮಿಕರು, ಸೂಕ್ತ ಸೌಲಭ್ಯಗಳಿಲ್ಲದೆ ಕೆಲಸ ಮಾಡುತ್ತಾರೆ. ಇತ್ತೀಚೆಗೆ ಈ ಕುರಿತು ಚರ್ಚೆ ಶುರುವಾಗಿದ್ದು, ರಾಷ್ಟ್ರೀಯ ಮಾನವ ಹಕ್ಕು ಆಯೋಗ ವಿಚಾರಣೆ ನಡೆಸಿತು. ೨೦೨೨ರ ಹೊತ್ತಿಗೆ ತನ್ನ ಎಲ್ಲ ಭೋಗಿಗಳಿಗೂ ಜೈವಿಕ ಶೌಚಾಲಯಗಳನ್ನು ಅಳವಡಿಸುವುದಾಗಿ ರೈಲ್ವೆಯು ಮಾನವ ಹಕ್ಕುಗಳ ಆಯೋಗಕ್ಕೆ ತಿಳಿಸಿತು. ಈಗ ಪ್ರಯೋಗಾರ್ಥವಾಗಿ ಎಸಿ ಹಾಗೂ ಕಾದಿಟ್ಟ ೨೦೦೦ ಬೋಗಿಗಳಿಗೆ ಜೈವಿಕ ಶೌಚಾಲಯಗಳನ್ನು ಅಳವಡಿಸಿದೆ. ಕೆಳಗೆ ಬಿದ್ದ ತ್ಯಾಜ್ಯವನ್ನು ಸಂಗ್ರಹಿಸಿ, ಬ್ಯಾಕ್ಟೀರಿಯಾದಿಂದ ಅಪಾಯ ರಹಿತ ತ್ಯಾಜ್ಯವಾಗಿ ಪರಿವರ್ತಿಸಿ, ಹೊರಬಿಡುವ ವ್ಯವಸ್ಥೆ ಜೈವಿಕ ಶೌಚಾಲಯದಲ್ಲಿರುತ್ತದೆ.

ನಗರಗಳು ನಾಯಿಕೊಡೆಯಂತೆ ಬೃಹತ್ ಆಗಿ ಬೆಳೆಯುತ್ತಿರುವ ಈ ದಿನಗಳಲ್ಲಿ ಜೀವನೋಪಾಯಕ್ಕಾಗಿ ತಲೆ ಮೇಲೆ ಮಲ ಸಾಗಿಸುವ ಕೆಟ್ಟ ಅಸಹಜ ವೃತ್ತಿಗಳನ್ನು ಸಾಮಾಜಿಕವಾಗಿ ತಳಸ್ತರದಲ್ಲಿರುವ ಸಮುದಾಯಗಳು ಮಾಡುತ್ತಾ ಬಂದಿವೆ. ನಗರಾಭಿವೃದ್ಧಿಯ ನಾಗಲೋಟದಿಂದ ಡಾಬಗಳು, ರೆಸ್ಟೋರೆಂಟ್‌ಗಳು, ರೆಸಾರ್ಟ್‌ಗಳು, ಹೋಟೆಲ್‌ಗಳಲ್ಲಿ ಪಿಟ್‌ಗಳು ತಿಂಗಳಿಗೊಮ್ಮೆ ತುಂಬಿ ನಾರುತ್ತವೆ. ಇವುಗಳ ಶುಚಿಗೆ ಹಸಿವಿನಿಂದ ಕಂಗೆಟ್ಟಿರುವ ಜನ ಬಲಿಯಾಗುತ್ತಿದ್ದಾರೆ.

ತುಮಕೂರು ಜಿಲ್ಲೆಯಲ್ಲೂ ಕೂಡ ಈ ಪದ್ಧತಿ ವ್ಯಾಪಕವಾಗಿರುವುದನ್ನು ಕಾಣಬಹುದು. ತುಮಕೂರು ಜಿಲ್ಲೆಯ ಅತ್ಯಂತ ಹಿಂದುಳಿದ ತಾಲ್ಲೂಕು ಪಾವಗಡ ಪಟ್ಟಣದಲ್ಲೂ ಈ ಪದ್ಧತಿ ಜೀವಂತವಾಗಿದೆ. ಅಲ್ಲಿನ ಪೌರಕಾರ್ಮಿಕರು ಈ ರೀತಿ ಹೇಳಿದ್ದಾರೆ. "ನಮ್ಗೆ ನಿತ್ಯ ಪೊರಕೆ ಹಿಡಿದು ಮಲ ಎತ್ತಿ ಸ್ವಚ್ಛಗೊಳಿಸುವುದೇ ಕೆಲಸ; ಸ್ವಾಮಿ ನಾವೂ ಮನುಷ್ಯರು. ನಿತ್ಯ ಪಟ್ಟಣದ ಓಣಿಗಳಲ್ಲಿ ಪೊರಕೆ ಹಿಡಿದು ಮಲ ಎತ್ತಿಹಾಕಿ ಸ್ವಚ್ಛ ಮಾಡುವುದೇ ಕೆಲಸ. ಕೆಲವೊಂದು ಬಾರಿ ಕೈಯಿಂದಲೇ ಮಲ ಎತ್ತಿಹಾಕಿ ಸ್ವಚ್ಛಗೊಳಿಸುತ್ತೇವೆ. ಇಂಥ ಕೆಲಸ ಮಾಡಿದರೂ ನಮ್ಮ ಬದುಕು ನೆಮ್ಮದಿಯಾಗಿಲ್ಲ. ತಿಂಗಳು ಪೂರ್ತಿ ಕೆಲಸ ಮಾಡಿದರೆ ಸಿಗುವುದು ಕೇವಲ ೨೬ ದಿನದ ಸಂಬಳ. ನಮ್ಗೆ ಮನೆಯೂ ಇಲ್ಲ, ತಿಂಗಳ ಸಂಬಳವೂ ಸರಿಯಾಗಿ ಬರುವುದಿಲ್ಲ. ಸ್ವಚ್ಛತಾ ಕಾರ್ಯಕ್ಕೆ ಕೈಗವಚಗಳನ್ನಾಗಲಿ, ಉಪಕರಣಗಳನ್ನಾಗಲಿ ಕೊಟ್ಟಿಲ್ಲ. ಬರೀ ಕೈಯಿಂದಲೇ ಸ್ವಚ್ಛ ಮಾಡುತ್ತೇವೆ."[೨೩] ಮೇಲ್ಕಂಡ ಹೇಳಿಕೆಯನ್ನು ಗಮನಿಸಿದರೆ ಪೌರಕಾರ್ಮಿಕರ ಬದುಕಿನ ಚಿತ್ರಣ ಅರಿವಾಗುತ್ತದೆ.

ತುಮಕೂರು ನಗರದ ಮುನಿಸಿಫಲ್ ಕಾರ್ಪೋರೇಷನ್ ಬಗ್ಗೆ 'ದಿ ಹಿಂದೂ' ಪತ್ರಿಕೆ ಈ ಕೆಳಕಂಡಂತೆ ವರದಿ ಮಾಡಿದೆ.

"ತುಮಕೂರು ನಗರದ ಮುನಿಷಿಫಲ್ ಕಾರ್ಪೋರೇಷನ್‌ನಲ್ಲಿ ೩೭೭ ಪೌರಕಾರ್ಮಿಕರು ಇದ್ದಾರೆ. ಅವರಲ್ಲಿ ೭೭ ಮಂದಿ ಖಾಯಂ ಕೆಲಸಗಾರರು ಇದ್ದಾರೆ. ಉಳಿದವರು ಗುತ್ತಿಗೆ

ಆಧಾರದ ಮೂಲಕ ಕಾರ್ಯನಿರ್ವಹಿಸುತ್ತಿದ್ದಾರೆ.”[೨೪] ಬಹಳಷ್ಟು ದಿನಗಳಿಂದ ಹಲವಾರು ಬೇಡಿಕೆಗಳನ್ನು ಇಟ್ಟಿದ್ದಾರೆ. ಅವುಗಳೆಂದರೆ ಖಾಯಂ ಆಗಿ ನೇಮಕ ಮಾಡಿಕೊಳ್ಳುವುದು. ಆರೋಗ್ಯ ವಿಮಾ ಯೋಜನೆ, ವಸತಿ ವ್ಯವಸ್ಥೆ, ಅವರ ಮಕ್ಕಳಿಗೆ ಶಿಕ್ಷಣದ ಸೌಲಭ್ಯಗಳನ್ನು ಒದಗಿಸುವುದು. ಬಹಳಷ್ಟು ಮಂದಿ ಪೌರಕಾರ್ಮಿಕರು ಇಲ್ಲಿ ೨೦ ವರ್ಷಗಳಿಂದ ಗುತ್ತಿಗೆ ಪೌರಕಾರ್ಮಿಕರಾಗಿ ಕೆಲಸ ಮಾಡುತ್ತಿದ್ದಾರೆ. ಕೆಲವರು ಆರು ವರ್ಷಗಳಿಂದ ಹೊರಗುತ್ತಿಗೆ ವ್ಯವಸ್ಥೆಯ ಮೂಲಕ ಕಾರ್ಯನಿರ್ವಹಿಸುತ್ತಿದ್ದಾರೆ.

ತುಮಕೂರು ಜಿಲ್ಲೆಯ ಪೌರಕಾರ್ಮಿಕ ಸಂಘದ ಅಧ್ಯಕ್ಷ ಸಯ್ಯದ್ ಮುಜೀಬ್ ಅವರು ‘ದಿ ಹಿಂದೂ’ ಪತ್ರಿಕೆಗೆ “ಗುತ್ತಿಗೆ ಆಧಾರದ ಮೇಲೆ ೩೦೦ ಜನ ಪೌರಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ.”[೨೫] ಎಂದು ಹೇಳಿದ್ದಾರೆ.

ಜಿಲ್ಲಾ ಪೌರಕಾರ್ಮಿಕ ಸಂಘದ ಕಾರ್ಯದರ್ಶಿ ಎನ್.ಕೆ.ಸುಬ್ರಮಣ್ಯ ಅವರು ಪೌರ ಕಾರ್ಮಿಕರನ್ನು ಕುರಿತು “ಬೆಳಿಗ್ಗೆ ೫.೩೦ಕ್ಕೆ ಪೌರಕಾರ್ಮಿಕರು ಕೆಲಸಕ್ಕೆ ಹಾಜರಿರಬೇಕು. ೨೦ ನಿಮಿಷ ತಡವಾಗಿ ಬಂದರೆ, ಅಂದು ಅವರಿಗೆ ಕೆಲಸಕ್ಕೆ ಸೇರಿಸುವುದಿಲ್ಲ.”[೨೬] ಎಂದು ಹೇಳಿದ್ದಾರೆ.

ನರಸಮ್ಮ ಎಂಬ ಪೌರಕಾರ್ಮಿಕ ಮಹಿಳೆಯು “ಗ್ಲೌವ್ಸ್, ಗಮ್‌ಬೂಟ್ಸ್ ಹಾಗೂ ಮಾಸ್ಕ್ಸ್ ಯಾವುದನ್ನೂ ಕೊಟ್ಟಿಲ್ಲ. ಆರೋಗ್ಯ ಸರಿ ಇಲ್ಲದ ಸಂದರ್ಭದಲ್ಲಿ ರಜೆ ಸೌಲಭ್ಯವಿಲ್ಲ”[೨೭] ಎಂದು ಹೇಳಿದ್ದಾರೆ.

ಮಂಜು ಎಂಬ ಇನ್ನೊಬ್ಬ ಪೌರಕಾರ್ಮಿಕ “ನಿರಂತರವಾಗಿ ಕೆಲಸ ಮಾಡೋದಕ್ಕೆ ನನ್ನಿಂದ ಸಾಧ್ಯ ಇಲ್ಲ. ಮೂಳೆಗಳ ಮತ್ತು ಬೆನ್ನು ನೋವಿನ ಕಾರಣದಿಂದಾಗಿ ಪ್ರತಿ ತಿಂಗಳಲ್ಲಿ ೩ ರಿಂದ ೪ ದಿನ ಗೈರು ಹಾಜರಿಯಾಗುತ್ತೇನೆ”[೨೮] ಎಂದಿದ್ದಾರೆ.

ತುಮಕೂರು ನಗರ ಪಾಲಿಕೆ ಸಮೀಕ್ಷೆ ನಡೆಸಿ ೩೧೦ ಸಫಾಯಿ ಕರ್ಮಚಾರಿಗಳು ನಗರದಲ್ಲಿದ್ದಾರೆ ಎಂದು ವರದಿ ನೀಡಿತ್ತು. ವಾಸ್ತವವಾಗಿ ನೋಡುವುದಾದರೆ ಕನಿಷ್ಠ ೧೦೦೦ಕ್ಕೂ ಹೆಚ್ಚು ಮಂದಿ ಈ ವೃತ್ತಿಯಲ್ಲಿ ತೊಡಗಿಕೊಂಡವರಿದ್ದಾರೆ ಎಂದು ಇತ್ತೀಚೆಗೆ ಪ್ರಜಾವಾಣಿ ದಿನಪತ್ರಿಕೆಯಲ್ಲಿ ವರದಿಯಾಗಿತ್ತು. ಬಳ್ಳಾರಿಯಲ್ಲಿ ಮೂರು ಅಂತಸ್ತಿನ ಕಟ್ಟಡದಿಂದ ನಿವಾಸಿಯೊಬ್ಬರು ಎಸೆದ ಕಸದ ಮೂಟೆಯಿಂದ ಒಬ್ಬ ಪೌರಕಾರ್ಮಿಕ ಮಹಿಳೆ ಗಾಯಗೊಂಡಿದ್ದಳು. ಪೌರಕಾರ್ಮಿಕ ಎನ್ನುವುದರ ಜೊತೆಗೆ ಮಹಿಳೆ ಎಂಬ ಕಾರಣಕ್ಕಾಗಿ ಶೋಷಣೆಗೆ ಒಳಗಾಗಿದ್ದಾಳೆ.

ಪಟ್ಟಣ ನಗರಗಳ ನೈರ್ಮಲ್ಯಕ್ಕೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿರುವ ಈ ಪೌರಕಾರ್ಮಿಕರ ಸಮಸ್ಯೆ, ತ್ಯಾಜ್ಯ ನಿರ್ವಹಣೆ ಹಾಗೂ ವಿಲೇವಾರಿ ಕುರಿತು ರಾಷ್ಟ್ರಮಟ್ಟದಲ್ಲಿಯೂ ಪ್ರಸ್ತಾಪವಾಗುತ್ತಿಲ್ಲ.

ಪೇಟೆ, ಪಟ್ಟಣಗಳಲ್ಲಿ ಕಟ್ಟಿಕೊಂಡ ಮಲದ ಗುಂಡಿಗಳಿಗೆ ಇಳಿದು ಮುಳುಗಿ ಕೆಲಸ ಮಾಡುವುದು ಸಾಮಾನ್ಯವಾಗಿದೆ. ತಿಳಿಯದೆ ಇಳಿದು ವಿಷಗಾಳಿಗೆ ಮಲದ ಗುಂಡಿಗಳಲ್ಲೇ ಶವವಾದವರು ಪತ್ರಿಕೆಗಳ ಸಿಂಗಲ್ ಕಾಲಮ್, ಚುಟುಕು ಸುದ್ದಿಗಳಲ್ಲಿ ವರದಿಯಾಗುತ್ತಾರೆ. "ದೊಡ್ಡಬಳ್ಳಾಪುರದ ಖಾಸ್‌ಬಾಗ್ ಪ್ರದೇಶದ ಬೆಂಗಳೂರು ಮುಖ್ಯರಸ್ತೆಯಲ್ಲಿ ಸುಮಾರು ೧೫ ಅಡಿ ಆಳದ ಮ್ಯಾನ್‌ಹೋಲ್ ಸ್ವಚ್ಛಗೊಳಿಸುವ ವೇಳೆ ಇಬ್ಬರು ಪೌರಕಾರ್ಮಿಕರು ಮತ್ತು ಅವರನ್ನು ರಕ್ಷಿಸಲು ಹೋದ ಮತ್ತಿಬ್ಬರು ಸ್ಥಳೀಯರು ವಿಷಗಾಳಿಯಿಂದಾಗಿ ದಿನಾಂಕ ೩.೪.೨೦೧೬ರ ಭಾನುವಾರ ಪ್ರಾಣ ಕಳೆದುಕೊಂಡಿದ್ದು ಆಘಾತಕಾರಿ ವಿಚಾರವಾಗಿದೆ."[೨೯] ಪ್ರತ್ಯಕ್ಷದರ್ಶಿಗಳ ಹೇಳಿಕೆಗಳ ಪ್ರಕಾರ ಪೌರಕಾರ್ಮಿಕರಿಗೆ ಯಾವುದೇ ಸುರಕ್ಷಾ ಸಾಧನ ನೀಡಿರಲಿಲ್ಲ. ಅಂದು ಮ್ಯಾನ್‌ಹೋಲ್‌ಗಳಲ್ಲಿ ಬಟ್ಟೆಗೆ ಬಣ್ಣ ಹಾಕುವ ರಾಸಾಯನಿಕಯುಕ್ತ ನೀರು ತುಂಬಿತ್ತು. ಈ ರಾಸಾಯನಿಕ ನೀರಿನ ತೀಕ್ಷ್ಣ ಘಾಟು ಮತ್ತು ವಿಷಗಾಳಿಯೇ ನಾಲ್ವರ ಸಾವಿಗೆ ಕಾರಣವಾಗಿದೆ. ಸಮಾಜದ ಅತ್ಯಂತ ಅಮಾನವೀಯ ಪದ್ಧತಿ ಎಂಬ ಹಣೆಪಟ್ಟಿಗೆ ಒಳಗಾಗಿರುವ ಮಲ ಹೊರುವ ಪದ್ಧತಿ ನಿಷೇದ ಕಾಯಿದೆ ಪ್ರಕಾರ ಯಾವುದೇ ವ್ಯಕ್ತಿಗಳನ್ನು ಮ್ಯಾನ್‌ಹೋಲ್‌ಗೆ ಇಳಿಸುವುದು ಶಿಕ್ಷಾರ್ಹವಾದರೂ ಕಾನೂನು, ಕಾಯಿದೆಗಳನ್ನೂ ನಿರ್ಲಕ್ಷಿಸಿರುವುದು ಕಂಡುಬರುತ್ತದೆ.

ಕರ್ನಾಟಕದಲ್ಲಿ ಕಳೆದ ಕೆಲವರ್ಷಗಳಲ್ಲಿ ಸುಮಾರು ೪೦ ಜನ ಪೌರಕಾರ್ಮಿಕರು ಮ್ಯಾನ್‌ಹೋಲ್ ವಿಷಗಾಳಿಯಿಂದ ಮರಣ ಹೊಂದಿದ್ದಾರೆ. ನಗರ ವ್ಯಾಪ್ತಿಯಲ್ಲಿ ಕಳೆದ ಮೂರು ವರ್ಷದಲ್ಲಿ ೧೮ ಮಂದಿ ಪೌರಕಾರ್ಮಿಕರು ಸಾವನ್ನಪ್ಪಿದ್ದಾರೆ. ಈ ಪೌರಕಾರ್ಮಿಕರಲ್ಲಿ ಶೇ.೯೫ರಷ್ಟು ಜನ ತಳಸಮುದಾಯಗಳು ಎಂಬುದು ಗಮನಾರ್ಹ. ಸುಪ್ರೀಂಕೋರ್ಟ್ ಅದೇಶದಂತೆ ಮ್ಯಾನ್‌ಹೋಲ್‌ಗೆ ಪೌರಕಾರ್ಮಿಕರನ್ನು ಇಳಿಸದೆ 'ಸಕ್ಕಿಂಗ್ ಮಿಷನ್'ನಿಂದ ಸ್ವಚ್ಛಗೊಳಿಸುವಂತೆ ಮಾಡುವುದು, ಮುಂದಾಗುವ ಅನಾಹುತಗಳನ್ನು ತಪ್ಪಿಸುವುದು ಸರ್ಕಾರದ ಜವಾಬ್ದಾರಿಯಾಗಬೇಕಾಗಿದೆ.

### ೮.೩. ಮಹಿಳಾ ಪೌರಕಾರ್ಮಿಕರು

ಶೇ.೯೦ರಷ್ಟು ಮಹಿಳಾ ಪೌರಕಾರ್ಮಿಕರು ಕಸಗುಡಿಸುವ, ಮಲ ಬಾಚುವ, ಮೋರಿ ಎತ್ತುವ ಕೆಲಸವನ್ನು ಮಾಡುತ್ತಿದ್ದಾರೆ. ಪೌರಕಾರ್ಮಿಕ ಮಹಿಳೆಯರನ್ನು ಕುರಿತು ಅಧ್ಯಯನಗಳು ಆಗಿರುವುದು ವಿರಳ. ದುಡಿಯುವ ಮಹಿಳೆಯರ ಅಧ್ಯಯನಗಳಲ್ಲೂ ಸಹ ಪೌರಕಾರ್ಮಿಕರು ದುಡಿಯುವ ಮಹಿಳೆಯರು ಎಂದು ಪರಿಗಣಿಸದೇ ಇರುವುದು ಕಂಡುಬರುತ್ತದೆ. ಪೌರಕಾರ್ಮಿಕ ಮಹಿಳೆಯರು ದುಡಿಯುವ ಮಹಿಳೆಯರಲ್ಲವೇ ಎಂಬ ಪ್ರಶ್ನೆ ಮೂಡುತ್ತದೆ. ಪೌರಕಾರ್ಮಿಕ

ಮಹಿಳೆಯರು ನಾಲ್ಕು ರೀತಿಯ ಶೋಷಣೆಗಳಿಗೆ ಒಳಗಾಗುತ್ತಾರೆ. "ಒಂದು ಜಾತಿಯಲ್ಲಿ ಅಸ್ಪೃಶ್ಯರು, ಇನ್ನೊಂದು ವೃತ್ತಿಯಲ್ಲಿ ಅಶುದ್ಧ ಕೆಲಸವನ್ನು ಮಾಡುವವರು, ಅವರು ವಾಸಿಸುವುದು ಸ್ಲಂಗಳಲ್ಲಿ ಎನ್ನುವ ಕಾರಣಕ್ಕಾಗಿ ಶೋಷಣೆಗಳಿಗೆ ಒಳಗಾಗುತ್ತಾರೆ. ಇದಷ್ಟೇ ಅಲ್ಲದೆ ಅವಳು ಮಹಿಳೆಯಾಗಿರುವ ಕಾರಣಕ್ಕೆ ಸಮಾಜದಲ್ಲಿ ಶೋಷಣೆಗೆ ಒಳಗಾಗುತ್ತಾಳೆ."[೩೦] ಈ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರು ಈ ನಾಲ್ಕು ಹಂತಗಳ ಶೋಷಣೆಗಳನ್ನು ಏಕಕಾಲಕ್ಕೆ ಎದುರಿಸಬೇಕಾಗುತ್ತದೆ. ಸಾಮಾಜಿಕ ವ್ಯವಸ್ಥೆಯಲ್ಲಿ ಈ ರೀತಿಯ ಶೋಷಣೆಗಳಿಂದ ಮಹಿಳೆಯರು ಜೀವನ ಸಾಗಿಸಬೇಕಾಗಿರುವುದು ದುರಂತ.

ಇವರಿಗೆ ಪ್ರತಿದಿನದ ಬದುಕೇ ಸವಾಲಾಗಿದೆ. ಅದನ್ನು ನಿಭಾಯಿಸಿಕೊಳ್ಳುವುದೇ ಸಮಸ್ಯೆ. ಬೆಳಗ್ಗೆ ೫.೩೦ಕ್ಕೆ ಪ್ರಾರಂಭವಾದರೆ ರಾತ್ರಿ ೯ರವರೆಗೆ ವಿವಿಧ ಹಂತಗಳಲ್ಲಿ ಅವರು ದುಡಿದು ಜವಾಬ್ದಾರಿಗಳನ್ನು ನಿಭಾಯಿಸಿಕೊಳ್ಳಬೇಕಾಗುತ್ತದೆ. ಆಗ ಮಾತ್ರ ಅವರ ಬದುಕು ಸಾಗುತ್ತದೆ. ಇಲ್ಲವಾದರೆ ಅನೇಕ ಸಮಸ್ಯೆಗಳು ಮೇಲೆ ಎರಗುತ್ತವೆ. ಮಹಿಳೆಯರ ರಕ್ಷಣೆಗೆಂದು ಅಸ್ತಿತ್ವಕ್ಕೆ ಬಂದಿರುವ ಅನೇಕ ಕಾಯ್ದೆಗಳನ್ನು ಅವರು ಬಳಸಿಕೊಳ್ಳಲು ಸಾಧ್ಯವಿಲ್ಲದ ಪರಿಸ್ಥಿತಿ ನಿರ್ಮಾಣವಾಗಿದೆ. ದುಡಿಯುವ ಸ್ಥಳದಲ್ಲಿ ಲೈಂಗಿಕ ದೌರ್ಜನ್ಯ ತಡೆ ಕಾಯ್ದೆ, ವರದಕ್ಷಿಣೆ ನಿಷೇದ ಕಾಯ್ದೆ, ಕೌಟುಂಬಿಕ ಲೈಂಗಿಕ ದೌರ್ಜನ್ಯ ತಡೆ ಕಾಯ್ದೆ, ಈ ಯಾವ ಕಾಯ್ದೆಗಳನ್ನೂ ಬಳಸಲು ಸಾಧ್ಯವಾಗುವುದಿಲ್ಲ. ಬಳಸಲು ಪ್ರಯತ್ನಿಸಿದರೆ ಕೆಲಸ ಕಳೆದುಕೊಳ್ಳುತ್ತಾರೆ. ಈ ಯಾವ ಶೋಷಣೆಗಳನ್ನು ಭಾರತದ ಮಹಿಳಾ ಚಳವಳಿ ವಿರೋಧಿಸಿಲ್ಲ. ಅವುಗಳ ಹೋರಾಟದಲ್ಲಿ ಪೌರಕಾರ್ಮಿಕ ಹೆಣ್ಣುಮಕ್ಕಳ ಹಕ್ಕುಗಳ ಬಗ್ಗೆ ಚರ್ಚೆಯೂ ಆಗಿಲ್ಲ.

ಮಹಿಳಾ ಪೌರಕಾರ್ಮಿಕರಿಗೆ ಕಾನೂನುಬದ್ಧವಾಗಿ ಕೊಡಬೇಕಾದ ಸೌಲಭ್ಯಗಳಿವೆ. ಅವುಗಳನ್ನು ಕೊಡದೇ ಇರುವುದರ ಬಗ್ಗೆ ಯಾರು ಚರ್ಚಿಸುವುದಿಲ್ಲ. ಬೇರೆ ವೃತ್ತಿಗಳನ್ನು ಮಾಡುವ ಹೆಣ್ಣುಮಕ್ಕಳ ಹಕ್ಕುಗಳ ಬಗ್ಗೆ ಚರ್ಚಿಸುವವರಿಗೆ ಪೌರಕಾರ್ಮಿಕ ಮಹಿಳೆಯರು ಆಲೋಚನೆಗೆ ಬರುವುದಿಲ್ಲ. ಕೆಲಸದ ಸ್ಥಳಗಳಲ್ಲಿ ಶೌಚಾಲಯ ಇರಬೇಕು, ಕೆಲಸದ ಸ್ಥಳದಲ್ಲಿ ಕುಡಿಯುವ ನೀರಿರಬೇಕು, ಕೆಲಸದ ಸ್ಥಳದಲ್ಲಿ ಸ್ವಚ್ಛಗೊಳ್ಳಲು ಸ್ನಾನಗೃಹಗಳು ಇರಬೇಕು. ದುಡಿಯುವ ಸ್ಥಳದಲ್ಲಿ ಲೈಂಗಿಕ ದೌರ್ಜನ್ಯ ತಡೆ ಸಮಿತಿ ಇರಬೇಕು. ಈ ಯಾವ ಸೌಲಭ್ಯಗಳು ಪೌರಕಾರ್ಮಿಕ ಮಹಿಳೆಯರು ಕಾರ್ಯನಿರ್ವಹಿಸುವ ಸ್ಥಳಗಳಲ್ಲಿ ಇಲ್ಲ. ಆದರೂ ಯಾವುದೇ ಚಳವಳಿ ಇದರ ಬಗ್ಗೆ ಮಾತನಾಡುವುದಿಲ್ಲ. ಸಮಾಜ ಸೃಷ್ಟಿಸಿದ ಅನಿವಾರ್ಯತೆಗಳಿಂದಾಗಿ ಆ ವೃತ್ತಿ ಒಪ್ಪಿಕೊಂಡ ಸಮುದಾಯದ ಹೆಣ್ಣುಮಕ್ಕಳು ಹೊರಗೆ ಮತ್ತು ಒಳಗೆ ಎರಡೂ ಕಡೆಯಲ್ಲಿ ನಿರಂತರವಾಗಿ ಶೋಷಣೆಗೆ ಒಳಗಾಗುತ್ತಿದ್ದಾರೆ.

### ೮.೪. ಸ್ವಚ್ಛತಾ ಅಭಿಯಾನ

ಕೇಂದ್ರ ಸರ್ಕಾರದ ಮಹತ್ವಾಕಾಂಕ್ಷೆಯ 'ಸ್ವಚ್ಚತಾ ಅಭಿಯಾನ' ದೇಶದಲ್ಲಷ್ಟೇ ಅಲ್ಲ ವಿದೇಶದಲ್ಲೂ ಗಮನ ಸೆಳೆದಿದೆ. ಪ್ರಧಾನಿ ನರೇಂದ್ರ ಮೋದಿ ಅವರಿಂದ ಹಿಡಿದು ಸ್ಥಳೀಯ ಸಣ್ಣಮಟ್ಟ ನಾಯಕರು ಕೂಡ ಪೊರಕೆ, ಗುದ್ದಲಿಗಳನ್ನು ಹಿಡಿದು ಮಾಧ್ಯಮಗಳೆದುರು ಸಾಂಕೇತಿಕವಾಗಿ ಕಾಣಿಸಿಕೊಂಡಿದ್ದಾರೆ. ಅಲ್ಲದೆ ಶಾಲಾ, ಕಾಲೇಜು, ವಿಶ್ವವಿದ್ಯಾಲಯಗಳಿಗೂ ಈ ಅಭಿಯಾನ ವಿಸ್ತರಿಸಿದೆ. ಸ್ವಚ್ಛತೆಯ ಕುರಿತು ಸಾರ್ವಜನಿಕರಲ್ಲಿ ಅರಿವು ಮೂಡಿಸುವ ನಿಟ್ಟಿನಲ್ಲಿ ಇದೊಂದು ಒಳ್ಳೆಯ ಆಂದೋಲನವಾದರೂ, ಪುರಸಭೆಗಳಿಂದ ಮಹಾನಗರಗಳ ಬೀದಿ ಗುಡಿಸಿ, ಕಸ ಎತ್ತುವ ಪೌರಕಾರ್ಮಿಕರ ಬಗ್ಗೆ ಇದುವರೆಗೂ ಯಾರೂ ಮಾತನಾಡಿಲ್ಲ.

ಪಟ್ಟಣ ನಗರಗಳ ನೈರ್ಮಲ್ಯಕ್ಕೆ ತಮ್ಮ ಜೀವನವನ್ನೇ ಮುಡಿಪಾಗಿಟ್ಟಿರುವ ಈ ಪೌರಕಾರ್ಮಿಕರ ಸಮಸ್ಯೆ, ತ್ಯಾಜ್ಯ ನಿರ್ವಹಣೆ ಹಾಗೂ ವಿಲೇವಾರಿ ಕುರಿತು ರಾಷ್ಟ್ರಮಟ್ಟದಲ್ಲಿಯೂ ಪ್ರಸ್ತಾಪವಾಗುತ್ತಿಲ್ಲ. ಹೀಗಿರುವಾಗ 'ಸ್ವಚ್ಚತಾ ಅಭಿಯಾನದ ನಿಜವಾದ ಉದ್ದೇಶ ಈಡೇರುವುದಾದರೂ ಹೇಗೆ? ಬೀದಿಯಲ್ಲಿರುವ ಕಸವನ್ನು ಗುಡಿಸುವುದರಿಂದ ಭಾರತ ಶುದ್ಧವಾಗುತ್ತಿದೆಯೇ? ಸಾವಿರಾರು ವರ್ಷಗಳಿಂದ ಜಾತಿ ಆಧಾರಿತ ಅಸಮಾನತೆ, ಅನ್ಯಾಯ, ಮಡಿ, ಮೈಲಿಗೆ, ಸಾಮಾಜಿಕ, ಧಾರ್ಮಿಕ, ಅಸಂಖ್ಯಾತ ಅಸಮಾನತೆ, ಅವಮಾನಗಳಿಂದ ಕೂಡಿರುವ ಭಾರತದ ಜಾತಿವಾದಿ, ಮತೀಯವಾದಿ, ಮನುವಾದಿ ಮನಸ್ಸುಗಳು ಶುದ್ಧವಾಗದೇ ಕೇವಲ ಬೀದಿಯಲ್ಲಿರುವ ಕಸವನ್ನು ಗುಡಿಸುವುದರಿಂದ ಭಾರತ ಸ್ವಚ್ಛವಾಗುತ್ತದೆಯೇ ಎಂಬ ಸಂಗತಿಯನ್ನು ಪ್ರಜ್ಞಾವಂತ ಸಮಾಜ ಆಲೋಚಿಸಬೇಕಾಗಿದೆ. ಸಾಮಾನ್ಯರನ್ನು ಬದಿಗಿರಿಸಿ, ಸಾಮಾನ್ಯವು ಸುದ್ದಿಯಾಗುತ್ತದೆ ಎಂಬುದಕ್ಕೆ ಸ್ವಚ್ಛತಾ ಅಭಿಯಾನ ಉದಾಹರಣೆಯಾಗಿ ನಿಲ್ಲುತ್ತದೆ.

ಹರಿಜನ ಪತ್ರಿಕೆಯಲ್ಲಿ ಗಾಂಧಿ ಅವರು ಪೌರಕಾರ್ಮಿಕರನ್ನು ಕುರಿತು ಈ ರೀತಿ ಉಲ್ಲೇಖಿಸಿದ್ದಾರೆ. "ವೈದ್ಯ ರೋಗಿಯನ್ನು ಶುಶ್ರೂಷೆ ಮಾಡುತ್ತಾನೆ. ರೋಗಿಯ ಗಾಯವನ್ನು ತೊಳೆದು ಬ್ಯಾಂಡೇಜು ಕಟ್ಟಿ, ರೋಗಮುಕ್ತನನ್ನಾಗಿ ಮಾಡುತ್ತಾನೆ. ಪರಿಶುದ್ಧನನ್ನಾಗಿ ಮಾಡುತ್ತಾನೆ. ಆದ್ದರಿಂದ ರೋಗಿಯು ವೈದ್ಯನನ್ನು ಕೃತಜ್ಞತೆಯಿಂದ ನೋಡುತ್ತಾನೆ. ತಾಯಿಯು ಮಗುವಿನ ಮಲಿನತೆಯನ್ನು ತೊಳೆದು ಶುಚಿ ಮಾಡುತ್ತಾಳೆ. ತಾಯಿಯನ್ನು ಮಗು ಕೃತಜ್ಞತೆಯಿಂದ ನೋಡುತ್ತದೆ. ಆದರೆ ಈ ಊರನ್ನು ಶುಚಿ ಮಾಡುವ ಪೌರಕಾರ್ಮಿಕರನ್ನು ಸಮಾಜ ಏಕೆ ತಿರಸ್ಕಾರದಿಂದ ನೋಡುತ್ತಿದೆ?"[೩೧] ಚಿನ್ನಸ್ವಾಮಿ ಸೋಸಲೆ ಅವರು ಪೌರಕಾರ್ಮಿಕರ ಬಗ್ಗೆ ಚರ್ಚಿಸುವ ಸಂದರ್ಭದಲ್ಲಿ ದೇವನೂರ ಮಹಾದೇವ ಅವರ ಪತ್ನಿ ಸುಮಿತ್ರಬಾಯಿ ಅವರ ಸಂದರ್ಶನವನ್ನು ಕುರಿತು, ಈ ಕೆಳಗಿನಂತೆ ಉಲ್ಲೇಖ ಮಾಡಿದ್ದಾರೆ. "ಸುಮಿತ್ರಬಾಯಿ ಅವರು

ತಮ್ಮ ಸಂಶೋಧನೆಗಾಗಿ ಒಬ್ಬ ಹಿರಿಯ ಪೌರಕಾರ್ಮಿಕ ಹಿರಿಯನನ್ನು ಭೇಟಿಯಾಗಿ 'ನಿಮಗೆ ಮ್ಯಾನ್‌ಹೋಲ್ ಡ್ರೈನೇಜ್ ಕೆಲಸ ಮಾಡಲು ಅಸಹ್ಯ ಅನಿಸುವುದಿಲ್ಲವೆ?' ಎಂದು ಪ್ರಶ್ನಿಸಿದ್ದಕ್ಕೆ, 'ಯಾಕಮ್ಮಾ ಕಷ್ಟ, ನನ್ನ ಮಕ್ಕಳದು ಅಂತ ಅಂತ್ಕಂಡ್ರಾಯ್ತು' ಅಂದರಂತೆ" ಮಲ ಬಾಚುವ, ಕಸ ಗುಡಿಸುವ ವೃತ್ತಿಯನ್ನು ಮಾಡುತ್ತಿರುವ ಪೌರಕಾರ್ಮಿಕರನ್ನು ಭಾರತೀಯ ಸಮಾಜ ಶೋಷಣೆಗೆ ಒಳಪಡಿಸುತ್ತಿದೆ. ಆದರೆ ಪೌರಕಾರ್ಮಿಕರು ತಮ್ಮ ವೃತ್ತಿಯನ್ನು ತಾಯಿಯಂತೆ ನಿರ್ವಹಿಸುತ್ತಿದ್ದಾರೆ. ಮೇಲ್ಕಂಡ ಹೇಳಿಕೆಯನ್ನು ಕುರಿತು ವಡ್ಡಗೆರೆ ನಾಗರಾಜಯ್ಯ ಅವರು ಕೂಡ ಚರ್ಚಿಸಿದ್ದಾರೆ. ಪೌರಕಾರ್ಮಿಕರು ಎಂದರೆ ಸರ್ಕಾರಕ್ಕೆ ಸಮಾಜಕ್ಕೆ ಏಕೆ ತಿರಸ್ಕಾರ? ಅವರ ಬಗ್ಗೆ ಇಷ್ಟೊಂದು ತಿರಸ್ಕಾರ ಭಾವನೆ ಬರಲು ಕಾರಣ ಏನು? ಯಾಕೆ, ಜನ ಅವರೊಡನೆ ಅಗೌರವದಿಂದ ವರ್ತಿಸುತ್ತಾರೆ. ಎನ್. ಚಿನ್ನಸ್ವಾಮಿ ಸೋಸಲೆ ಅವರ ಪ್ರಕಾರ ಭಾರತೀಯ ಸಮಾಜದಲ್ಲಿ ಸಾಹಿತ್ಯ, ವಿಜ್ಞಾನ, ಧರ್ಮ ಕೇಂದ್ರಿತ ಸಾಧನೆಗಳೇ ಸಾಧನೆಗಳಾ? ಪೌರಕಾರ್ಮಿಕರ ಕೆಲಸಗಳು ಸಾಧನೆ, ಪುರಸ್ಕಾರಗಳಿಗೆ ಅರ್ಹವಲ್ಲವೇ? ಒಬ್ಬ ಸೈನಿಕನ ಸೇವೆ ದೇಶ ಸೇವೆಯಾದರೆ, ಪೌರಕಾರ್ಮಿಕನ ಕಾರ್ಯಗಳು ದೇಶಸೇವೆ ಅಲ್ಲವಾ? ಇದುವರೆಗೆ ಯಾಕೆ ಅವರಿಗೆ ಒಂದೇ ಒಂದು ಪ್ರಶಸ್ತಿ, ಪುರಸ್ಕಾರಗಳನ್ನು ಸರ್ಕಾರ, ಸಮಾಜ ನೀಡಿಲ್ಲ ಎಂದು. ಈ ಮೇಲ್ಕಂಡ ಎಲ್ಲಾ ಅಂಶಗಳನ್ನು ಕುರಿತು ಪ್ರಜ್ಞಾವಂತ ಸಮುದಾಯ ವಿಮರ್ಶಿಸಬೇಕಾಗಿದೆ.

ಪೌರಕಾರ್ಮಿಕರ ಕಾರ್ಯಗಳನ್ನು ಗುರುತಿಸುವಂತಹ ಪ್ರಯತ್ನಗಳು ನಡೆದಿರುವುದು ವಿರಳವೆನ್ನಬಹುದು. ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕಂಡುಬಂದಂತಹ ಪ್ರಮುಖ ಘಟನೆ ಈ ಕೆಳಕಂಡಂತಿದೆ. ೨೦೧೨–೧೩ನೇ ಸಾಲಿನಲ್ಲಿ ತುಮಕೂರು ಜಿಲ್ಲೆಯ ದಾಸಾಲುಕುಂಟೆ ಗ್ರಾಮದಲ್ಲಿ ಪ್ರತಿವರ್ಷ ನಡೆಯುವ ಚೌಡೇಶ್ವರಿ ಉತ್ಸವದಲ್ಲಿ ಇಡೀ ಗ್ರಾಮದ ಕಸವನ್ನು ಗುಡಿಸುತ್ತಿದ್ದಂತಹ ಮುದ್ದರಂಗಮ್ಮ ಎಂಬ ಮಹಿಳೆಯನ್ನು ಸನ್ಮಾನಿಸಿದ್ದು ಪ್ರಶಂಸನೀಯಾಗಿದೆ. ಅಲ್ಲದೆ, ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಡಾ.ಎನ್.ಚಿನ್ನಸ್ವಾಮಿ ಸೋಸಲೆ ಅವರು ೨೦೧೬ನೇ ಸಾಲಿನಲ್ಲಿ ಬಿ.ಬಸವಲಿಂಗಪ್ಪ ಅವರ ಜನ್ಮದಿನದಂದು 'ಧೀಮಂತ ಕ್ರಾಂತಿಕಾರಿ ಬಿ.ಬಸವಲಿಂಗಪ್ಪ ಸಂಸ್ಮರಣ ಸಂಪುಟ' ಬೃಹತ್ ಕೃತಿಯನ್ನು ಸಂಪಾದಕರಾಗಿ ಹೊರತಂದರು. ಬಿಡುಗಡೆಯ ದಿನ ಇಪ್ಪತ್ತು ಜನ ಪೌರಕಾರ್ಮಿಕರಿಗೆ ೧೦,೦೦೦ರೂ.ಗಳ ಮೌಲ್ಯದ ಕ್ರಾಂತಿಕಾರಿ ಬಿ.ಬಸವಲಿಂಗಪ್ಪ ಪೌರಪ್ರಶಸ್ತಿ ನೀಡಿ ಅವರನ್ನು ಸನ್ಮಾನಿಸಿದ್ದು ಉಲ್ಲೇಖಾರ್ಹವಾದದ್ದು.

ರಾಜ್ಯದಲ್ಲಿ ಇಂದಿಗೂ ಪರಿಪೂರ್ಣವಾಗಿ ಪೌರಕಾರ್ಮಿಕರ ಬಗ್ಗೆ ಸ್ಪಷ್ಟವಾದ ಮಾಹಿತಿ ಇಲ್ಲ. ಗ್ರಾಮ ಪಂಚಾಯಿತಿ, ನಗರಸಭೆ, ಪುರಸಭೆಗಳಲ್ಲಿ ದುಡಿಯುತ್ತಿರುವ ಪೌರಕಾರ್ಮಿಕರ

ಸಂಖ್ಯೆ ನಿರ್ದಿಷ್ಟವಾಗಿ ಸಿಕ್ಕಿಲ್ಲ, ಕರ್ನಾಟಕದಲ್ಲಿ ತಳಸಮುದಾಯಗಳ ವೃತ್ತಿಗಳು ಇಂದಿನವರೆಗೂ ಸತ್ತ ದನಗಳನ್ನು ಸಾಗಿಸುವುದು, ಚರ್ಮ ಸುಲಿಯುವುದು, ಹದ ಮಾಡುವುದು, ಚರ್ಮದ ವಸ್ತುಗಳನ್ನು ಸಿದ್ಧಪಡಿಸುವುದು, ಮಲ ಹೊರುವುದು, ಮದುವೆಗಳಲ್ಲಿ ಮತ್ತು ಹೆಣದ ಮೆರವಣಿಗೆಗಳಲ್ಲಿ ವಾದ್ಯ ನುಡಿಸುವುದು, ಸ್ಮಶಾನದಲ್ಲಿ ಹೆಣ ಹುಗಿಯಲು ಗುಂಡಿ ಅಗೆಯುವುದು, ಬೀದಿ ಕಸ ತೆಗೆಯುವುದು, ಸಾವಿನ ಸುದ್ದಿ ತಿಳಿಸುವುದು, ಬಿಟ್ಟಿ ಕೆಲಸದವರಾಗಿ ಅಥವಾ ತೀರ ಕಡಿಮೆ ಹಣಕ್ಕೆ ತಮ್ಮ ಯಜಮಾನರ ಹೊಲ ತೋಟಗಳಲ್ಲಿ ದುಡಿಯುವುದು ಕೂಡ ಸಾಮಾನ್ಯವಾಗಿದೆ.

## ೮.೫. ಆರೋಗ್ಯ

ಬಳ್ಳಾರಿ ಜಿಲ್ಲೆ, ಹೊಸಪೇಟೆ ತಾಲ್ಲೂಕಿನ ಕಮಲಾಪುರ ಗ್ರಾಮದಲ್ಲಿ ಪೌರಕಾರ್ಮಿಕರಿಗೆ ಸಂಬಂಧಿಸಿದಂತೆ ಕ್ಷೇತ್ರಕಾರ್ಯವನ್ನು ಕೈಗೊಂಡಂತಹ ಸಂದರ್ಭದಲ್ಲಿ, ವಕ್ತೃಗಳಿಂದ ಅವರ ವೃತ್ತಿ ಜೀವನಕ್ಕೆ ಸಂಬಂಧಿಸಿದಂತೆ ಹಲವಾರು ಮಾಹಿತಿಗಳನ್ನು ಸಂಗ್ರಹಿಸಲಾಯಿತು. ದುರ್ಗಮ್ಮ ಅವರು "ನಮ್ಮ ಪೂರ್ವಿಕರು ಆಂಧ್ರ ಪ್ರದೇಶದಿಂದ ವಲಸೆ ಬಂದು ಕಮಲಾಪುರದಲ್ಲಿ ನೆಲೆಸಿದ್ದಾರೆ. ವಸತಿ ನಿಲಯಗಳಲ್ಲಿ ಈ ವೃತ್ತಿಯನ್ನು ನಿರ್ವಹಿಸುವ ನಮ್ಮನ್ನು ಅಸ್ಪೃಶ್ಯರನ್ನಾಗಿ ಕಾಣಲಾಗುತ್ತದೆ."[೩೨] ಎಂದು ಮಾಹಿತಿ ನೀಡಿದ್ದಾರೆ.

ಸಾಲಮ್ಮ ಅವರು "ಆರು ವರ್ಷದಿಂದ ಹೊಟ್ಟೆಪಾಡಿಗಾಗಿ ಈ ವೃತ್ತಿಯನ್ನು ಮಾಡುತ್ತಿದ್ದೇನೆ. ಐದು ಅಥವಾ ಆರು ತಿಂಗಳಿಗೆ ವೇತನ ಬರುತ್ತದೆ"[೩೩] ಎಂದು ವಿಷಾದ ವ್ಯಕ್ತಪಡಿಸಿದ್ದಾರೆ.

ಕೇಶವ ಅವರು "ನಮ್ಮ ತಂದೆ ಈ ವೃತ್ತಿ ನಿರ್ವಹಿಸುವ ಸಂದರ್ಭದಲ್ಲಿ ಕಾಲು ಮುರಿದುಕೊಂಡರು. ವೃತ್ತಿ ನಿರ್ವಹಣೆ ಸಂದರ್ಭದಲ್ಲೇ ಸಹೋದ್ಯೋಗಿಗಳು ಐದು ಮಂದಿ ಸಾವನ್ನಪ್ಪಿದ್ದರು, ಆದರೆ ಯಾವುದೇ ಪರಿಹಾರ ಸೌಲಭ್ಯಗಳನ್ನು ನೀಡಲಿಲ್ಲ. ಈ ವೃತ್ತಿಯನ್ನು ಮಾಡುತ್ತಿರುವವರು ೪೦ ಮಂದಿ ಇಲ್ಲಿ ಇದ್ದಾರೆ. ಇವರಲ್ಲಿ ಬಹುತೇಕ ಮಂದಿ ಮದ್ಯಪಾನ ಮುಂತಾದ ದುಶ್ಚಟಗಳಿಗೆ ಬಲಿಯಾಗಿದ್ದಾರೆ"[೩೪] ಎಂದು ಮಾಹಿತಿ ನೀಡಿದ್ದಾರೆ.

ಕೆಂಚಮ್ಮ ಅವರು "ನಮಗೆ, ನಮ್ಮ ಮಕ್ಕಳ ಶಿಕ್ಷಣಕ್ಕೆ ಯಾವುದೇ ವಿಶೇಷ ಸೌಲಭ್ಯಗಳನ್ನು ನೀಡುತ್ತಿಲ್ಲ"[೩೫] ಎಂದು ಮಾಹಿತಿ ನೀಡಿದ್ದಾರೆ. ಈ ಎಲ್ಲ ವಕ್ತೃಗಳ ಹೇಳಿಕೆಗಳನ್ನು ಗಮನಿಸಿದಾಗ ಮುಖ್ಯವಾಗಿ ಕಂಡುಬರುವಂತಹ ಅಂಶಗಳೆಂದರೆ ಈ ಪೌರಕಾರ್ಮಿಕರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕೆಳಸ್ತರದಲ್ಲಿರುವುದು ಕಂಡು ಬರುತ್ತದೆ. ಸೌಲಭ್ಯಗಳಿಂದ ವಂಚಿತರಾಗಿದ್ದಾರೆ.

ಬಹುತೇಕ ಮಂದಿಯ ಪೂರ್ವಿಕರು ಆಂಧ್ರ ಪ್ರದೇಶದಿಂದ ವಲಸೆ ಬಂದವರಾಗಿದ್ದಾರೆ. ಇವರ ಮಾತೃಭಾಷೆ ತೆಲುಗು.

ಬಹುತೇಕ ಮುನಿಸಿಪಾಲಿಟಿಗಳಲ್ಲಿ ಹಳೆಯ ಪೊರಕೆ, ಬುಟ್ಟಿ ಮತ್ತು ಸನಿಕೆಗಳನ್ನು ಪೌರಕಾರ್ಮಿಕರಿಗೆ ಕೆಲಸಕ್ಕಾಗಿ ನೀಡಲಾಗುತ್ತಿದೆ. ಬಹುತೇಕ ಕಡೆಗಳಲ್ಲಿ ಈ ಕೆಲಸದಲ್ಲಿ ತೊಡಗಿರುವವರಿಗೆ ಗಮ್ ಶೂಗಳು, ಕೈಚೀಲ ಅಥವಾ ಮುಖವಾಡಗಳನ್ನು ನೀಡಲಾಗಿಲ್ಲ. ಇತರರ ಆರೋಗ್ಯ ಮತ್ತು ಬದುಕನ್ನು ಕಾಯುವ ಈ ಜನಕ್ಕೆ ಆಧುನಿಕ ಸಾಧನಗಳಿಲ್ಲದೆ ಹಲವಾರು ಕಾಯಿಲೆಗಳಿಗೆ ತುತ್ತಾಗುತ್ತಿದ್ದಾರೆ. ಈ ಹಿಂದಿನ ರಾಷ್ಟ್ರೀಯ ಯೋಜನಾ ಸಮಿತಿಯ ಅಧ್ಯಯನದ ಪ್ರಕಾರ ಈ ವೃತ್ತಿಯಲ್ಲಿ ತೊಡಗಿರುವವರು ಯಾವ ರೋಗಗಳಿಗೆ ಬಲಿಯಾಗುತ್ತಿದ್ದಾರೆ ಎಂಬುದರ ಬಗ್ಗೆ ಅಂಕಿ ಅಂಶಗಳನ್ನು ನೀಡಿದೆ.

*"ಶೇ. ೪೯.೩ರಷ್ಟು ಮಂದಿ ಉಸಿರಾಟದ ತೊಂದರೆಗಳಿಂದ ನರಳುತ್ತಿದ್ದಾರೆ.

*ಶೇ. ೧೨.೫ರಷ್ಟು ಜನ ಚರ್ಮರೋಗಗಳಿಂದ ವೇದನೆ ಪಡುತ್ತಿದ್ದಾರೆ.

*ಶೇ. ೫೫.೯ರಷ್ಟು ಜನ ಸಂಧಿವಾತದ ಬಗ್ಗೆ ದೂರಿದ್ದಾರೆ.

*ಶೇ. ೭.೨ ರಷ್ಟು ಜನ ಜ್ವರ ಪೀಡಿತರು.

*ಶೇ. ೨೬.೩ರಷ್ಟು ಜನ ಕರಳು ಬೇನೆಗೊಳಗಾಗಿದ್ದಾರೆ.

*ಶೇ. ೧೧.೮ರಷ್ಟು ಮಂದಿ ತೂಕ ಕಳೆದುಕೊಂಡಿದ್ದಾರೆ.

*ಶೇ. ೧೨.೫ರಷ್ಟು ಜನ ಮಾನಸಿಕ ಒತ್ತಡ ಮತ್ತು ಮದ್ಯಪಾನ ವ್ಯಸನಿಗಳಾಗಿದ್ದಾರೆ."[೩೬]

(ವೃತ್ತಿಪರ ಆರೋಗ್ಯ ಮತ್ತು ರಕ್ಷಣಾ ಕೇಂದ್ರ ವರದಿ, ಮುಂಬಯಿ, ೧೯೯೬)

ಈ ಮೇಲ್ಕಂಡ ಅನಾರೋಗ್ಯಗಳ ಜೊತೆಗೆ ಪೌರಕಾರ್ಮಿಕರು ಖಾಯಂ ಉದ್ಯೋಗ ವಿಲ್ಲದಿರುವುದು, ವಸತಿ ಸಮಸ್ಯೆ, ಅನಕ್ಷರತೆ, ಸರಿಯಾಗಿ ವೇತನ ಪಾವತಿಯಾಗದಿರುವುದು, ಪೌಷ್ಠಿಕತೆಯ ಕೊರತೆ, ಶುದ್ಧ ಕುಡಿಯುವ ನೀರು ಇಲ್ಲದಿರುವುದು, ರಜೆಯ ಸೌಲಭ್ಯವಿಲ್ಲ ದಿರುವುದು– ಹೀಗೆ ಹಲವಾರು ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. 'ರೇಷ್ಮೆ ಹುಳ ಗೂಡು ಕಟ್ಟುತ್ತೆ. ಆ ಹುಳುಗಳನ್ನು ಬೇಯಿಸಿ ಗೂಡಿನ ನೂಲನ್ನು ಮಡಿಬಟ್ಟೆಗಾಗಿ ಬಳಸಲಾಗುತ್ತದೆ. ನಗರದ ಮಡಿ, ಸ್ವಚ್ಛತೆಗಾಗಿ ಪೌರಕಾರ್ಮಿಕರು ಬೇಯಿಸಲ್ಪಡುತ್ತಿದ್ದಾರೆ."[೩೭] ಎಂಬ ದೇವನೂರ ಮಹಾದೇವ ಅವರ ಮಾತು ವಾಸ್ತವವಾಗಿದೆ.

## ೮.೬. ಮಲ ಹೊರುವ ಪದ್ಧತಿ ನಿಷೇಧ ಕಾನೂನು

ಬಿ.ಬಸವಲಿಂಗಪ್ಪ ಪೌರಾಡಳಿತ ಸಚಿವರಾಗಿದ್ದಾಗ ತಲೆ ಮೇಲೆ ಮಲ ಹೊರುವ ಪದ್ಧತಿಯನ್ನು ನಿಷೇಧಿಸಿದರು. ಇದು ೧೯೭೦ರ ದಶಕ ಇತಿಹಾಸದ ಕಾಲಘಟ್ಟದಲ್ಲಿ ಮಹತ್ವದ ತಿರುವು. ಬಿ.ಬಸವಲಿಂಗಪ್ಪ ಅವರು ಸಾವಿರಾರು ವರ್ಷಗಳಿಂದ ಜೀವಂತಿಕೆ ಇಲ್ಲದೆ ಸತ್ತಂತೆ ಇದ್ದ ಕನ್ನಡ ಸಾಹಿತ್ಯವನ್ನು ಬೂಸಾ ಎನ್ನುವ ಚಾಟಿ ಏಟಿನಿಂದ ಬಾಸುಂಡೆ ಬರುವ ಹಾಗೆ ಬಡಿದು ದಲಿತರನ್ನು ಎಚ್ಚರಿಸಿದ ಕಾಲ"[೩೮] ಎಂದು ಎನ್.ಚಿನ್ನಸ್ವಾಮಿ ಸೋಸಲೆ ಅವರು ಅಭಿಪ್ರಾಯಪಟ್ಟಿದ್ದಾರೆ. ಬಿ.ಬಸವಲಿಂಗಪ್ಪ ಅವರು ಸಾಹಿತ್ಯ ವಲಯದಲ್ಲೇ ಒಂದು ಹೊಸ ಯುಗವನ್ನು ಆರಂಭಿಸಿದರು.

ಮಲ ಹೊರುವ ಪದ್ಧತಿ ನಿಷೇಧ ಕಾಯ್ದೆ ಜಾರಿಗೆ ತಂದು ಕಾಯ್ದೆ ಉಲ್ಲಂಘಿಸಿದರೆ ಒಂದು ವರ್ಷ ಜೈಲು, ಎರಡು ಸಾವಿರ ರೂ. ದಂಡ ವಿಧಿಸಲಾಯಿತು. ಆದರೂ ಕಳೆದ ವರ್ಷಗಳಲ್ಲಿ ಬಹಳಷ್ಟು ಮಂದಿ ಪೌರಕಾರ್ಮಿಕರು ಮಲಗುಂಡಿಯಲ್ಲಿ ಸಿಕ್ಕು ಸಾವನ್ನಪ್ಪಿದ್ದಾರೆ. 'ಬಸವಲಿಂಗಪ್ಪ ಅವರು ತಲೆಯ ಮೇಲೆ ಮಲ ಹೊರುವ ಪದ್ಧತಿಯನ್ನು ರದ್ದುಪಡಿಸಿದ ಇಪ್ಪತ್ತು ವರ್ಷಗಳ ನಂತರ ರಾಷ್ಟ್ರಕ್ಕೆ ಎಚ್ಚರವಾಯಿತು. ಪಿ.ವಿ.ನರಸಿಂಹರಾವ್ ಅವರು ಪ್ರಧಾನ ಮಂತ್ರಿಯಾಗಿದ್ದ ಸಂದರ್ಭದಲ್ಲಿ ಮಲ ಹೊರುವ ಪದ್ಧತಿಯನ್ನು ರದ್ದುಗೊಳಿಸಲು 'ಎಂಪ್ಲಾಯ್‌ಮೆಂಟ್ ಆಫ್ ಮ್ಯಾನ್ಯುಯಲ್ ಸ್ಕ್ಯಾವೇಂಜಿಂಗ್ ಅಂಡ್ ಕನ್ಸಟ್ರಕ್ಷನ್ ಆಫ್ ಡ್ರೈಲೆಟ್ರಿನ್ಸ್ ಪ್ರಾಹಿಬಿಷನ್ ಆಕ್ಟ್ ೧೯೯೩' ಎಂಬ ಕಾನೂನನ್ನು ಪಾಸು ಮಾಡಿದರು."[೩೯] ಮಲ ಹೊರುವ ಪದ್ಧತಿ ಆಚರಣೆಯಲ್ಲಿ ಭಾರತದಲ್ಲಿ ಕರ್ನಾಟಕ ೪ನೇ ಸ್ಥಾನದಲ್ಲಿದೆ. ಪೌರಕಾರ್ಮಿಕರ ಉದ್ಯೋಗ ಹಾಗೂ ಒಣಪಾಯಿಖಾನೆ (ನಿಷೇಧ) ೧೯೯೩ರ ಕಾಯ್ದೆಯು ಮಲ ಹೊರುವ ಪದ್ಧತಿಯನ್ನು ನಿಷೇಧಿಸಿದೆ. ೨೦೧೧ರ ಜುಲೈನಲ್ಲಿ ಹಾವೇರಿ ಜಿಲ್ಲೆಯ ಸವಣೂರಿನ ಭಂಗಿ ಸಮುದಾಯದವರು ಈ ಅನಿಷ್ಟ ಪದ್ಧತಿಯನ್ನು ವಿರೋಧಿಸಿ ಮಲಸ್ನಾನ ಮಾಡಿದಾಗ ಸರ್ಕಾರ ಎಚ್ಚೆತ್ತುಕೊಂಡು ಪ್ರಾಮಾಣಿಕ ಪ್ರಯತ್ನ ಮಾಡಿದ್ದರೆ, ಈ ಸಮಸ್ಯೆಯನ್ನು ಹೋಗಲಾಡಿಸಬಹುದಿತ್ತು.

ಬಸವಲಿಂಗಪ್ಪ ಅವರ ನಂತರ ಜಾರಿಯಾದ ವರದಿಗಳಲ್ಲಿ ಐ.ಪಿ.ಡಿ. ಸಾಲಪ್ಪ ಸಮಿತಿ ವರದಿ ಉಲ್ಲೇಖಾರ್ಹ. ಆ ಪ್ರಕಾರ ಈ ವೃತ್ತಿಯಲ್ಲಿ ತೊಡಗಿರುವ ವ್ಯಕ್ತಿ ಮತ್ತು ಕುಟುಂಬಗಳ ಪುನರ್ವಸತಿ ಕುರಿತು ಐ.ಪಿ.ಡಿ. ಸಾಲಪ್ಪ ಅವರ ಸಮಿತಿ ವರದಿ ಇಂದಿಗೂ ಅನುಷ್ಠಾನ ಆಗಿಲ್ಲ. "೧೯೯೩ರಲ್ಲಿ ಭಾರತ ಸರ್ಕಾರ ಮಲ ಹೊರುವ ಪದ್ಧತಿಯನ್ನು ನಿಷೇಧಿಸಿ ಕಾಯ್ದೆ

ಜಾರಿಗೊಳಿಸಿತ್ತಾದರೂ ಈ ಕಾಯ್ದೆ ಹಲವು ದೋಷಗಳಿಂದ ಕೂಡಿದ್ದ ಕಾರಣ ಮಲ ಬಾಚುವ ಕಾರ್ಮಿಕರ ಹಿತ ಕಾಪಾಡುವಲ್ಲಿ ವಿಫಲವಾಯಿತು."[೪೦] ಸರ್ಕಾರ ಕಾಲಕಾಲಕ್ಕೆ ಹಲವು ಯೋಜನೆಗಳನ್ನು ಜಾರಿ ಮಾಡುತ್ತದೆ. ಪೌರಕಾರ್ಮಿಕರ ಅಭಿವೃದ್ಧಿಗೆ ಸಂಬಂಧಿಸಿದಂತೆ ಸರ್ಕಾರ ಯೋಜನೆಗಳನ್ನು ರೂಪಿಸುವಲ್ಲಿ, ಪ್ರಸ್ತುತ ಅಧ್ಯಯನ ಉಪಯುಕ್ತವಾಗುವುದೆಂಬುದು ಈ ಅಧ್ಯಯನದ ಆಶಯವಾಗಿದೆ. ಮಲ ಬಾಚುವ ಪದ್ಧತಿ ನಿಷೇಧ ಮಾಡುವುದರ ಜೊತೆಗೆ ಸರ್ಕಾರ ಸಕ್ಕಿಂಗ್ ಮಿಷನ್‌ನಂತಹ ಯಂತ್ರಗಳನ್ನು ಜನಸಾಮಾನ್ಯರಿಗೆ ಸಿಗುವಂತೆ ಮಾಡಬೇಕು. ಆಗ ಮಾತ್ರ ಈ ಕಾನೂನು ಯಶಸ್ವಿಯಾಗಲು ಸಾಧ್ಯ. ಪರ್ಯಾಯ ವ್ಯವಸ್ಥೆಗಳನ್ನು ರೂಪಿಸುವುದು ಸರ್ಕಾರದ ಜವಾಬ್ದಾರಿಯಾಗಬೇಕಿದೆ.

**ಕೊನೆ ಟಿಪ್ಪಣಿಗಳು**

೧. ಮಾರುತಿ ಹೆಚ್., **ಅಂಧಕಾರದಲ್ಲೇ ಉಳಿದಿರುವ ಪೌರಕಾರ್ಮಿಕರು**, ಸಂವಾದ, ಜನವರಿ ೨೦೧೫, ಪು.೦೭

೨. ಲಕ್ಷ್ಮಣ್ ತೆಲಗಾವಿ, **ಚಮ್ಮಾರರು: ಸಾಮುದಾಯಿಕ ಗ್ರಹಿಕೆಗಳು**, ಸುಂದರ ಪುಸ್ತಕ ಪ್ರಕಾಶನ, ಧಾರವಾಡ, ೨೦೧೬, ಪು.೦೧

೩. ಡೊಮಿನಿಕ್ ಡಿ.(ಅನು)., **ಪೌರಕಾರ್ಮಿಕರ ಗುತ್ತಿಗೆ ಯಾರಿಗೆ?**, ಸಂವಾದ, ನವೆಂಬರ್, ೨೦೦೪, ಪು.೩೨

೪. ಚಿನ್ನಸ್ವಾಮಿ ಸೋಸಲೆ ಎನ್., **ಭಾರತೀಯ ಸಮಾಜ ಮತ್ತು ದಲಿತರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೫. ಶರ್ಮಾ ಆರ್.ಎಸ್., **ಪ್ರಾಚೀನ ಭಾರತದಲ್ಲಿ ಶೂದ್ರರು**, ಶ್ರೀನಿವಾಸ ಮೂರ್ತಿ ಜೆ., ಶೋಭಾ ಆರ್., ಗುರುದತ್ತ ಎಸ್., ರಾಮಕೃಷ್ಣ ಜಿ (ಅನು)., ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೦೯

೬. ಚಿದಾನಂದಮೂರ್ತಿ ಎಂ., **ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ**, ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೧

೭. ಅದೇ, ಪು.

೮. ಚಂದ್ರಶೇಖರ್ ಆರ್.ವಿ., **ಸಮಾನ ಕೆಲಸಕ್ಕೆ, ಸಮಾನ ವೇತನ; ತಪ್ಪುವುದೇ ಗುತ್ತಿಗೆ ಪೌರಕಾರ್ಮಿಕರ ಬವಣೆ**, ಸಂವಾದ, ೨೦೧೫, ಪು.೨೬

೯. ಬಿಪಿನ್‌ಚಂದ್ರ, ಗೋಪಾಲರಾವ್ ಎಚ್.ಎಸ್.(ಅನು)., **ಆಧುನಿಕ ಭಾರತದ ಇತಿಹಾಸ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೨

೧೦. ಅದೇ, ಪು

೧೧. ಚಂದ್ರಶೇಖರ್ ಆರ್.ವಿ., **ಸಮಾನ ಕೆಲಸಕ್ಕೆ ಸಮಾನ ವೇತನ: ತಪ್ಪುವುದೇ ಗುತ್ತಿಗೆ ಪೌರಕಾರ್ಮಿಕರ ಬವಣೆ,** ಸಂವಾದ, ೨೦೧೫, ಪು.೨೭

೧೨. ಗುರುಲಿಂಗಪ್ಪ ಕೆ., **ಸಫಾಯಿ ಕರ್ಮಚಾರಿಗಳ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಗಳು, ೨೦೧೨-೧೩,** ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೭೦

೧೩. ಅದೇ, ಪು. ೬೭

೧೪. ಪ್ರಧಾನ್ ಗುರುದತ್ತ (ಪ್ರ.ಸಂ)., **ಡಾ.ಬಾಬಾ ಸಾಹೇಬ್ ಅಂಬೇಡ್ಕರ್ ಅವರ ಸಮಗ್ರ ಬರಹಗಳು ಮತ್ತು ಭಾಷಣಗಳು, ೨೦೧೦, ಸಂಪುಟ-೫,** ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಮತ್ತು ಕುವೆಂಪು ಭಾಷಾ ಭಾರತಿ ಪ್ರಾಧಿಕಾರ, ಬೆಂಗಳೂರು.

೧೫. ರಘೋತ್ತಮ ಹೊ.ಬ., **ಅಸ್ಪೃಶ್ಯತೆ ಉಳಿಯಲು ಶೋಷಿತ ಸಮುದಾಯಗಳ ಕೀಳು ಉದ್ಯೋಗಗಳೂ ಕಾರಣ? ಭೀಮವಾದ,** ನವೆಂಬರ್, ೨೦೧೬, ಪು.೫

೧೬. ಜೋಗುರ ಎಸ್.ಬಿ., **ಭವಿಷ್ಯದಲ್ಲಿ ಜಾತಿಪದ್ಧತಿ ಇನ್ನಷ್ಟು ಬಲಗೊಳ್ಳಲಿದೆಯೇ?** ಸಂವಾದ, ಮೇ ೨೦೧೫, ಪು.೦೬

೧೭. ಮೇರಿ ಮರ್ಸೆಲ್ ಥೆಕೆಕರ್(ಲೇ)., ಸುಮಾ ಬಿ.ಯು.(ಅನು)., **ಕನಸುಗಳಿಲ್ಲದೆ ದಾರಿಯೂ ಕಾಣದೆ, ಸಂವಾದ,** ೨೦೧೪, ಪು.೬

೧೮. ವಡ್ಡಗೆರೆ ನಾಗರಾಜಯ್ಯ, **ತಳಸಮುದಾಯದ ತಲ್ಲಣಗಳು,** ಪ್ರಜಾಸಮರ ಪಾಕ್ಷಿಕ, ೨೦೧೩, ಪು.೯

೧೯. ಬಂದಕುಂಟೆ ನಾಗರಾಜಯ್ಯ, **ದಲಿತ ಚಳವಳಿ ಹೋರಾಟಗಾರರು,** ತುಮಕೂರು

೨೦. ಸಿದ್ಧಲಿಂಗಯ್ಯ, **ಜನಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೨೧. ಉಮಾಪತಿ ಡಿ., ಪ್ರಜಾವಾಣಿ, ೨೦೧೪

೨೨. ಅನುಪಮಾ ಎಚ್.ಎಸ್.(ಲೇ)., **ನೋಡಿ ಬಾಬಾ ಇಲ್ಲಿ ಎಲ್ಲವೂ ಇವೆ ಈಗಲೂ ಹೀಗೆ..., ನೋಯುವ ಹಲ್ಲಿಗೆ ಹೊರಳುವ ನಾಲಿಗೆ,** ಸಂವಾದ, ೨೦೧೪, ಪು.೪೯

೨೩. ಪ್ರಜಾವಾಣಿ ದಿನಪತ್ರಿಕೆ, ೨೦೧೫

೨೪. ದಿ ಹಿಂದೂ

೨೫. ಅದೇ

೨೬. ಅದೇ

೨೭. ಅದೇ

೨೮. ಅದೇ

೨೯. ಮಾರುತಿ ಹೆಚ್., **ಮ್ಯಾನ್‌ಹೋಲ್‌ಗಳ ವಿಷಗಾಳಿಯಲ್ಲಿ ಪೌರಕಾರ್ಮಿಕರು, ಸಂವಾದ,** ಮೇ ೨೦೧೬, ಪು.೦೬

೩೦. ಚಂದ್ರಶೇಖರ್ ರಾಮೇನಹಳ್ಳಿ ಆರ್.ವಿ., **ಸ್ತ್ರೀವಾದ ಮತ್ತು ಮಹಿಳಾ ಪೌರಕಾರ್ಮಿಕರು,** ನವೆಂಬರ್, ೨೦೧೬, ಪು.೭

೩೧. ಸಿದ್ದಲಿಂಗಯ್ಯ, **ಜನಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೩೨. ದುರ್ಗಮ್ಮ, ಕಮಲಾಪುರ, ಪೌರಕಾರ್ಮಿಕ

೩೩. ಸಾಲಮ್ಮ, ಕಮಲಾಪುರ, ಪೌರಕಾರ್ಮಿಕ

೩೪. ಕೇಶವ, ಕಮಲಾಪುರ, ಪೌರಕಾರ್ಮಿಕ

೩೫. ಕೆಂಚಮ್ಮ, ಕಮಲಾಪುರ, ಪೌರಕಾರ್ಮಿಕ

೩೬. ಡೊಮಿನಿಕ್ ಡಿ.(ಅನು)., **ಪೌರಕಾರ್ಮಿಕರ ಜಾಗತಿಕ ಗುತ್ತಿಗೆ ಯಾರಿಗೆ?, ಸಂವಾದ,** ನವೆಂಬರ್ ೨೦೦೪, ಪು. ೩೨

೩೭. ಸಿದ್ದಲಿಂಗಯ್ಯ, **ಜನಸಂಸ್ಕೃತಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೩೮. ಚಿನ್ನಸ್ವಾಮಿ ಸೋಸಲೆ ಎನ್.(ಲೇ)., (ಸಂ)., **ದಲಿತರನ್ನು ಹಿಂದೂ ಧರ್ಮದ ಚೌಕಟ್ಟಿಗೆ ಯಾವಾಗ ಸೇರಿಸಿಕೊಂಡರು?,** ವೀರಯ್ಯ ಡಿ.ಎಸ್.(ಪ್ರ.ಸಂ)., ಧೀಮಂತ ಕ್ರಾಂತಿಕಾರಿ ಬಿ.ಬಸವಲಿಂಗಪ್ಪ ಸಂಸ್ಮರಣ ಸಂಪುಟ, ಕ್ರಾಂತಿಕಾರಿ ಬಿ.ಬಸವಲಿಂಗಪ್ಪ ಜಯಂತಿ ಆಚರಣಾ ಸಮಿತಿ (ರಿ)., ೨೦೧೬, ಪು.೪೪೦

೩೯. ಹನುಮಂತಯ್ಯ ಎನ್.ಕೆ.(ಲೇ)., **ಕ್ರಾಂತಿಯ ವಸಂತ ಬಿ.ಬಸವಲಿಂಗಪ್ಪನವರ ಕಥನ,** ವೀರಯ್ಯ ಡಿ.ಎಸ್.(ಪ್ರ.ಸಂ)., ಚಿನ್ನಸ್ವಾಮಿ ಸೋಸಲೆ ಎನ್.(ಸಂ)., ಧೀಮಂತ, ಕ್ರಾಂತಿಕಾರಿ

ಬಿ.ಬಸವಲಿಂಗಪ್ಪ ಸಂಸ್ಮರಣ ಸಂಪುಟ, ಕ್ರಾಂತಿಕಾರಿ ಬಿ.ಬಸವಲಿಂಗಪ್ಪ ಜಯಂತಿ ಆಚರಣಾ ಸಮಿತಿ (ರಿ)., ೨೦೧೬, ಪು.೫೦

೪೦. ಮಾರುತಿ ಹೆಚ್., ಮ್ಯಾನ್‌ಹೋಲ್‌ಗಳ ವಿಷಗಾಳಿಯಲ್ಲಿ ಪೌರಕಾರ್ಮಿಕರು, ಸಂವಾದ, ಮೇ ೨೦೧೫, ಪು.೦೬

## ಅಧ್ಯಾಯ: ಒಂಬತ್ತು

# ಸಮಾರೋಪ

ವಸಾಹತು ಕಾಲಘಟ್ಟ ಮತ್ತು ವಸಾಹತೋತ್ತರ ಕಾಲಘಟ್ಟದಲ್ಲಿ ತಳಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವ ಪ್ರಯತ್ನಗಳು ನಡೆಯುತ್ತಿವೆ. ಆ ಮೂಲಕ ಚರಿತ್ರೆ ಬರವಣಿಗೆಯ ಸಿದ್ಧ ಮಾದರಿಗಳನ್ನು ಪ್ರಶ್ನಿಸುತ್ತ ಹೊಸ ಆಯಾಮಗಳನ್ನು ಕಂಡುಕೊಳ್ಳಲು ಅಲ್ಲಲ್ಲಿ ಪ್ರಯತ್ನಿಸಲಾಗಿದೆ. ವಸಾಹತು ಹಾಗೂ ಸಮಕಾಲೀನ ಸಂದರ್ಭದಲ್ಲಿ ತಳಮುದಾಯಗಳೆಂದರೆ ಅಸ್ಪೃಶ್ಯರು ಮಾತ್ರವಲ್ಲದೆ ಬುಡಕಟ್ಟು, ಅಲೆಮಾರಿ ಸಮುದಾಯಗಳು ಕೂಡ ಎನ್ನುವಂತಹ ಅಧ್ಯಯನ ವಿಧಾನವನ್ನು ಮಹಾಪ್ರಬಂಧದುದ್ದಕ್ಕೂ ಬಳಸಿಕೊಳ್ಳಲಾಗಿದೆ. ತಳಸಮುದಾಯಗಳ ಚರಿತ್ರೆಗೆ ಪೂರಕವಾದ ಆಕರಗಳನ್ನು ಮಾತ್ರ ಬಳಸಿಕೊಳ್ಳದೆ ಸಾಂಪ್ರದಾಯಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ. ಈ ಬಗೆಯ ಬರವಣಿಗೆ ಕ್ರಮ ಚರಿತ್ರೆ ಬರವಣಿಗೆಯಲ್ಲಿ ಪ್ರಧಾನವಾಗಿರುವ ರಾಷ್ಟ್ರೀಯವಾದಿ ಮತ್ತು ಲಿಬರಲ್ ಮಾದರಿಯ ಗ್ರಹಿಕೆಗಳಿಗಿಂತ ಭಿನ್ನವಾಗಿದೆ. ಮಾರ್ಕ್ಸ್‌ವಾದಿ ಮತ್ತು ಸಬಾಲ್ಟ್ರನ್ ಪಂಥಗಳು ಆಗಾಗ್ಗೆ ಉಲ್ಲೇಖಿಸುವ ತಳಸಮುದಾಯಗಳನ್ನು ಕೇಂದ್ರವಾಗಿಟ್ಟು ಕೊಂಡು ಚರಿತ್ರೆಯನ್ನು ರಚಿಸುವ ಅಧ್ಯಯನ ಕ್ರಮವನ್ನು ಪ್ರಸ್ತುತ ಮಹಾಪ್ರಬಂಧವು ಹೊಂದಿದೆ. ಈ ಹಿನ್ನೆಲೆಯಲ್ಲಿ ವಸಾಹತು ಕಾಲದ ಮತ್ತು ವಸಾಹತೋತ್ತರ ಕಾಲದ ತಳಸಮುದಾಯಗಳ ಚರಿತ್ರೆಯನ್ನು ವಿಶ್ಲೇಷಿಸುವ ಸಂದರ್ಭದಲ್ಲಿ ಚರಿತ್ರೆ, ಸಮಾಜ, ಅರ್ಥವ್ಯವಸ್ಥೆ ಮತ್ತು ರಾಜಕೀಯ ವ್ಯವಸ್ಥೆಗಳ ಬಗ್ಗೆ ಅಭ್ಯಸಿಸುತ್ತ ಇವುಗಳಲ್ಲಿ ತಳಸಮುದಾಯಗಳ ಚರಿತ್ರೆಯ ವಿವಿಧ ಆಯಾಮಗಳನ್ನು ಗಮನಿಸುತ್ತ ಅವರಿಗೂ ಕೂಡ ಒಂದು ಚರಿತ್ರೆ ಇದೆ ಎಂಬುದನ್ನು ಅರ್ಥೈಸಿಕೊಳ್ಳಲು ಪ್ರಯತ್ನಿಸಲಾಗಿದೆ.

ಚಾರಿತ್ರಿಕ ಕಾಲಘಟ್ಟದ ಸಮಾಜವನ್ನು ಅರ್ಥೈಸುವುದು ಸ್ವಲ್ಪ ಕಷ್ಟ. ಏಕೆಂದರೆ ಅದು ಸಂಕೀರ್ಣ ಆಯಾಮಗಳನ್ನು ಸೃಷ್ಟಿಸಿಕೊಳ್ಳುತ್ತ ಬದಲಾವಣೆಯತ್ತ ಸಾಗಿದೆ. ಹಿಂದೂ ಧಾರ್ಮಿಕ

ಪದ್ಧತಿಯು ಭಾರತೀಯ ಸಮಾಜವನ್ನು ವಿಭಜಿಸಿ ಅದರ ಆಧಾರದ ಮೇಲೆ ನಿಯಂತ್ರಣ ಹೇರಿದೆ. ಚಾರಿತ್ರಿಕ ಕಾಲಘಟ್ಟದ ಅವಧಿಯಲ್ಲಿ ಧಾರ್ಮಿಕ ಪ್ರಭುತ್ವ ಮತ್ತು ವಸಾಹತು ಪ್ರಭುತ್ವದ ಕಾರ್ಯಭಾರಗಳೇ ಹೆಚ್ಚು ಚರ್ಚಿತವಾಗಿವೆ. ಇವುಗಳ ಮಧ್ಯೆ ತಳಸಮುದಾಯಗಳ ಚಾರಿತ್ರಿಕ ವಿವರಗಳು ಅಸ್ಪಷ್ಟವಾಗಿ ದಾಖಲಾಗಿವೆ. ತುಮಕೂರು ಜಿಲ್ಲೆಯ ಚರಿತ್ರೆ ಇದಕ್ಕೆ ಭಿನ್ನವೆನಿಸುವುದಿಲ್ಲ. ಜಾತಿ–ಬುಡಕಟ್ಟುಗಳ ಹೀನಾಯ ಸ್ಥಿತಿಗೆ ಧರ್ಮದ ಪ್ರಭಾವ ಮುಖ್ಯ ಕಾರಣವಾಗುತ್ತದೆ. ಬುಡಕಟ್ಟುಗಳ ಸಂಸ್ಕೃತಿಗೆ ಹಿಂದೂ ಧರ್ಮದ ಪ್ರಭಾವ ಆಗಿಲ್ಲವೆಂದು ವಾಧಿಸುವಾಗ ಆರಂಭದ ಪ್ರಕ್ರಿಯೆಗಳು ಇದಕ್ಕೆ ಪ್ರತಿರೋಧ ವ್ಯಕ್ತಪಡಿಸುತ್ತವೆ. ನಿಸರ್ಗದತ್ತವಾದ ಪ್ರಕೃತಿಯನ್ನು ಸಹ ತನ್ನದು ಎಂಬಂತೆ ಬಿಂಬಿಸಿಕೊಂಡ ವೈದಿಕ ಸಂಸ್ಕೃತಿ ಅಸ್ಪೃಶ್ಯರು ಎದುರಾದರೆ ಅಥವಾ ಕಾಣಿಸಿಕೊಂಡರೆ ದೂರ ಹೋಗಬೇಕು ಎಂದು ಆಜ್ಞಾಪಿಸುವಾಗ ವ್ಯವಸ್ಥೆಯಲ್ಲಿ ಬದುಕುವ ಹಕ್ಕು ಕೆಲವರಿಗೆ ಮಾತ್ರವಿದೆ ಎಂಬಂತಾಗುತ್ತದೆ. ಇತ್ತೀಚೆಗೆ ತುಮಕೂರು ಜಿಲ್ಲೆಯಲ್ಲಿ ಬಹಿಷ್ಕಾರ ಪದ್ಧತಿಗಳು ಇದನ್ನೇ ದೃಢಪಡಿಸುತ್ತವೆ. ಥಾಮಸ್ ಜಫರ್‌ಸನ್ ಅವರ ಮಾತು "ಈ ಬಾಹ್ಯ ಜಗತ್ತಿಗೆ ಬಂದ ಪ್ರತಿಯೊಂದು ಜೀವಿಗೂ ಬದುಕುವ ಹಕ್ಕಿದೆ. ಈ ಹಕ್ಕುಗಳನ್ನು ಯಾರೂ ಕೊಡಬೇಕಾಗಿಲ್ಲ. ಅವು ನಿಸರ್ಗದತ್ತವಾಗಿ ಬಂದು ಬಿಡುತ್ತದೆ" ಎಂಬುದು ಪ್ರಸ್ತುತವಾಗುತ್ತದೆ.

ವಸಾಹತು ಕಾಲಘಟ್ಟದಲ್ಲಿ ದೇವಾಲಯ ಸಂಸ್ಕೃತಿ ಅಧ್ಯಯನಕಾರರನ್ನು ಗಮನ ಸೆಳೆಯುತ್ತದೆ. ಸಂಪ್ರದಾಯಗಳನ್ನು ಗಟ್ಟಿಗೊಳಿಸಲು ಮತ್ತು ಜಾತಿಯನ್ನು ಬಲಾಢ್ಯಗೊಳಿಸಲು ದೇವಾಲಯ ಸಂಸ್ಕೃತಿ ಸಹಕಾರಿಯಾಯಿತು. ದೇವಾಲಯ ಸಂಸ್ಕೃತಿಯು ಬಲಾಢ್ಯ ಜಾತಿಗಳಿಗೆ ಸಂಬಂಧಿಸಿದ ವಿಚಾರಗಳೆಂದು ಮೇಲ್ನೋಟಕ್ಕೆ ಕಂಡರೂ ಅದರ ಅಂತರಂಗದಲ್ಲಿ ವಿವಿಧ ಜಾತಿ ಸಮುದಾಯಗಳು ಕಾರ್ಯನಿರ್ವಹಿಸುತ್ತಿದ್ದವು. ಚರಿತ್ರೆಯುದ್ದಕ್ಕೂ ಪ್ರಭುತ್ವಗಳ ಆಳ್ವಿಕೆಯ ಕಾಲಘಟ್ಟದಲ್ಲಿ ದೇವಾಲಯ ಗಳು ನಿರ್ಮಾಣವಾಗಿವೆ. ಈ ದೇವಾಲಯ ನಿರ್ಮಾಣ ಕಾಲದಲ್ಲಿ ಶ್ರಮವಹಿಸಿದವರು ತಳಸಮುದಾಯಗಳೇ ಹೊರತು ಸಮಾಜದ ಉನ್ನತ ಸ್ತರದಲ್ಲಿದ್ದವರೂ ಅಥವಾ ಪ್ರಭುತ್ವಗಳು ಅಲ್ಲ. ಈ ಸಂಸ್ಕೃತಿಯನ್ನು ಸೂಕ್ಷ್ಮವಾಗಿ ಗಮನಿಸಿದಾಗ ಸಾಮಾಜಿಕ ಶ್ರೇಣೀಕರಣ ಮತ್ತು ಸ್ಥಾಪಿತ ಮೌಲ್ಯಗಳು ಯಥಾ ಪ್ರಕಾರ ಮುಂದುವರೆಯಲು ಸಹಕಾರಿಯಾಯಿತು ಎಂಬುದು ತಿಳಿದುಬರುತ್ತದೆ. ಇದಕ್ಕೆ ಸಂಬಂಧಿಸಿದಂತೆ ಪರಿಚಾರಕ ವರ್ಗವಾಗಲಿ ಅಥವಾ ಗರ್ಭಗುಡಿಯಲ್ಲಿ ಪೂಜೆ ಮಾಡುವವರ ಪೂಜಾರಿ ವರ್ಗವಾಗಲೀ ಅವರದೇ ಆದ ಅಂತಸ್ತು ಮೊದಲೇ ನಿರ್ಧಾರವಾಗುತ್ತಿತ್ತು. ಹಾಗಾದರೆ ಸಂಪ್ರದಾಯಬದ್ಧವಾಗಿ ಒಬ್ಬ ಅಸ್ಪೃಶ್ಯ ದೇವಾಲಯದ ಗರ್ಭಗುಡಿಗೆ ಬರಲು ಸಾಧ್ಯವಿಲ್ಲ. ಪ್ರಭುತ್ವ ಈ ವರ್ಗದವರಿಂದ ದೇವಾಲಯಕ್ಕೆ ಬೇಕಾದ

ಅಗತ್ಯ ಕಾರ್ಯಗಳನ್ನು ಮಾಡಿಸಿಕೊಳ್ಳುತ್ತಿತ್ತೇ ವಿನಃ ದೇವಾಲಯದ ಪ್ರವೇಶಕ್ಕೆ ನಿಷೇಧವಿದೆ. ಇದರಿಂದಾಗಿ ದೇವಾಲಯ ಸಂಸ್ಕೃತಿ ಕೂಡ ಜಾತಿಯ ಮುಂದುವರಿಕೆಗೆ ಸಹಕಾರಿಯಾಯಿತು.

ಸಾಮಾಜಿಕ ಒತ್ತಡ ಹಾಗೂ ಮೇಲ್‌ಚಲನೆಗೆ ಅವಕಾಶವಿರುವುದರಿಂದಾಗಿ ತಳಸಮುದಾಯಗಳು ಹೊಸ ಧರ್ಮದತ್ತ ಆಕರ್ಷಿತರಾಗಿದ್ದಾರೆ. ಈ ಹೊಸ ಸಿದ್ಧಾಂತಗಳು ಸಾಮಾಜಿಕ ಸಂಕೋಲೆಗಳಿಂದ ತಳಸಮುದಾಯಗಳನ್ನು ಬಿಡುಗಡೆ ಮಾಡಲು ಪ್ರಯತ್ನಿಸುತ್ತಿವೆ. ಹಲವು ಬಗೆಯ ಸೈದ್ಧಾಂತಿಕ ಆಕರ್ಷಣೆಗಳು ಬೌದ್ಧ, ಜೈನ, ವೀರಶೈವ, ಇಸ್ಲಾಂ ಹಾಗೂ ಕ್ರಿಶ್ಚಿಯನ್ ಧರ್ಮಗಳಿಗೆ ತಳಸಮುದಾಯಗಳು ಮತ ಸ್ವೀಕಾರ ಮಾಡಿವೆ. ಅನೇಕ ಶತಮಾನಗಳಿಂದ ತಳಸಮುದಾಯಗಳು ಪ್ರಭುತ್ವಗಳ ಶೋಷಣೆಗೆ ಗುರಿಯಾಗಿವೆ. ತೀವ್ರ ಅಪಮಾನಗಳಿಗೆ ತುತ್ತಾಗಿರುವ ಇವರು ದಾರಿದ್ರ್ಯದ ಬದುಕನ್ನೇ ಅನುಭವಿಸುತ್ತಿದ್ದಾರೆ. ಬುಡಕಟ್ಟುಗಳಿಗೆ ಬದುಕಿನ ಅಸ್ತಿತ್ವಕ್ಕೆ ಧಕ್ಕೆ ಬಂದಾಗ ಪ್ರಭುತ್ವದ ವಿರುದ್ಧ ಪ್ರತಿರೋಧವನ್ನು ವ್ಯಕ್ತಪಡಿಸಿವೆ. ಸಮುದಾಯಗಳಲ್ಲಿ ಹಲವು ಸಾಂಸ್ಕೃತಿಕ ನಾಯಕರು ಕಾಣಿಸಿಕೊಂಡಿದ್ದಾರೆ. ಪ್ರಭುತ್ವ, ಭೂಮಾಲೀಕ ವರ್ಗ ಮತ್ತು ಸಾಂಸ್ಕೃತಿಕ ನಾಯಕರ ನಡುವೆ ಅನೇಕ ತಲ್ಲಣಗಳು ನಡೆದುದನ್ನು ಮೌಖಿಕ ಸಾಹಿತ್ಯ ತಿಳಿಯಪಡಿಸುತ್ತದೆ.

ಪ್ರಸ್ತುತ ಅಧ್ಯಯನದಲ್ಲಿ ಗಮನಿಸಿದಂತೆ ಪ್ರಭುತ್ವ ತಳಸಮುದಾಯಗಳಿಗೆ ಹೊರತಾಗಿರಲು ಸಾಧ್ಯವಿಲ್ಲ. ಸಂಸ್ಕೃತಿಯ ಪೋಷಣೆಗೆ ತಳಸಮುದಾಯಗಳ ಕೊಡುಗೆ ಪ್ರಮುಖವಾದದ್ದು. ತಳಸಮುದಾಯಗಳ ಹಾಗೂ ಪ್ರಭುತ್ವದ ಸಂಬಂಧಗಳನ್ನು ಗಮನಿಸುವಾಗ ಪ್ರಭುತ್ವ ತಳಸಮುದಾಯಗಳನ್ನು ಸಾಮಾಜಿಕವಾಗಿ ಕೀಳಾಗಿ, ನಿರ್ಲಕ್ಷ್ಯದಿಂದ ನೋಡಿದೆ.

ಸಮಾಜದ ಅತ್ಯಂತ ಕೆಳಸ್ತರದಲ್ಲಿ ಕಾಣಿಸಿಕೊಳ್ಳುವ ತಳಸಮುದಾಯಗಳು ಪ್ರಭುತ್ವಗಳ ಮತ್ತು ಯಜಮಾನಿಕೆ ವರ್ಗಗಳ ದೌರ್ಜನ್ಯ ಹಾಗೂ ಶೋಷಣೆಗಳನ್ನು ಅನುಭವಿಸುತ್ತಾ ಬಂದಿವೆ. ಅಧಿಕಾರ ಮತ್ತು ಸವಲತ್ತುಗಳಿಂದ ವಂಚಿತವಾದ ತಳಸಮುದಾಯಗಳ ಬದುಕನ್ನು ಕಟ್ಟಿಕೊಡುವುದು ಅತ್ಯಂತ ಸವಾಲಿನ ಕೆಲಸವಾಗಿದೆ. ಚರಿತ್ರೆಯುದ್ದಕ್ಕೂ ತಳಸಮುದಾಯಗಳು ಅಸ್ತಿತ್ವವೇ ಇಲ್ಲದ ರೀತಿಯಲ್ಲಿ ಬದುಕುತ್ತಾ, ಪ್ರಭುತ್ವದ ಅಥವಾ ಮೇಲ್ವರ್ಗಗಳ ಅಸ್ತಿತ್ವವನ್ನು ಗಟ್ಟಿಗೊಳಿಸುವ ಒತ್ತಾಯ ಹಾಗೂ ಒತ್ತಡಕ್ಕೆ ಒಳಗಾಗಿದ್ದವು. ಆ ಸಮುದಾಯಗಳ ಮೌನ ಪ್ರತಿಭಟನೆಗಳು ಅವ್ಯಕ್ತವಾಗಿಯೇ ಉಳಿದವು. ಈ ಎಲ್ಲಾ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ತಳಸಮುದಾಯದ ಬದುಕಿನ ಸೂಕ್ಷ್ಮ ಅಧ್ಯಯನವನ್ನು ನಡೆಸುವ ಪ್ರಯತ್ನ ಮಾಡಲಾಗಿದೆ. ತಳಸಮುದಾಯಗಳನ್ನು ಕೇಂದ್ರೀಕರಿಸಿಕೊಂಡು ಚರ್ಚೆಯನ್ನು ಬೆಳೆಸಿರುವುದರಿಂದ, ಪ್ರಸ್ತುತ ಅಧ್ಯಯನ ಸಮಾಜಮುಖಿಯಾಗಿದೆ. ಪ್ರಸ್ತುತ ಅಧ್ಯಯನವು ವಿಶಾಲವಾದ ವ್ಯಾಪ್ತಿಯನ್ನು

ಹೊಂದಿದ್ದು, ಆಯ್ಕೆ ಮಾಡಿಕೊಂಡ ವಿಷಯಕ್ಕೆ ಸಾಧ್ಯವಾದಷ್ಟು ಮಟ್ಟಿಗೆ ನ್ಯಾಯ ಒದಗಿಸುವ ಪ್ರಯತ್ನವನ್ನು ಮಾಡಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಬುದ್ಧ, ಬಸವಣ್ಣ, ಜ್ಯೋತಿಬಾ ಫುಲೆ ದಂಪತಿಗಳು, ಬಾಬಾಸಾಹೇಬ್ ಅಂಬೇಡ್ಕರ್, ಪೆರಿಯಾರ್, ನಾರಾಯಣಗುರು ಮೊದಲಾದ ಸಮಾಜ ಸುಧಾರಕರು ತಳಸಮುದಾಯಗಳ ಸಮಾನತೆಗಾಗಿ ಶ್ರಮಿಸಿದ್ದಾರೆ. ಇದರಿಂದಾಗಿ ತಳಸಮುದಾಯ ಗಳು ಸಂಘಟಿತರಾಗಿ, ತಮ್ಮ ಸಾಮಾಜಿಕ, ಆರ್ಥಿಕ, ರಾಜಕೀಯ ಸಮಾನತೆಯ ಹಕ್ಕುಗಳಿಗಾಗಿ ಹೋರಾಟ ಮಾಡುತ್ತಿರುವುದು ಗಮನಾರ್ಹ.

## ಅಧ್ಯಯನದ ಫಲಿತಗಳು

ತುಮಕೂರು ಜಿಲ್ಲೆಯನ್ನು ಸಾಂಸ್ಕೃತಿಕವಾಗಿ ಹಾಗೂ ಭೌಗೋಳಿಕವಾಗಿ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ. ಆಧುನಿಕತೆಗೆ ಮುಖ ಮಾಡಿರುವ ನಗರ ಒಂದು ಕಡೆ ಆದರೆ, ಹೇಮಾವತಿ ಜಲಾಶಯ ಹಾಗೂ ಕೆಲವು ಚಿಕ್ಕ ನದಿಗಳ ಹರಿಯುವಿಕೆಯಿಂದಾಗಿ ಅರೆ ಮಲೆನಾಡಿನಂತಿರುವ ಜಿಲ್ಲೆಯ ದಕ್ಷಿಣ ಭಾಗ ಮತ್ತೊಂದು ಪ್ರದೇಶ. ಈ ಪ್ರದೇಶದಲ್ಲಿ ಭೂಮಿ ಪ್ರಬಲ ಸಮುದಾಯಗಳ, ಜಮೀನ್ದಾರಿ ವರ್ಗಗಳ ಹಿಡಿತದಲ್ಲಿದೆ. ಇಲ್ಲಿನ ತಳಸಮುದಾಯಗಳು ಭೂಹೀನರಾಗಿ, ಜೀತಗಾರರಾಗಿ ಕಂಡುಬರುತ್ತಾರೆ. ಜಿಲ್ಲೆಯ ಉತ್ತರ ಭಾಗ ಸಂಪೂರ್ಣವಾಗಿ ಬಯಲು ಸೀಮೆ, ಮಳೆಯಾಶ್ರಿತ ಪ್ರದೇಶವಾಗಿದೆ. ಇಲ್ಲಿನ ತಳಸಮುದಾಯಗಳು ಬಹುತೇಕವಾಗಿ ಕೃಷಿ ಕಾರ್ಮಿಕರು. ಈ ಹಿನ್ನೆಲೆಯಲ್ಲಿ ಅಧ್ಯಯನವನ್ನು ಕೈಗೊಂಡಿರುವುದು ಅಧ್ಯಯನದ ಪ್ರಮುಖ ಫಲಿತವಾಗಿದೆ.

ವಚನ ಚಳವಳಿಯ ನಂತರ ಮಧ್ಯಕಾಲೀನ ಇತಿಹಾಸದಲ್ಲಿ ಹಿಂದೂಧರ್ಮದಲ್ಲಿರುವಂತಹ ವರ್ಣಾಶ್ರಮ ವ್ಯವಸ್ಥೆಯ ನಿರಾಕರಣೆ, ಜಾತಿ ವ್ಯವಸ್ಥೆಯ ನಿರಾಕರಣೆ, ಯಜ್ಞಯಾಗಗಳ ವಿರೋಧ, ಲಿಂಗತಾರತಮ್ಯದ ನಿರಾಕರಣೆಯನ್ನು ಮಾಡಿದವರು ಅನುಭಾವಿಕರಾದ ತತ್ವಪದಕಾರರು ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಅಲ್ಲದೆ ಅಧ್ಯಯನದಲ್ಲಿ ತತ್ವಪದಕಾರರನ್ನು ಗುರುತಿಸಲಾಗಿದೆ.

ಶಿಷ್ಟದೇವತೆಗಳ ಕಥೆಗಳಿಗಿಂತ ಗ್ರಾಮದೇವತೆಗಳ ಕಥೆಗಳು ಸಾಮಾಜಿಕ, ಸಾಂಸ್ಕೃತಿಕ ಇತಿಹಾಸದ ಅಧ್ಯಯನಕ್ಕೆ ಉಪಯುಕ್ತ ಆಧಾರಗಳಾಗಿವೆ. ಸ್ಥಳನಾಮಗಳ ಅಧ್ಯಯನಕ್ಕೂ ಪೂರಕವಾದ ಮಾಹಿತಿಯನ್ನು ಒದಗಿಸುತ್ತವೆ. ಬಹುತೇಕ ಗ್ರಾಮ ದೇವತೆಗಳು ಆಯಾ ಊರಿನ ಹೆಸರನ್ನೇ ಹೊಂದಿರುತ್ತವೆ ಎಂಬುದು ಕ್ಷೇತ್ರಕಾರ್ಯ ಕೈಗೊಂಡಾಗ ಕಂಡುಬಂದಂತಹ ಪ್ರಮುಖ ಅಂಶವಾಗಿದೆ.

ಗ್ರಾಮದೇವತೆಗಳು ತಳಸಮುದಾಯಗಳ ಬದುಕಿನುದ್ದಕ್ಕೂ ಬೆಳೆದು ಬಂದಿವೆ. ಪ್ರತಿಯೊಂದು ಗ್ರಾಮದೇವತೆಗೂ ತನ್ನದೇ ಆದ ಪುರಾಣ, ಐತಿಹ್ಯಗಳು, ಮೌಖಿಕ ಪರಂಪರೆಯಲ್ಲಿ ತಳಸಮುದಾಯಗಳು ಕಟ್ಟುವ ಮೂಲಕ ಆಚರಣೆ ಮತ್ತು ಸಂಪ್ರದಾಯಗಳು ಉಳಿದು ಬಂದಿವೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಗ್ರಾಮದೇವತೆಗಳ ಹಿಡಿತದಿಂದ ಬ್ರಾಹ್ಮಣರು ಮಾಡಿದ್ದ ಕೆಲಸಗಳೆಂದರೆ ತಮ್ಮ ಜಾತಿ ರಕ್ಷಣೆ, ಭೂಮಾಲೀಕತ್ವದ ರಕ್ಷಣೆ ಹಾಗೂ ತಮ್ಮ ಯಜಮಾನಿಕೆಯ ರಕ್ಷಣೆ. ಗ್ರಾಮದೇವತೆಗಳ ಉತ್ಸವಗಳಲ್ಲಿ ಆಯಾ ಜಾತಿಯವರು ತಮ್ಮ ಜಾತಿಗೆ ತಕ್ಕಂತೆ ಸೇವೆ ಮಾಡುವುದು ಕಂಡುಬರುತ್ತದೆ. ಗ್ರಾಮದೇವತೆಗಳು ವೈದಿಕೀಕರಣಗೊಂಡಿರುವುದನ್ನು ಕಾಣಬಹುದಾಗಿದೆ. ಉದಾಹರಣೆಗೆ ದ್ರಾವಿಡರ ಎಲ್ಲೆಯ ಅಮ್ಮ ರೇಣುಕೆಯಾಗಿರುವುದು, ಮಾರಮ್ಮ, ಚೌಡಮ್ಮರನ್ನು ಬ್ರಾಹ್ಮಣ ಕನ್ಯೆಯನ್ನಾಗಿ ಮಾಡಿದ್ದು, ಲಕ್ಕವ್ವರಿಗೆ ಲಕ್ಷ್ಮಿಯನ್ನಾಗಿ, ದುರ್ಗವ್ವನಿಗೆ ದುರ್ಗಾದೇವಿಯನ್ನಾಗಿ ಮಾಡಿರುವ ಹಿನ್ನೆಲೆಯಲ್ಲಿ ತಳಸಮುದಾಯಗಳ ಚರಿತ್ರೆಯನ್ನು ತಳಸ್ಪರ್ಶಿಯವಾಗಿ ಅಧ್ಯಯನಕ್ಕೆ ಒಳಪಡಿಸಲಾಗಿದೆ.

ಆಚರಣೆಯ ವಿಚಾರ ಬಂದಾಗ ಸ್ವಲ್ಪಮಟ್ಟಿಗೆ ಪುರೋಹಿತಶಾಹಿಯ ಲಕ್ಷಣಗಳು ಕಂಡುಬಂದರೂ ಸಂಪೂರ್ಣವಾಗಿ ವೈದಿಕ ಚೌಕಟ್ಟಿಗೆ ಒಳಗಾಗದಂತೆ ಕಂಡುಬರುವುದಿಲ್ಲ. ಆದರೆ ತಾತ್ವಿಕ ನೆಲೆಯಲ್ಲಿ ನೋಡುವಾಗ ಗ್ರಾಮದೇವತೆಗಳೆಲ್ಲವೂ ಆಯಾ ಗ್ರಾಮ ಅಥವಾ ಹಳ್ಳಿಯಲ್ಲಿರುವ ಶೈವ, ವೈಷ್ಣವ, ಶಕ್ತಿ ಮುಂತಾದ ದೇವತೆಗಳ ಅಧೀನದಲ್ಲಿ ಗುರುತಿಸಿ ಕೊಂಡಿರುವುದು ಸ್ಪಷ್ಟವಾಗಿ ಕಂಡುಬರುತ್ತದೆ. ಇದರರ್ಥ ಸೈದ್ಧಾಂತಿಕವಾಗಿ ವೈದಿಕ ಧರ್ಮ ಇವುಗಳನ್ನು ಆವರಿಸಿಕೊಂಡಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ತುಮಕೂರು ಜಿಲ್ಲೆಯ ಶಾಸನಗಳಿಗೆ ಸಂಬಂಧಿಸಿದಂತೆ ನಡೆದಿರುವ ಅಧ್ಯಯನಗಳನ್ನು ಗಮನಿಸಿದಾಗ, ಶಾಸನಗಳು ಪ್ರಭುತ್ವ ಹಾಗೂ ಮೇಲ್ವರ್ಗಗಳಿಗೆ ಸಂಬಂಧಪಟ್ಟವುಗಳಾಗಿವೆ. ಇದರಿಂದಾಗಿ ತಳಸಮುದಾಯಗಳು ಪ್ರಭುತ್ವ ಕೇಂದ್ರಿತ ಚರಿತ್ರೆ ಬರವಣಿಗೆಗಳಲ್ಲಿ ಹೇಗೆ ನಿರ್ಲಕ್ಷಕ್ಕೆ ಒಳಗಾದವು ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಅಸ್ಪೃಶ್ಯ ಸಮುದಾಯದ ವ್ಯಕ್ತಿ ರಾಜನಾಗಿದ್ದಂತಹ ಉದಾಹರಣೆಗಳು ಕರ್ನಾಟಕದ ಚರಿತ್ರೆಯಲ್ಲಿ ಸಿಗುವುದಿಲ್ಲ. ಆದರೆ, ಮಧ್ಯಕಾಲೀನ ಇತಿಹಾಸದಲ್ಲಿ ಮಾದಿಗ ಸಮುದಾಯದ ಕುರಂಗರಾಜ, ಕುರಂಕೋಟೆ ಸುತ್ತಮುತ್ತಲಿನ ಪ್ರದೇಶಗಳನ್ನು ಆಳ್ವಿಕೆ ಮಾಡುತ್ತಿದ್ದ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಬಹುತೇಕವಾಗಿ ಪೌರಕಾರ್ಮಿಕರೆಲ್ಲರೂ ತಳಸಮುದಾಯದವರು. ಪೌರಕಾರ್ಮಿಕ ಮಹಿಳೆಯರು ನಾಲ್ಕು ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಾರೆ. ಒಂದು ಜಾತಿಯಲ್ಲಿ ಅಸ್ಪೃಶ್ಯರು,

ಇನ್ನೊಂದು ವೃತ್ತಿಯಲ್ಲಿ ಅಶುದ್ಧ ಕೆಲಸವನ್ನು ಮಾಡುವವರು, ಅವರು ವಾಸಿಸುವುದು ಸ್ಲಂಗಳಲ್ಲಿ ಎನ್ನುವ ಕಾರಣಕ್ಕಾಗಿ ಶೋಷಣೆಗೆ ಒಳಗಾಗುತ್ತಾರೆ. ಅಲ್ಲದೆ ಮಹಿಳೆಯಾಗಿರುವ ಕಾರಣಕ್ಕೆ ಸಮಾಜದಲ್ಲಿ ಶೋಷಣೆಗೆ ಒಳಗಾಗುತ್ತಾಳೆ. ಈ ವೃತ್ತಿಯಲ್ಲಿ ತೊಡಗಿರುವ ಮಹಿಳೆಯರು ಈ ನಾಲ್ಕು ಹಂತಗಳ ಶೋಷಣೆಗಳನ್ನು ಏಕಕಾಲಕ್ಕೆ ಎದುರಿಸಬೇಕಾಗುತ್ತದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಂಡಂತಹ ಪ್ರಮುಖ ಫಲಿತವಾಗಿದೆ.

ಚರಿತ್ರೆಯುದ್ದಕ್ಕೂ ಜೀವಂತಿಕೆಯಿಂದ ಹಾಗೂ ಕ್ರಿಯಾಶೀಲವಾಗಿ ಇದ್ದಂಥ ತಳಸಮುದಾಯ ಗಳು ಶೋಷಣೆ, ದೌರ್ಜನ್ಯ, ಬಡತನ ಮುಂತಾದವುಗಳಿಂದ ನೊಂದಿದ್ದರೂ, ತಮ್ಮದೇ ಆದ ಸಂಪ್ರದಾಯ, ಆಚರಣೆ ಹಾಗೂ ಹಾಡುಗಳ ಮೂಲಕ ಬದುಕನ್ನು ಜೀವಂತವಾಗಿರಿಸಿಕೊಂಡಿವೆ. ಶೋಷಣೆಯ ನಡುವೆಯೇ ಜೀವಂತಿಕೆಯನ್ನು ಉಳಿಸಿಕೊಂಡು ಬಂದಿವೆ ಎನ್ನುವುದೇ ಆ ಸಮುದಾಯಗಳ ಸಾಮರ್ಥ್ಯ. ಪ್ರಭುತ್ವ ಎನ್ನುವಂಥದ್ದು ತಳಸಮುದಾಯಗಳನ್ನು ಒಪ್ಪಿಸುವುದರ ಮೂಲಕವೇ ನಿರ್ಮಾಣವಾಗಿರುತ್ತದೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಮತಾಂತರ ಪ್ರಕ್ರಿಯೆಗೆ ಸಂಬಂಧಪಟ್ಟಂತೆ ಹೇಳುವುದಾದರೆ ತಳಸಮುದಾಯಗಳೇ ಬಹುತೇಕವಾಗಿ ಕ್ರೈಸ್ತ ಮತ್ತು ಬೌದ್ಧ ಧರ್ಮವನ್ನು ಸ್ವೀಕಾರ ಮಾಡಿರುವುದು ಕಂಡುಬರುತ್ತದೆ. ವಸಾಹತುಶಾಹಿಗಳ ಆಳ್ವಿಕೆಯಲ್ಲಿ ಕ್ರೈಸ್ತ ಮತಕ್ಕೂ, ಪ್ರಸ್ತುತ ಸಂದರ್ಭದಲ್ಲಿ ಅಂಬೇಡ್ಕರ್ ಪ್ರಭಾವಕ್ಕೆ ಒಳಗಾಗಿ ಬೌದ್ಧ ಧರ್ಮಕ್ಕೂ ಮತಸ್ವೀಕಾರವಾಗುತ್ತಿರುವುದನ್ನು ಅಧ್ಯಯನದಲ್ಲಿ ಸೂಕ್ಷ್ಮವಾಗಿ ಕಂಡುಕೊಳ್ಳಲಾಗಿದೆ.

೧೯೭೦ರ ದಶಕದಲ್ಲಿ ಪ್ರಾಮುಖ್ಯತೆಗೆ ಬಂದ ದಲಿತ ಚಳವಳಿಯ ವಿಘಟನೆಗೆ ಅನೇಕ ಕಾರಣಗಳಿವೆ. ಚಳವಳಿ ಒಳಗಿದ್ದ ಸಮಾಜವಾದಿಗಳು ಮತ್ತು ಕಮ್ಯುನಿಸ್ಟರು ತಮ್ಮ ತಮ್ಮ ಚಿಂತನೆಗಳ ದಿಕ್ಕಿಗೆ ಚಳವಳಿಯನ್ನು ಕೊಂಡೊಯ್ಯುವ ಆಂತರಿಕ ಪ್ರಯತ್ನ, ಅಲ್ಲದೆ ದಲಿತ ಚಳವಳಿಯಲ್ಲಿ ಬಹುಸಂಖ್ಯಾತ ತಳಸಮುದಾಯ ಜಾತಿಗಳಾದ ಎಡಗೈ, ಬಲಗೈಗಳ ನಡುವೆ ನಾಯಕತ್ವಕ್ಕಾಗಿ ನಡೆದ ಆಂತರಿಕ ಪಿತೂರಿಗಳು, ವಿದೇಶಿವಂತಿಗೆ ಪಡೆದು ದಲಿತರ ನಡುವೆ ಕೆಲಸ ಮಾಡುವ ಎನ್.ಜಿ.ಒ.ಗಳು ಮತ್ತು ಚಳವಳಿ ನೇತಾರರು ಕೈಗೊಂಡ ತಪ್ಪು ರಾಜಕೀಯ ತೀರ್ಮಾನಗಳು ವಿಘಟನೆಗೆ ಪ್ರಮುಖ ಕಾರಣಗಳೆಂದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಆರ್ಥಿಕ ಸವಲತ್ತು, ಭೂಮಿ, ಬಂಡವಾಳ ಇವುಗಳೆಲ್ಲದರಿಂದಲೂ ವಂಚಿತವಾದ ತಳಸಮುದಾಯಗಳು ಹೇರಿಕೆಯ ರೂಪದಲ್ಲಿ ಬರುವ ಪ್ರತಿಯೊಂದು ವಿಚಾರವನ್ನು ಒಪ್ಪಿಕೊಳ್ಳ ಬೇಕಾದ ಸ್ಥಿತಿ ನಿರ್ಮಾಣಗೊಂಡಿತ್ತು. ವಸಾಹತು ಪ್ರಭುತ್ವ ಹಾಗೂ ಪ್ರಜಾಪ್ರಭುತ್ವದಲ್ಲೂ ಇದು ಯಥಾ ರೀತಿ ಮುಂದುವರೆಯಿತು. ಪ್ರಜಾಪ್ರಭುತ್ವದಲ್ಲಿ ತಳಸಮುದಾಯಗಳು ತಮ್ಮ

ಅಸ್ತಿತ್ವಕ್ಕಾಗಿ ಹೋರಾಡುವ ಹಾಗೂ ದೌರ್ಜನ್ಯ–ದಬ್ಬಾಳಿಕೆಗಳನ್ನು ವಿರೋಧಿಸುವ ಸಾಮರ್ಥ್ಯವನ್ನು ತಕ್ಕಮಟ್ಟಿಗೆ ಪಡೆದುಕೊಂಡಿವೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಜಿಲ್ಲೆಯಲ್ಲಿ ಉದ್ಯೋಗವನ್ನು ನೀಡಿದ್ದ ಬೀಡಿ ಉದ್ಯಮ ಸರ್ಕಾರದ ನೀತಿಗಳಿಂದಾಗಿ ಸಾವಿನಂಚಿನಲ್ಲಿದೆ. ಇದನ್ನೇ ನಂಬಿದ ತಳಸಮುದಾಯಗಳು ಪರ್ಯಾಯ ಉದ್ಯೋಗಕ್ಕಾಗಿ ನಡೆಸುತ್ತಿರುವ ಹೋರಾಟ ಸರ್ಕಾರಗಳನ್ನು ತಲುಪುತ್ತಿಲ್ಲ. ಜಿಲ್ಲೆಯಲ್ಲಿ ಬೆಳೆಯುತ್ತಿರುವ ಕಟ್ಟಡ ಕೈಗಾರಿಕೆಯೂ ಹಲವು ಸಾವಿರ ವಲಸೆ ಕಾರ್ಮಿಕರನ್ನು ಹೊಂದಿದೆ. ಆಧುನಿಕ ಯಂತ್ರಗಳ ಬಳಕೆಯಿಂದಾಗಿ ಜನರ ಕೆಲಸದ ದಿನಗಳನ್ನು ನುಂಗಿ ಹಾಕುತ್ತಿದೆ. ಇದನ್ನು ನಂಬಿದ ಕಾರ್ಮಿಕರನ್ನು ಸಂಕಷ್ಟಕ್ಕೆ ದೂಡುತ್ತಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಗ್ರಾಮೀಣ ಪ್ರದೇಶದ ಜನರಿಗೆ ಕನಿಷ್ಠ ೧೦೦ ದಿನಗಳ ಉದ್ಯೋಗ ನೀಡುವ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯನ್ನು ಜಿಲ್ಲೆಯಲ್ಲಿ ಪರಿಪೂರ್ಣವಾಗಿ ಜಾರಿಗೆ ತರಲು ಸಾಧ್ಯವಾಗಿಲ್ಲ. ತಳಸಮುದಾಯಗಳಿಗೆ ಉದ್ಯೋಗ ಸೃಷ್ಟಿಸುವ ಮೂಲ ಆಶಯವನ್ನು ಬದಿಗಿರಿಸಿ, ಯಂತ್ರಗಳಿಂದ ಕೆಲಸ ಮಾಡಿಸುವುದರ ಮೂಲಕ ಜನರ ಕೆಲಸದ ದಿನಗಳನ್ನು ನುಂಗಿ ಹಾಕುತ್ತಿದೆ. ಪಂಚಾಯ್ತಿ ಮಟ್ಟದಲ್ಲಿ ಅಧಿಕಾರಿಗಳ ಹಾಗೂ ಗುತ್ತಿಗೆದಾರರ ಅನೈತಿಕ ಮೈತ್ರಿ ಹಣ ಮಾಡಿಕೊಳ್ಳುವ ದಂಧೆಯಿಂದಾಗಿ ಇದು ಸೃಷ್ಟಿಸಿದ ಉದ್ಯೋಗಗಳು ಕಡಿಮೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಸಂಘಗಳಿಲ್ಲದ ಬಹುತೇಕ ಕಾರ್ಖಾನೆಗಳಲ್ಲಿ, ಗಾರ್ಮೆಂಟ್ಸ್ ಕಾರ್ಖಾನೆಗಳಲ್ಲಿ ೧೨ ಗಂಟೆಯ ದುಡಿಮೆ, ಕನಿಷ್ಠ ಕೂಲಿ ಇಲ್ಲದ ದುಡಿಮೆ ಸಾಮಾನ್ಯವಾಗಿದೆ. ಕೆಲಸದ ಒತ್ತಡ ಹಾಗೂ ಕೆಲಸದ ಭದ್ರತೆಗಳಿಲ್ಲದ ಪರಿಸ್ಥಿತಿ ಎಲ್ಲೆಡೆ ಇದೆ. ಕಾರ್ಮಿಕ ಕೈಗಾರಿಕಾ ಪ್ರದೇಶಗಳಿಗೆ ಸೂಕ್ತ ಸಾರಿಗೆ ವ್ಯವಸ್ಥೆ ಇಲ್ಲದೆ ದುಡಿಮೆಯ ಪ್ರಮುಖ ಭಾಗವೊಂದನ್ನು ಸಾರಿಗೆ ವೆಚ್ಚವಾಗಿ ವ್ಯಯಿಸಬೇಕಾದ ಸ್ಥಿತಿ ಇದೆ. ಅಲ್ಲದೆ ಕಾರ್ಮಿಕರಿಗೆ ಸೂಕ್ತ ವಸತಿಯೋಜನೆಯನ್ನು ರೂಪಿಸಲಾಗದ ಕಾರಣ ದುಡಿಮೆಯಲ್ಲಿನ ಹಣವನ್ನು ಮನೆ ಬಾಡಿಗೆಗೆ ವಿನಿಯೋಗಿಸಬೇಕಾದ ಸ್ಥಿತಿ ಇದೆ. ವಿಶೇಷವಾಗಿ ರೈಸ್‌ಮಿಲ್, ಗ್ರಾನೈಟ್ ಇಂಡಸ್ಟ್ರಿ, ಫುಡ್‌ಪಾರ್ಕ್ ಮೊದಲಾದ ಕೈಗಾರಿಕೆಗಳಲ್ಲಿ ದೊಡ್ಡ ಸಂಖ್ಯೆಯಲ್ಲಿ ವಲಸಿಗ ಕಾರ್ಮಿಕರನ್ನು ಗುತ್ತಿಗೆ ಆಧಾರದಲ್ಲಿ ದುಡಿಸಲಾಗುತ್ತಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ತುಮಕೂರು ಜಿಲ್ಲೆಯಲ್ಲಿ ಸುಮಾರು ೯೮೦೦ ಎಕರೆಗೂ ಹೆಚ್ಚು ಜಮೀನನ್ನು ಹಾಲಿ ಕೈಗಾರಿಕಾ ಚಟುವಟಿಕೆಗಳಿಗಾಗಿ ಸರ್ಕಾರ ತೀವ್ರಗತಿಯಲ್ಲಿ ಅಭಿವೃದ್ಧಿಪಡಿಸುತ್ತಿದೆ. ಫುಡ್‌ಪಾರ್ಕ್,

ಟೆಕ್ಸ್‌ಟೈಲ್ ಪಾರ್ಕ್ ಹಾಗೂ ಎಲೆಕ್ಟ್ರಾನಿಕ್ಸ್ ವಸ್ತುಗಳ ಉತ್ಪಾದನಾ ಸಂಕೀರ್ಣವನ್ನು ಆರಂಭಿಸಲು ಸರ್ಕಾರ ಉದ್ದೇಶಿಸಿದೆ. ಘನ ತ್ಯಾಜ್ಯ ವಿಸ್ತರಣಾ ಘಟಕ, ಸೌರವಿದ್ಯುತ್ ಘಟಕ ಮೊದಲಾದ ಕೈಗಾರಿಕೆಗಳ ಸ್ಥಾಪನೆಗಾಗಿ ಸಾವಿರಾರು ಎಕರೆ ಭೂಮಿಯನ್ನು ಸರ್ಕಾರ ಸ್ವಾಧೀನ ಮಾಡಿಕೊಳ್ಳುತ್ತಿದೆ. ಇದರಿಂದಾಗಿ ತಳಸಮುದಾಯಗಳು ಭೂವಂಚಿತರಾಗುತ್ತಿದ್ದಾರೆ. ಇದರಿಂದಾಗಿ ೧೯೭೪ರ ಭೂಸುಧಾರಣೆ, ಇಂದು ಭೂಸ್ವಾಧೀನವಾಗುತ್ತಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಕಳೆದ ಹತ್ತು ವರ್ಷಗಳಿಂದಲೂ ಜಿಲ್ಲೆಯಲ್ಲಿ ಬರ, ಅತಿವೃಷ್ಟಿ ಕಾಡುತ್ತಿದೆ. ಆದರೂ ತಳಸಮುದಾಯಗಳಲ್ಲಿ ವಿಶ್ವಾಸ ಮೂಡಿಸುವಂತ ಯಾವುದೇ ಕಾರ್ಯಕ್ರಮ, ಯೋಜನೆಗಳು ಜಾರಿಯಾಗಿಲ್ಲ. ಉದ್ಯೋಗ ಖಾತ್ರಿ ಯೋಜನೆ ಸೇರಿದಂತೆ ಅನೇಕ ಯೋಜನೆಗಳ ಅನುಷ್ಠಾನದಲ್ಲಿ ಜಿಲ್ಲಾಡಳಿತ ವಿಫಲವಾಗಿದೆ. ಇದರಿಂದಾಗಿ ಅತಿ ಸಣ್ಣ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಜಿಲ್ಲೆಯಲ್ಲಿ ೨೦೦೮-೦೯ರಲ್ಲಿ ೧೨ ರೈತರು ಆತ್ಮಹತ್ಯೆಗೆ ಶರಣಾಗಿದ್ದರೆ, ೨೦೦೯-೧೦ರಲ್ಲಿ ೧೩ ರೈತರು, ೨೦೧೦-೧೧ರಲ್ಲಿ ೭ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಆದರೆ ೨೦೧೧-೧೨ರಲ್ಲಿ ರೈತರ ಆತ್ಮಹತ್ಯೆ ಪ್ರಮಾಣ ಹೆಚ್ಚಿದ್ದು, ೧೭ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ಇದರಲ್ಲಿ ಶಿರಾ ತಾಲ್ಲೂಕು ಒಂದರಲ್ಲೇ ೧೨ ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ನೀರಾವರಿ ವಂಚಿತ ತಾಲ್ಲೂಕುಗಳಾದ ಶಿರಾ, ಪಾವಗಡ, ಮಧುಗಿರಿ, ಕೊರಟಗೆರೆಯಲ್ಲಿ ಹೆಚ್ಚಾಗಿ ಆತ್ಮಹತ್ಯೆ ಪ್ರಕರಣಗಳು ದಾಖಲಾಗಿದೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

೧೯೭೦ರ ದಶಕದಲ್ಲಿ ತುಮಕೂರು ಜಿಲ್ಲೆಯಲ್ಲಿ ದಲಿತ ಸಂಘರ್ಷ ಸಮಿತಿ ಆರಂಭವಾಗುವುದರೊಂದಿಗೆ ದಲಿತರ ಮೇಲಿನ ದೌರ್ಜನ್ಯವನ್ನು ವಿರೋಧಿಸುವ ಚಳವಳಿಗಳು ಗ್ರಾಮೀಣ ಪ್ರದೇಶಗಳಿಗೂ ಹಬ್ಬಿತು. ದಲಿತರ ಮೇಲಿನ ದೌರ್ಜನ್ಯವನ್ನು ವಿರೋಧಿಸುವುದರೊಂದಿಗೆ ದಲಿತ ಸಂಘರ್ಷ ಸಮಿತಿ ದಲಿತರ ಶಿಕ್ಷಣ ಮತ್ತು ಸಂಘಟನೆಗೆ ಹೆಚ್ಚು ಒತ್ತು ನೀಡಿದೆ. ಹೆಚ್ಚುವರಿ ಭೂಮಿ ವಿತರಣೆಯಲ್ಲಿ ದಲಿತರಿಗೆ ಸಲ್ಲಬೇಕಾದ ಪಾಲು ಪಡೆಯುವಲ್ಲಿ ಈ ಸಂಘಟನೆಗಳು ಪ್ರಮುಖ ಪಾತ್ರ ನಿರ್ವಹಿಸಿವೆ ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

ಡಾ.ಬಿ.ಆರ್.ಅಂಬೇಡ್ಕರ್ ಅವರು ರಚನೆ ಮಾಡಿರುವ ಸಂವಿಧಾನ ಭಾರತದಲ್ಲಿ ಜಾರಿಗೆ ಬಂದಿದೆ. ಸಂವಿಧಾನವು ಭಾರತದಲ್ಲಿನ ಪ್ರಜೆಗಳಿಗೆ ಮೂಲಭೂತ ಹಕ್ಕುಗಳನ್ನು ನೀಡಿದೆ. ಸಮಾನತೆಗಾಗಿ ತಳಸಮುದಾಯಗಳ ಮೇಲಾಗುತ್ತಿರುವಂತಹ ದೌರ್ಜನ್ಯಗಳನ್ನು ತಡೆಯಲು ಹಲವಾರು ಕಾನೂನುಗಳನ್ನು ಜಾರಿಗೆ ತರಲಾಗಿದೆ. ತುಮಕೂರು ಜಿಲ್ಲೆಯಲ್ಲಿ ತಳಸಮುದಾಯಗಳ ಮೇಲಾಗುತ್ತಿರುವ ದೌರ್ಜನ್ಯಗಳ ಬಗ್ಗೆ ಪ್ರಸ್ತುತ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ದೇವಾಲಯಗಳು ಜಾತಿಯ ಕೇಂದ್ರಗಳಾಗಿವೆ. ಇವುಗಳಿಗೆಲ್ಲಾ ಮೂಲ ಕಾರಣ, ಸಮಾಜದಲ್ಲಿ ಲಿಖಿತ ಸಂವಿಧಾನಕ್ಕಿಂತ ಅಲಿಖಿತ ಸಂವಿಧಾನ ಅಸ್ತಿತ್ವದಲ್ಲಿರುವುದು ಎಂಬುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.

# ಅನುಬಂಧ

೧. ಪರಾಮರ್ಶನ ಗ್ರಂಥಗಳು
೨. ವಕ್ತೃಗಳು
೩. ತತ್ವಪದಕಾರರು
೪. ಕೋಷ್ಟಕಗಳು
೫. ಛಾಯಾಚಿತ್ರಗಳು
೬. ನಕ್ಷೆಗಳು

# ಪರಾಮರ್ಶನ ಗ್ರಂಥಗಳು

೧. ಪ್ರಾಥಮಿಕ ಆಕರಗಳು

ಇಂಗ್ಲೀಷ್ ಆಕರಗಳು

1. Annual Volume on Karnataka Acts and Ordinaces, 1984, Department of Law and Parliamentary Affairs Government of Karnataka.

2. Annual Volume on Karnataka Acts and Ordinaces, 1992, Department of Law and Parliamentary Affairs Government of Karnataka.

3. Annual Volume on Karnataka acts and ordinaces, 2003, Department of Law and Parliamentary Affairs and Legislation,

4. Area and Population, 1951, Population of Schelduled Castes and Scheduled Tribes.

5. Beerappa Committee Report, 1962, Scheduled Castes and Scheduled Tribes Appointments Committee Report.

6. Dewans office, 1918-1919, Demi official Correspondence with the palace In regard to the representation of Non-Brahmins In the Public Service.

7. Education of Backward and Depressed Classes, 1917.

8. General and Revenue Secretariat, 1906-07.

9. General and Revenue Secretariat, 1907.

10. General and Revenue Secretariat, 1911-12.

11. General and Revenue Secretariat, 1912-13.

12. General and Revenue Secretariat, 1913.

13. General and Revenue Secretariat, 1913-14.

14. General and Revenue Secretariat, 1915.

15. General and Revenue Secretariat, 1916-17.

16. General and Revenue Secretariat, 1917.

17. General and Revenue Secretariat, 1918.

18. General and Revenue Secretariat, 1931.

19. Miller Committee Reports, 1918.

20. Mysore Administration Report, 1943-44.

21. Nanjundayya H.V., XXIII, Mondaru Caste, Beda Caste-1906, XXIX-Handi Jogis Caste 1913, XVIII- idiga Caste 1916, XII- Nayinda Caste 1907.

22. Report on The Administration of Mysore, for the year 1940-41.

23. Report on the Administration of Mysore, for the year 1941-42.

24. Report on the Administration of Mysore, for the year 1942-43.

25. Report on the Administration of Mysore, for the year 1945-46.

26. Report on the Administration of Mysore, for the year 1946-47.

27. Scholorships for Backward Clases, 1918.

**ಆನುಷಂಗಿಕ ಆಕರಗಳು**

೧. ಆನಂದ ತೇಲ್‌ತುಂಬ್ಡೆ (ಸಂ), ಗಂಗಾಧರಮೂರ್ತಿ (ಅನು), **ಹಿಂದುತ್ವ ಮತ್ತು ದಲಿತರು ಕೋಮುವಾದಿ ರಾಜಕಾರಣ ಒಂದು ತಾತ್ವಿಕ ಪರಾಮರ್ಶೆ**, ಚಿಂತನ ಪುಸ್ತಕ, ಬೆಂಗಳೂರು, ೨೦೦೯.

೨. ಆನಂದ ತೇಲ್‌ತುಂಬ್ಡೆ (ಲೇ), ರಾಹು (ಅನು), **ಅಂಬೇಡ್ಕರೋತ್ತರ ದಲಿತ ಸಂಘರ್ಷ ದಾರಿ–ದಿಕ್ಕು**, ಚಿಂತನ ಪುಸ್ತಕ, ಬೆಂಗಳೂರು, ೨೦೧೪.

೩. ಇರ್ಫಾನ್ ಹಬೀಬ್ (ಲೇ), ಕಕ್ಕಿಲ್ಲಾಯ ಬಿ.ವಿ.(ಅನು). **ಪ್ರಾಚೀನ ಭಾರತದಲ್ಲಿ ಜಾತಿಗಳ ಉಗಮ**, ನವಕರ್ನಾಟಕ ಪ್ರಕಾಶನ, ೨೦೧೩.

೪. ಇಂದ್ರಕುಮಾರ್ ಜೆ.(ಸಂ), **ಸ್ವಾತಂತ್ರ್ಯ ಚೌಕ**(ಸ್ವಾತಂತ್ರ್ಯ ಹೋರಾಟಗಾರರ ಟಿ.ಆರ್. ರೇವಣ್ಣನವರ ಅಭಿನಂದನ ಗ್ರಂಥ), ಭಾರತೀಯ ಜನ ಕಲಾ ಸಮಿತಿ (ಇಪ್ಟಾ), ತುಮಕೂರು, ೨೦೧೩.

೫. ಉಮೇಶ ಎಚ್.ಎಸ್., ಹಾಲತಿ ಸೋಮಶೇಖರ್ (ಸಂ), **ಸಮಕಾಲೀನ ಸಂಶೋಧನೆ ಏನು? ಎತ್ತ?**, ವಿಸ್ಮಯ ಪ್ರಕಾಶನ, ಮೈಸೂರು, ೨೦೧೪.

೬. ಎಲೋಶಿಯಸ್ ಜಿ., ಗೀತ ವಿ., ರಾಜಾದುರೈ ಎಸ್.ವಿ.(ಲೇ)., **ಕಾತ್ಯಾಯನಿ**, ಸುಜ್ಞಾನಮೂರ್ತಿ (ಅನು), ಪಲ್ಲವ ಪ್ರಕಾಶನ, ಬಳ್ಳಾರಿ, ೨೦೧೨.

೭. ಕುಮುದಾ ಬಿ ಸುಶೀಲಪ್ಪ, **ಹಕ್ಕಿಪಿಕ್ಕಿ, ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೮. ಕೊಸಾಂಬಿ ಡಿ.ಡಿ.(ಲೇ), ವೇಣುಗೋಪಾಲ್ ಟಿ.ಎಸ್., ಶೈಲಜಾ (ಅನು), **ಪುರಾಣ ಮತ್ತು ವಾಸ್ತವ**, ಚಿಂತನ ಪುಸ್ತಕ, ಬೆಂಗಳೂರು, ೨೦೧೩.

೯. ಕೋಸಾಂಬಿ ಡಿ.ಡಿ.(ಲೇ), ವೇಣುಗೋಪಾಲ್ ಟಿ.ಎಸ್., ಶೈಲಜಾ (ಅನು), **ಪ್ರಾಚೀನ ಭಾರತದ ಸಂಸ್ಕೃತಿ ಮತ್ತು ನಾಗರಿಕತೆ ಚಾರಿತ್ರಿಕ ರೂಪುರೇಷೆ**, ಚಿಂತನ ಪುಸ್ತಕ, ಬೆಂಗಳೂರು, ೨೦೧೧.

೧೦. ಗಂಗಾಧರ ದೈವಜ್ಞ (ಸಂ), **ಕೊರಗರು: ಸಮಕಾಲೀನ ಸ್ಪಂದನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೧೧. ಗುರುಲಿಂಗಯ್ಯ ಎಂ., ನಾಗಪ್ಪ ವಿ., **ಕಾಡುಗೊಲ್ಲ, ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ**, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೧೨. ಗೋವಿಂದರಾಜು ಸಿ.ಆರ್., **ನವಚಾರಿತ್ರಿಕವಾದ**(ಮಂಟಪಮಾಲೆ–೧೬೩), ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯.

೧೩. ಚಲುವರಾಜು (ಸಂ)., **ಜುಂಜಪ್ಪ, ಬುಡಕಟ್ಟು ಮಹಾಕಾವ್ಯ ಮಾಲೆ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭.

೧೪. ಚಂದ್ರಶೇಖರ ಟಿ.ಆರ್., **ಲಿಂಗಸಂಬಂಧಗಳು ಮತ್ತು ಅಭಿವೃದ್ಧಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೧೫. ಚಂದ್ರಶೇಖರ ಟಿ.ಆರ್., **ಕಷ್ಟಕುಲದ ಕಥೆ ದಲಿತರ ಸಬಲೀಕರಣದ ಅಧ್ಯಯನಗಳು**, ಲಡಾಯಿ ಪ್ರಕಾಶನ, ಗದಗ, ೨೦೧೩.

೧೬. ಚಂದ್ರಶೇಖರ ಟಿ.ಆರ್., **ಜನರ ಯೋಜನೆ ಕರ್ನಾಟಕದ ಅನುಭವಗಳು, ಮಂಟಪ ಮಾಲೆ–೧೩೦,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೧೭. ಚಂದ್ರ ಪೂಜಾರಿ ಎಂ., **ಸಂಶೋಧನ ಜವಾಬ್ದಾರಿ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೧೮. ಚಂದ್ರ ಪೂಜಾರಿ ಎಂ., **ದಲಿತ ಮಾನವ ಅಭಿವೃದ್ಧಿ,** ದಲಿತ ಹಕ್ಕುಗಳ ಸಮಿತಿ, ಬೆಂಗಳೂರು, ೨೦೧೬.

೧೯. ಚಂದ್ರ ಪೂಜಾರಿ ಎಂ., **ಸಮಾಜ ಸಂಶೋಧನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೨೦. ಚಂದ್ರ ಪೂಜಾರಿ ಎಂ., **ಯಾಕೀಗ ಭೂಮಿ ಪ್ರಶ್ನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦.

೨೧. ಚಂದ್ರ ಪೂಜಾರಿ ಎಂ., **ಸಂಶೋಧನ ಪ್ರಸ್ತಾವ, ಮಂಟಪ ಮಾಲೆ–೧೫೪,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧.

೨೨. ಚಂದ್ರ ಪೂಜಾರಿ ಎಂ., **ಸಂಶೋಧಕರು ಮತ್ತು ಕ್ಷೇತ್ರಕಾರ್ಯ, ಮಂಟಪ ಮಾಲೆ–೧೨೮,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೨೩. ಚಂದ್ರ ಪೂಜಾರಿ ಎಂ., **ಪರ್ಯಾಯ ಸಮಾಜ ಜ್ಞಾನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨.

೨೪. ಚಂದ್ರಶೇಖರ್ ಎಸ್., **ಆಧುನಿಕ ಕರ್ನಾಟಕದ ಆಂದೋಲನಗಳು,** ನಮ್ಮ ಪ್ರಕಾಶನ, ತಿಪಟೂರು, ೨೦೦೨.

೨೫. ಚಂದ್ರಶೇಖರ್ ಎಸ್., **ಅಂಬೇಡ್ಕರ್ ಮತ್ತು ಗಾಂಧಿ,** ಅಕ್ಷರ ಪ್ರಕಾಶನ, ಹೆಗ್ಗೋಡು, ೧೯೯೨.

೨೬. ಚಂದ್ರಪ್ಪ, ದುಷಂತ್ ಎಂ., **ಹಂಡಿ ಜೋಗಿ, ಅಲೆಮಾರಿ ಸಮುದಾಯಗಳ ಅಧ್ಯಯನ ಮಾಲೆ,** ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ೨೦೦೮.

೨೭. ಚಿದಾನಂದಮೂರ್ತಿ ಎಂ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಚಿದಾನಂದ ಸಮಗ್ರ ಸಂಪುಟ–೧,** ಸಪ್ನ ಬುಕ್‌ಹೌಸ್, ಬೆಂಗಳೂರು, ೨೦೧೬.

೨೮. ಚಿದಾನಂದಮೂರ್ತಿ ಎಂ., **ಮಧ್ಯಕಾಲೀನ ಕರ್ನಾಟಕ ಮತ್ತು ಅಸ್ಪೃಶ್ಯತೆ,** ಸಪ್ನ ಬುಕ್ ಹೌಸ್, ಬೆಂಗಳೂರು, ೨೦೧೧.

